# ಚಿದಂಬರ ರಹಸ್ಯ

**ಕೆ.ಪಿ. ಪೂರ್ಣಚಂದ್ರ ತೇಜಸ್ವಿ**

ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

**CHIDAMBARA RAHASYA** : A Novel Written by **K.P. Purnachandra Tejasvi**, Published by **Manu Baligar**, Director, Department of Kannada and Culture, Kannada Bhavana, J.C.Road, Bengaluru - 560 002.



ಮುದ್ರಿತ ವರ್ಷ : ೨೦೧೧
ಪ್ರತಿಗಳು : ೧೦೦೦
ಪುಟಗಳು : XIV + ೨೫೬
ಬೆಲೆ : ರೂ. ೬೫/–

ರಕ್ಷಾಪುಟ ವಿನ್ಯಾಸ : **ಕೆ. ಚಂದ್ರನಾಥ ಆಚಾರ್ಯ**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೬೨೪



**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು

ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು ೫೬೦ ೦೦೧

ಸಿಎಂ/ಪಿಎಸ್/೨೬/೧೧

## ಶುಭ ಸಂದೇಶ

ವಿಶ್ವಕನ್ನಡ ಸಮ್ಮೇಳನದ ಸಂಭ್ರಮಾಚರಣೆಯ ಸಂದರ್ಭದಲ್ಲಿ ಕನ್ನಡ ನಾಡು ಏಕೀಕರಣಗೊಂಡು ೫೫ನೇ ವರ್ಷಕ್ಕೆ ಹೆಜ್ಜೆಯನ್ನಿಟ್ಟಿದೆ. ಈ ಸಂದರ್ಭವನ್ನು ರಚನಾತ್ಮಕವಾಗಿ ದಾಖಲಿಸಿ ಸ್ಮರಣೀಯಗೊಳಿಸಬೇಕೆಂಬುದು ಸರ್ಕಾರದ ಮಹದಾಶಯ. ಅದಕ್ಕಾಗಿ ಬೆಳಗಾವಿಯಲ್ಲಿ **"ವಿಶ್ವಕನ್ನಡ ಸಮ್ಮೇಳನ"** ವನ್ನು ಇದೇ ಮಾರ್ಚ್ ತಿಂಗಳಿನಲ್ಲಿ ಆಯೋಜಿಸಲಾಗಿದೆ. ಇದನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುವುದು ಕರ್ನಾಟಕ ಸರ್ಕಾರದ ಆಶಯವಾಗಿದೆ. ಇದರ ಅಂಗವಾಗಿ ನಾಡಿನ ವಿವಿಧ ಕ್ಷೇತ್ರಗಳಲ್ಲಾಗಿರುವ ಪ್ರಗತಿಯ ಆತ್ಮಾವಲೋಕನದ ಜೊತೆಗೆ ಕನ್ನಡ ಸಾಹಿತ್ಯದ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ೧೦೦ ಕೃತಿಗಳನ್ನು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಪ್ರಕಟಿಸಲಾಗುತ್ತಿದೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಯಲ್ಲಿ ಸಾಹಿತ್ಯಾಸಕ್ತರಿಗೆ ಒದಗಿಸುವ ಹಂಬಲ ನಮ್ಮದು.

ಈ ಸಾಹಿತ್ಯ ಮಾಲಿಕೆಯಲ್ಲಿನ ಕೃತಿರತ್ನಗಳನ್ನು ಕನ್ನಡಿಗರು ಸಹೃದಯತೆಯಿಂದ ಸ್ವಾಗತಿಸುವ ಮೂಲಕ ಇವುಗಳ ಪ್ರಯೋಜನವನ್ನು ಪಡೆದುಕೊಂಡರೆ ಸರ್ಕಾರದ ಈ ಯೋಜನೆ ಸಾರ್ಥಕವಾಗುತ್ತದೆ ಎಂದು ಭಾವಿಸುತ್ತೇನೆ.

ದಿನಾಂಕ ೨೪.೦೧.೨೦೧೧

**(ಬಿ.ಎಸ್. ಯಡಿಯೂರಪ್ಪ)**

ಕರ್ನಾಟಕ ಸರ್ಕಾರ

**ಗೋವಿಂದ ಎಂ. ಕಾರಜೋಳ**
ಕನ್ನಡ ಮತ್ತು ಸಂಸ್ಕೃತಿ,
ಸಣ್ಣ ನೀರಾವರಿ ಹಾಗೂ ಜವಳಿ ಸಚಿವರು

ವಿಧಾನಸೌಧ
ಬೆಂಗಳೂರು – ೦೧

# ಶುಭ ಸಂದೇಶ

## ಚೆನ್ನುಡಿ

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಸುಮಾರು ೧೦೦ ಕನ್ನಡದ ಮೇರುಕೃತಿಗಳನ್ನು ಮರುಮುದ್ರಿಸಲು ಉದ್ದೇಶಿಸಿರುತ್ತದೆ.

ಈ ಯೋಜನೆಯಡಿ ಕನ್ನಡ ಸಾಹಿತ್ಯದ ಬೇರೆ ಬೇರೆ ಕಾಲಘಟ್ಟಗಳಲ್ಲಿ ರಚನೆಗೊಂಡ ಕಥೆ, ಕಾದಂಬರಿ, ವಿಚಾರ ಸಾಹಿತ್ಯ, ಪ್ರಬಂಧ, ವಿಮರ್ಶೆ, ನಾಟಕ, ಕವನ ಸಂಕಲನ– ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳ ಕೆಲವು ಪ್ರಾತಿನಿಧಿಕ ಕೃತಿಗಳನ್ನು ಪ್ರಕಟಿಸಲಾಗುತ್ತಿದೆ. ಈ ಪ್ರಾತಿನಿಧಿಕ ಕೃತಿಗಳನ್ನು ಸರ್ಕಾರದಿಂದ ರಚಿತವಾದ ಆಯ್ಕೆ ಸಮಿತಿಯು ಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಕೃತಿಗಳನ್ನು ಮುದ್ರಣಕ್ಕೆ ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಎಲ್ಲಾ ವಿದ್ವಾಂಸರಿಗೂ ನನ್ನ ಧನ್ಯವಾದಗಳು. ಈ ಮಹತ್ವದ ಕೃತಿಗಳನ್ನು ಸಹೃದಯ ಕನ್ನಡಿಗರಿಗೆ ಸುಲಭ ಬೆಲೆಯಲ್ಲಿ ತಲುಪಿಸಬೇಕೆಂಬುದು ನಮ್ಮ ಹೆಗ್ಗುರಿಯಾಗಿರುತ್ತದೆ. ಕನ್ನಡ ಸಾಹಿತ್ಯದ ಮೈಲಿಗಲ್ಲುಗಳಾಗಿರುವ ಈ ಪುಸ್ತಕಗಳು ಭಾವಿ ಪೀಳಿಗೆಯವರಿಗೆ ದಾರಿದೀಪಗಳಾಗಿವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಹಾಗೂ ವಿದ್ಯಾರ್ಥಿಗಳು ಪಡೆದರೆ ನಮ್ಮ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ದಿನಾಂಕ ೧೮.೧.೨೦೧೧

**(ಗೋವಿಂದ ಎಂ. ಕಾರಜೋಳ)**



## ಎರಡು ನುಡಿ

ಕರ್ನಾಟಕ ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ 'ವಿಶ್ವಕನ್ನಡ ಸಮ್ಮೇಳದ'ದ ಅಂಗವಾಗಿ ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿರುವ ಸಾಹಿತಿಗಳ ಮಹತ್ವದ ಕೃತಿಗಳನ್ನು ಓದುಗರಿಗೆ ಒದಗಿಸಬೇಕೆಂಬ ಸದಾಶಯ ಹೊಂದಿರುತ್ತದೆ. ಈ ಯೋಜನೆಯಡಿ ಸುಮಾರು ೧೦೦ ಕೃತಿಗಳನ್ನು ಪ್ರಕಟಿಸಲು ಉದ್ದೇಶಿಸಿದೆ.

ಈ ಕೃತಿಗಳನ್ನು ಆಯ್ಕೆಮಾಡಲು ಖ್ಯಾತ ವಿದ್ವಾಂಸರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್‌ರವರ ಅಧ್ಯಕ್ಷತೆಯಲ್ಲಿ ನಾಡಿನ ಹೆಸರಾಂತ ಸಾಹಿತಿ / ವಿದ್ವಾಂಸರುಗಳನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸಿದೆ. ಈ ಆಯ್ಕೆ ಸಮಿತಿಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಗೆ ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಬಂದ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆ ಮಾಡಿರುತ್ತದೆ. ಆಯ್ಕೆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ಸರ್ಕಾರದ ಪರವಾಗಿ ವಂದನೆಗಳು ಸಲ್ಲುತ್ತವೆ. ಈ ಪುಸ್ತಕಗಳನ್ನು ಹೊರತರಲು ಅನುಮತಿ ನೀಡಿ ಸಹಕರಿಸಿದ ಎಲ್ಲಾ ಲೇಖಕರು ಹಾಗೂ ಹಕ್ಕುದಾರರುಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಕನ್ನಡದ ಮೇರುಕೃತಿ ಸಾಹಿತ್ಯ ಮಾಲಿಕೆಯನ್ನು ಓದುಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ದಿನಾಂಕ ೧೭.೦೧.೨೦೧೧

**(ರಮೇಶ್ ಬಿ.ಝುಳಕಿ)**
ಸರ್ಕಾರದ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

## ಅಧ್ಯಕ್ಷರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳನ್ನು ಪುನರ್‌ಮುದ್ರಣ ಮಾಡಲು ಒಂದು ಯೋಜನೆಯನ್ನು ಕೈಗೊಂಡಿತು. ಕೃತಿಗಳ ಆಯ್ಕೆಗಾಗಿ ಸರ್ಕಾರವು ಒಂದು ಸಮಿತಿಯನ್ನು ರಚಿಸಿತು. ಈ ಮಹತ್ವದ ಯೋಜನೆಯ ಸಮಿತಿಯ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವ ಸುಯೋಗ ನನ್ನದಾಯಿತು.

ಈ ಯೋಜನೆಯ ಮಹತ್ವವನ್ನು ನಾನು ವಿವರಿಸುವ ಅಗತ್ಯವಿಲ್ಲ. ಕನ್ನಡದ ಶ್ರೇಷ್ಠ ಕೃತಿಗಳನ್ನು ಸುಲಭ ಬೆಲೆಗೆ ಕನ್ನಡಿಗರ ಕೈಗಳಲ್ಲಿರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವು ಯೋಜನೆಗಳನ್ನು ಕೈಗೊಂಡಿರುವುದಕ್ಕಾಗಿ ಸರ್ಕಾರವನ್ನೂ ಇಲಾಖೆಯನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಕನ್ನಡ ಸಂಸ್ಕೃತಿಗೆ ಈ ಯೋಜನೆಗಳು ಮಹತ್ವದ ಕೊಡುಗೆಯನ್ನು ನೀಡುತ್ತಿವೆ.

ಕನ್ನಡದ ಮೇರುಕೃತಿಗಳನ್ನು ಆರಿಸುವುದು ಸುಲಭದ ಕೆಲಸವಲ್ಲ. ಇಂತಹ ಆಯ್ಕೆಯಲ್ಲಿ ಬೇರೆ ಬೇರೆ ಅಭಿಪ್ರಾಯಗಳಿಗೆ ಸಾಧಾರವಾಗಿಯೇ ಅವಕಾಶವಿರುತ್ತದೆ. ಕನ್ನಡ ನಾಡಿನ ಶ್ರೇಷ್ಠ ಸಾಹಿತಿಗಳು ಈ ಸಮಿತಿಯ ಸದಸ್ಯರಾಗಿದ್ದದ್ದು ಸುದೈವದ ಸಂಗತಿ. ಕೃತಿಗಳನ್ನು ಚರ್ಚಿಸಿ ಮಹತ್ವದ ನಿರ್ಧಾರಕ್ಕೆ ಬಂದ ಸಮಿತಿಯು ಸಾಧ್ಯವಾದ ಕಾರ್ಯವನ್ನು ಸಾಧಿಸಿದೆ. ಇದಕ್ಕಾಗಿ ನಾನು ಸಮಿತಿಯ ಎಲ್ಲ ಸದಸ್ಯರಿಗೂ ಕೃತಜ್ಞನಾಗಿದ್ದೇನೆ.

ಈ ಕಾರ್ಯದ ನಿರ್ವಹಣೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರು ನೆರವಾಗಿದ್ದಾರೆ. ಅವರ ಮತ್ತು ಅವರ ಸಿಬ್ಬಂದಿಯವರ ಅಮೂಲ್ಯ ಸಹಕಾರಕ್ಕೆ ನಾನು ಕೃತಜ್ಞ.

ಕನ್ನಡ ನಾಡಿನ ಮನೆಮನೆಗಳು ಸಾಹಿತ್ಯದ ಮಂಗಳ ದೀಪದ ಬೆಳಕನ್ನು ಹರಡುವ ಈ ಯೋಜನೆಯ ಪೂರ್ಣಪ್ರಯೋಜನವನ್ನು ಕನ್ನಡಿಗರು ಪಡೆದುಕೊಳ್ಳಲಿ ಎಂದು ಹಾರೈಸುತ್ತೇನೆ.

ಸಿರಿಗನ್ನಡಂ ಗೆಲ್ಗೆ!

**ಎಲ್.ಎಸ್. ಶೇಷಗಿರಿ ರಾವ್**
ಅಧ್ಯಕ್ಷ
ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

ದಿನಾಂಕ ೧೬.೧೨.೨೦೧೦



## ಪ್ರಕಾಶಕರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ 'ವಿಶ್ವಕನ್ನಡ ಸಮ್ಮೇಳನ'ದ ಅಂಗವಾಗಿ ಸುಮಾರು ನೂರು ಪುಸ್ತಕಗಳನ್ನು ಪ್ರಕಟಿಸಲು ಉದ್ದೇಶಿಸಿರುತ್ತದೆ. ಈ ಯೋಜನೆಯಡಿ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಈ ಮೂರೂ ಕಾಲಘಟ್ಟಗಳಲ್ಲಿ ರಚನೆಗೊಂಡ, ಕನ್ನಡದಲ್ಲಿ ಮಹತ್ವದ ಕೃತಿಗಳೆಂದು ಪರಿಗಣಿತವಾಗಿರುವ ಪುಸ್ತಕಗಳನ್ನು ಸರ್ಕಾರವು ನೇಮಿಸಿರುವ ಆಯ್ಕೆ ಸಮಿತಿಯು ಮರುಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಸಾಹಿತ್ಯ ಮಾಲೆಯಲ್ಲಿ ಈಗಾಗಲೇ ಇಲಾಖೆಯು ಸಮಗ್ರ ಸಾಹಿತ್ಯ ಪ್ರಕಟಣೆಯಡಿ ಪ್ರಕಟಿಸಿರುವ ಲೇಖಕರ ಕೃತಿಗಳನ್ನು ಪರಿಗಣಿಸಿರುವುದಿಲ್ಲ.

ಕನ್ನಡದ ಮೇರುಕೃತಿಗಳ ಮರುಮುದ್ರಣಕ್ಕೆ ಪುಸ್ತಕಗಳನ್ನು ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಅಧ್ಯಕ್ಷರಾದ ಪ್ರೊ: ಎಲ್.ಎಸ್. ಶೇಷಗಿರಿ ರಾವ್‌ರವರಿಗೆ ಹಾಗೂ ಸಮಿತಿಯ ಸದಸ್ಯರುಗಳಾದ ಡಾ. ಚಂದ್ರಶೇಖರ ಕಂಬಾರ, ಡಾ. ಹಂಪ ನಾಗರಾಜಯ್ಯ, ಡಾ. ಎಂ.ಎಂ.ಕಲಬುರ್ಗಿ, ಡಾ. ದೊಡ್ಡರಂಗೇಗೌಡ, ಡಾ. ಎಚ್.ಜೆ. ಲಕ್ಕಪ್ಪಗೌಡ, ಡಾ. ಅರವಿಂದ ಮಾಲಗತ್ತಿ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಡಾ. ಪಿ.ಎಸ್. ಶಂಕರ್, ಶ್ರೀಮತಿ ಸಾರಾ ಅಬೂಬಕರ್, ಡಾ. ಪ್ರಧಾನ್ ಗುರುದತ್ತ ಇವರುಗಳಿಗೆ ನನ್ನ ಕೃತಜ್ಞತೆಗಳು. ಈ ಯೋಜನೆಯಡಿ ಮರುಮುದ್ರಣಕ್ಕೆ ಆಯ್ಕೆಯಾಗಿರುವ ಪುಸ್ತಕಗಳ ಮುದ್ರಣಕ್ಕೆ ಅನುಮತಿ ನೀಡಿದ ಎಲ್ಲ ಲೇಖಕರಿಗೂ, ಹಕ್ಕುದಾರರಿಗೂ ಮತ್ತು ಕರಡಚ್ಚು ತಿದ್ದಿದವರಿಗೂ ನನ್ನ ವಂದನೆಗಳು.

ಸದರಿ ಪ್ರಕಟಣಾ ಯೋಜನೆಯ ಪುಸ್ತಕಗಳನ್ನು ಹೊರತರಲು ಸಹಕರಿಸಿದ ಶ್ರೀ ಎಚ್. ಶಂಕರಪ್ಪ, ಜಂಟಿ ನಿರ್ದೇಶಕರು, (ಸು.ಕ.), ಶ್ರೀಮತಿ ವೈ.ಎಸ್.ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು ಹಾಗೂ ಪ್ರಕಟಣಾ ಶಾಖೆಯ ಸಿಬ್ಬಂದಿಗೆ ನನ್ನ ನೆನಕೆಗಳು. ವಿಶ್ವಕನ್ನಡ ಸಮ್ಮೇಳನದ ಲಾಂಛನವನ್ನು ಸಿದ್ಧಪಡಿಸಿಕೊಟ್ಟ ಹಿರಿಯಕಲಾವಿದರಾದ ಶ್ರೀ ಸಿ. ಚಂದ್ರಶೇಖರ ಅವರಿಗೂ ನನ್ನ ನೆನಕೆಗಳು ಹಾಗೂ ಈ ಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರಾದ

ಶ್ರೀ ಬಿ.ಎಲ್. ಶ್ರೀನಿವಾಸ್ ಮತ್ತು ಸಿಬ್ಬಂದಿ ವರ್ಗದವರಿಗೂ ನನ್ನ ನೆನಕೆಗಳು.

ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಓದುಗರಿಗೆ ಹಲವಾರು ವರ್ಷಗಳಿಂದ ದೊರಕದೇ ಇದ್ದ ಎಷ್ಟೋ ಪುಸ್ತಕಗಳು ಲಭ್ಯವಾಗುತ್ತಿರುವುದು ಹೆಮ್ಮೆಯ ಸಂಗತಿ. ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಸಾಹಿತ್ಯಾಭಿಮಾನಿಗಳಿಗೆ ಅಕ್ಷರದಾಸೋಹ ನಡೆಸುವ ಆಶಯ ನಮ್ಮದು. ಈ ಕೃತಿಗಳನ್ನು ಕನ್ನಡಿಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ಮನು ಬಳಿಗಾರ್

ದಿನಾಂಕ ೧೧.೦೧.೨೦೧೧

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ



## ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

## ಪರಿವಿಡಿ

# ಅಧ್ಯಾಯ ೧



"ಒಟ್ಟಿನಲ್ಲಿ ಕ್ರಾಂತಿ ಆಗಬೇಕಪ್ಪ!" ಎಂದು ನಿಟ್ಟುಸಿರು ಬಿಡುತ್ತಾ ಜೋಸೆಫ್ ಅಂಗಾರ ತನಗೆ ತಾನೆ ಎಂಬಂತೆ ಹೇಳಿಕೊಂಡ.

ಕೆಸರೂರಿನ ಪೇಟೆಯ ಕೊನೆಯಲ್ಲಿ ಹಾಕಿದ್ದ ಕಲ್ಲುಬೆಂಚಿನ ಮೇಲೆ ನಾಲ್ವರು ಮಿತ್ರವರ್ಯರು ಕುಳಿತುಕೊಂಡು ಅಂತಿಮವಾಗಿ ಈ ತೀರ್ಮಾನಕ್ಕೆ ಬಂದಿದ್ದರು. ಕೆಸರೂರಿನ ಜ್ಯೂನಿಯರ್ ಕಾಲೇಜಿನ ಅರ್ಥಶಾಸ್ತ್ರ ಅಧ್ಯಾಪಕ ಡಾ॥ ರಾಮಚಂದ್ರನ ಪಟ್ಟಶಿಷ್ಯರಾದ ಈ ನಾಲ್ವರಿಗೂ ಹಲವು ದಿನದ ಶಿಷ್ಯವೃತ್ತಿಯ ನಂತರ ಒದಗಿದ ಜ್ಞಾನೋದಯ ಇದು. ಇದಕ್ಕೆ ಕಾರಣ ಆರ್ಥಿಕ ಒತ್ತಡವೊ! ಸಾಮಾಜಿಕ ಕಳಕಳಿಯೋ! ರಾಜಕೀಯ ಮಹತ್ವಾಕಾಂಕ್ಷೆಯೋ ಎಂಬುದು ಅವರಿಗೂ ತಿಳಿಯದ ವಿಷಯವಾಗಿತ್ತು. ಅವರು ನಾಲ್ವರೂ ಮೊದಲು ಇಂಗ್ಲಿಷ್ ಅಧ್ಯಾಪಕ ಜೀವಣ್ಣನ ಶಿಷ್ಯವೃತ್ತಿ ಮಾಡುತ್ತಾ ದಾರಿಯಲ್ಲಿ ಹೋಗಿ ಬರುವ ಕೆಸರೂರಿನ ಹುಡುಗಿಯರನ್ನೆಲ್ಲಾ ಪ್ರೀತಿಸಿ ಪ್ರೀತಿಸಿ ಸುಸ್ತಾಗಿ "ಲಾಚಾರ್" ಆಗಿಹೋಗಿದ್ದರು. ಸೂಟು ಹಾಕಿ, ಬೂಟು ಹಾಕಿ, ಟೈ ಕಟ್ಟಿ, ಸಿಗರೇಟು ಎಳೆದು, ಸಿಳ್ಳೆ ಹೊಡೆದು, ಕೆಮ್ಮಿ ಅಡ್ಡಾಡಿ ನಮುನಮೂನೆಯ ಪೋಸುಗಳಲ್ಲಿ ನಿಂತು ಏನೇನು ಮಾಡಿದರೂ ಒಬ್ಬ ಮನದನ್ನೆಯ ಮನದ ಮೇಲೂ ಪರಿಣಾಮ ಬೀರಲಾರದೆ ಕೊನೆಗೆ ಅವನ್ನೆಲ್ಲಾ ತೆಗೆದೆಸೆದು ಖಾದಿ ಜುಬ್ಬಾ ಪೈಜಾಮಕ್ಕೆ ಇಳಿದು ರಾಮಚಂದ್ರನ ಶಿಷ್ಯರಾಗಿದ್ದರು.

ಅವರಿಗೆ ಈಗ ಯೋಚಿಸಿಕೊಂಡರೆ ನಿಜವಾಗಿಯೂ ಬೇಸರ ತರಿಸುತ್ತಿದ್ದುದು ಇಂಗ್ಲಿಷ್ ಅಧ್ಯಾಪಕರು ಪಾಠಮಾಡುತ್ತ ಹೇಳುತ್ತಿದ್ದ ಸುಂದರ ಪ್ರೇಮ ಗೀತೆಗಳು, ಕತೆಗಳು ಹಾಗೂ ಕನ್ನಡ ಮತ್ತು ಹಿಂದಿಯ ಪ್ರೇಮಕತೆಯ ಚಲನ ಚಿತ್ರಗಳು. ಅವೆಲ್ಲಾ ಬೇರೊಂದು ಲೋಕದ ಪುರಾಣಗಳೆಂದು ಅವರಿಗೆ ಈಗ ಮನದಟ್ಟಾಗತೊಡಗಿತ್ತು. ಅವರ ಎದೆಯೊಳಗಿನ ಅದಮ್ಯ ಪ್ರೇಮ ಶರಧಿಯನ್ನೂ, ತ್ಯಾಗಮಯತೆಯನ್ನೂ, ಸಾಹಸ ಪ್ರಿಯತೆಯನ್ನೂ ಅರಿಯುವ ಯೋಗ್ಯತೆ ಈ ಕೆಸರೂರಿನ ಹುಡುಗಿಯರಿಗೆ ಇಲ್ಲ ಇನ್ನುವ ತೀರಾ ವಿಷಾದಕರ ನಿರ್ಣಯಕ್ಕೆ ಅವರು ಬಂದಿದ್ದರು. ಆದರೆ ಅವರಿಗೆ ಇದಕ್ಕಿಂತ ಮಿಗಿಲಾಗಿ ಅವರ ಅವ್ಯಕ್ತ ಪ್ರೇಮದ ಅಮೂಲ್ಯತೆಯನ್ನರಿಯದ ಆ ಹುಡುಗಿಯರು ಕಿಸಿಕಿಸಿ ನಗುತ್ತಾ, ಮರೆಯಲ್ಲಿ ನರಿಗಳಂತೆ ನಿಂತು ಏನನ್ನೋ ಪಿಸುಗುಟ್ಟುವ ಗೂಬೆ ಹುಡುಗರೊಡನೆ ಮಾತನಾಡುವುದನ್ನು ನೋಡಿದರಂತೂ ಹೊಟ್ಟೆ ತೊಳಸಿಬರುತ್ತಿತ್ತು. ಇವೆಲ್ಲದೆ ಒಟ್ಟಿನ ಪರಿಣಾಮವಾಗೇ ಅವರು ಅಲ್ಲಿ ಕುಳಿತುಕೊಂಡು ಇಡೀ ಸಮಾಜದ ಅನ್ಯಾಯ ಅಸಮಾನತೆ ಕಂದಾಚಾರ ಶೋಷಣೆಗಳೆಲ್ಲದರ ಮೇಲೆ ರೋಷಗೊಂಡು "ಒಟ್ಟಿನಲ್ಲಿ ಕ್ರಾಂತಿಯಾಗಬೇಕು" ಎಂಬ ಒಂದು ಸರ್ವಾನುಮತದ ನಿರ್ಣಯ ತಗೊಂಡರು. ಆ ನಿರ್ಣಯದಿಂದ ಅವರ ಮನಸ್ಸಿಗೆ ಎಷ್ಟೋ ಸಮಾಧಾನ ಮತ್ತು ನೆಮ್ಮದಿ ಬರತೊಡಗಿತ್ತು.

ಹಿಂದೊಮ್ಮೆ ಜಾತಿವಿನಾಶ ಕಾರ್ಯಕ್ರಮ ಹಾಕಿ ಅಂತರ್ಜಾತೀಯ ವಿವಾಹವಾಗಬೇಕು, ಜಾತಿಗಳನ್ನೂ ಕಂದಾಚಾರವನ್ನೂ ಮೂಢನಂಬುಗೆಗಳನ್ನೂ ತಿರಸ್ಕರಿಸಬೇಕು ಎಂದೆಲ್ಲಾ ತೀರ್ಮಾನ ತಗೊಂಡಾಗಲೂ ಅವರಿಗೆ ತಾತ್ಕಾಲಿಕವಾಗಿಯಾದರೂ ಹೀಗೇ ನೆಮ್ಮದಿಯಾಗಿತ್ತು. ಅದರೇನು ಮಾಡುವುದು! ಈ ತೀರ್ಮಾನ ತೆಗೆದುಕೊಂಡ ಆ ಯುವ ಸಮುದಾಯದಲ್ಲಿ ಯಾವ ಯುವತಿಯೂ ಇರಲಿಲ್ಲ. ಇವರಲ್ಲಿ ಹೊತ್ತಿ ಉರಿಯುತ್ತಿದ್ದ ಪ್ರೀತಿಯ ದಾವಾಗ್ನಿಯನ್ನು ಕಂಡರೇ ಹುಡುಗಿಯರು ದಿಗಿಲುಬಿದ್ದು ಹತ್ತಿರ ಬರುತ್ತಿರಲಿಲ್ಲ. ಹುಡುಗಿಯರೂ ಇವರಂತೆಯೇ ಏಕಕಾಲದಲ್ಲಿ ತೀರ್ಮಾನ ತಗೊಳ್ಳದ ಕಾರಣ ಈ ಹುಡುಗರು ತಮ್ಮ ತೀರ್ಮಾನಗಳನ್ನು ಜಾರಿಗೆ ತರಲು ಸಾಧ್ಯವೇ ಆಗಲಿಲ್ಲ. ಆದರೆ ಈಗ ಹಾಗಲ್ಲ. ಕ್ರಾಂತಿಗೆ ಏಕಪಕ್ಷೀಯ ತೀರ್ಮಾನವೇ ಸಾಕು! ಕೆಸರೂರಿನ ದ್ರೋಹಿ ಅಧಿಕಾರಶಾಹಿಗೂ ದಬ್ಬಾಳಿಕೆಗಾರರಿಗೂ ಮತ್ತು ಮುಖ್ಯವಾಗಿ ಕೆಸರೂರಿನ ಲಂಗದ ಹುಡುಗಿಯರಿಗೂ ಕ್ರಾಂತಿಯಿಂದ ಸರಿಯಾಗಿ ಬುದ್ಧಿ ಕಲಿಸಬಹುದೆಂದು ಅವರು ಆ ತೀರ್ಮಾನಕ್ಕೆ ಬಂದಿದ್ದರು.



ಅವರಲ್ಲೊಬ್ಬ ರಾಮಪ್ಪ, ಅವನದು ಕೊಂಚ ಬೆಕ್ಕಿನ ಕಣ್ಣು, ಕೆಂಚುಕೂದಲು. ಬೆಳ್ಳಗಿದ್ದ ಅವನನ್ನು ಎಲ್ಲರೂ ಇಂಗ್ಲಿಷ್‌ಗೌಡ ಎಂದೇ ಕರೆಯುತ್ತಿದ್ದರು. ಮೊದಮೊದಲು ಆ ಬಗ್ಗೆ ಹೆಮ್ಮೆ ಇದ್ದ ಅವನಿಗೆ ತನ್ನ ಪ್ರೀತಿಯ ಸಕಲ ಪ್ರಯತ್ನವೂ ಸೋಲತೊಡಗಿದಾಗ ತನ್ನ ಕೆಂಚು ಕೂದಲು ಬೆಕ್ಕಿನ ಕಣ್ಣಿನ ಬಗ್ಗೆ ಜುಗುಪ್ಸೆ ಬರತೊಡಗಿತು. ತನ್ನ ಅಜ್ಜಿಯೋ ಮುತ್ತಜ್ಜಿಯೋ ಯಾವಳೋ ಹಿಂದೆ ಇಲ್ಲಿದ್ದ ಯೂರೋಪಿಯನ್ನರ ಜೊತೆ ಮಲಗಿರಬೇಕು! ಹಡಬೆ ಲೌಡಿ! ಎಂದು ಪೀಳಿಗೆಯ ಪುರಾತನರನ್ನು ನೆನೆದು ಬಯ್ದುಕೊಂಡಿದ್ದ.

ಇನ್ನೊಬ್ಬ ಚಂದ್ರ, ಚೀನೀಯರ ತರಹ ಸಣ್ಣ ಕಣ್ಣು, ಚೆಂಗೇಸ್ ಖಾನನ ತರಹ ಮೀಸೆ, ಅದೂ ತುಟಿಯ ತುದಿಗಳಲ್ಲಿ ಮಾತ್ರ. ಗಡ್ಡ ಮೀಸೆ ಕ್ರಮಬದ್ಧವಾಗಿ ಮುಖದ ಮೇಲೆ ಉದ್ಭವಿಸಲಿಲ್ಲವಲ್ಲಾ ಎನ್ನುವ ಕಿರಿ ಕಿರಿ ಆತನಿಗೆ. ಯಾರೋ ಬ್ಲೇಡು ತಾಗಿಸಿದರೆ ಹುಡುಗಿಯರಿಗೂ ಮೀಸೆ ಬರುತ್ತದೆಂದು ಹೇಳಿದ್ದರಿಂದ ದಿನಕ್ಕೆ ನಾಲ್ಕು ಬಾರಿ ಗಡ್ಡ ಹೆರೆಯುತ್ತಿದ್ದ.

ಮತ್ತೊಬ್ಬ ಜೋಸೆಫ್ ಅಂಗಾರ. ಕೊಂಚ ಕಪ್ಪಗೆ ಕುಳ್ಳಗಿದ್ದ, ಈತನ ಕೂದಲು ನೀಗ್ರೋಗಳ ಕೂದಲಿನಂತೆ ಗುಂಗುರು ಸುತ್ತಿಕೊಂಡಿತ್ತು. ಕನ್ನಡ ಜಿಲ್ಲೆಯ ಕಡೆಯವನಾದ ಈತನ ಪೂರ್ವಿಕರು ಯಾರೋ ಹೊಲೆಯರ ಜಾತಿಯಿಂದ ಮತಾಂತರಗೊಂಡಿದ್ದರಿಂದಲೇ ಈತನ ತಂದೆ ರೋಡ್ರಿಕ್ಸರ ತೋಟದಲ್ಲಿ ರೈಟರಾಗಲು ಸಾಧ್ಯವಾಗಿದ್ದು. ಇಲ್ಲದಿದ್ದರೆ ಇಂದಿಗೂ ಅಂಗಾರನಿಗೆ ಈ ಮೂವರ ಮಧ್ಯೆ ಸಮಾನಸ್ಕಂಧನಂತೆ ಆತ್ಮಾಭಿಮಾನದಿಂದ ಕೂರಲು ಸಾಧ್ಯವಾಗುತ್ತಿರಲಿಲ್ಲ.

ನಾಲ್ಕನೆಯವನು ರಮೇಶ. ಚಿಕ್ಕಂದಿನಿಂದಲೇ ತಂದೆತಾಯಿಗಳನ್ನು ಕಳೆದುಕೊಂಡಿದ್ದ ಅವನು ಕೆಸರೂರಿನ ಶರಾಬು ಅಂಗಡಿಯಲ್ಲಿ ಶರಾಬು ಅಳೆದು ಕೊಡುವ ಕೆಲಸ ಮಾಡಿಕೊಂಡಿದ್ದ. ಕಾಲೇಜಿನ ಸಮಯ ಬಿಟ್ಟು ಉಳಿದೆಲ್ಲ ಸಮಯ ಬಹುಪಾಲು ಅಲ್ಲೇ ಆತ ಕಳೆಯಬೇಕಿತ್ತು. ಅಲ್ಲಿ ದಿನಾ ಕುಡುಕರ ಜೊತೆ ವ್ಯವಹರಿಸಿ, ಜೊತೆಗೆ ಕಳ್ಳಭಟ್ಟಿ ಕಾಯಿಸುವವರ ಮನೆ ರೈಡಿಂಗ್‌ಗಳಿಗೆಲ್ಲಾ ಹೋಗಿ ಅವನು ಒರಟು ಬಿದ್ದು ಹೋಗಿದ್ದ. ಅವನನ್ನು ಎಲ್ಲರೂ ರೌಡಿ ಎಂದು ತಿಳಿದಿದ್ದರು. ಇಷ್ಟಾದರೂ ರಮೇಶ ಮೂಲತಃ ಒಳ್ಳೆಯವನೇ ಆಗಿದ್ದು. ಶರಾಬಿನ ವ್ಯವಹಾರಗಳು, ಅಲ್ಲಿ ಅವರ ಲಂಚ, ವ್ಯಭಿಚಾರ ಇತ್ಯಾದಿಗಳನ್ನೆಲ್ಲಾ ನೋಡಿ ಅವನಿಗೆ ಇವೆಲ್ಲದರ ಮೇಲೆ ಆಳವಾದ ರೇಜಿಗೆ ಉಂಟಾಗಿತ್ತು. ಅವನಿಂದಲೇ ಮಿಕ್ಕ ಅವನ ಮೂವರು ಮಿತ್ರರಿಗೂ, ಗುರು ರಾಮಚಂದ್ರನಿಗೂ ಕೆಸರೂರಿನಲ್ಲಿ

ತುಂಬಿ ತುಳುಕುತ್ತಿದ್ದ ಅನಾಚಾರ, ಅತ್ಯಾಚಾರಗಳ ಪರಿಚಯವಾಗಿದ್ದು.

ಈ ನಾಲ್ವರಿಗೂ ಒಟ್ಟಿನಲ್ಲಿ ಕ್ರಾಂತಿಯಾಗಬೇಕಿತ್ತು ! ದೇಶ, ಸಮಾಜ, ಸರ್ಕಾರಗಳಿಗಿಂತ ಮುಖ್ಯವಾಗಿ ಬದಲಾವಣೆ ಬೇಕಾಗಿದ್ದು ಅವರಿಗೇ. ಪ್ರೀತಿಯ ಪ್ರೇಮದ ಶನಿ ಅವರಿಗೆ ಯಾವ ತರ ಹಿಡಿದತ್ತೆಂಬುದು ವರ್ಣಿಸಲಸದಳ. ಎಲ್ಲಾ ಧ್ವನಿಗಳು, ಆಕಾರಗಳು, ಮಾತಿನ ಅರ್ಥಗಳು, ಒನಕೆ, ಒರಳು, ಬಲ್ಬು, ಬಲೂನು, ಹಾರ್ನು, ಜೇಬು, ಪರ್ಸು, ಮೇಜು, ಡ್ರಾ ಮುಂತಾದವೆಲ್ಲವೂ ಪ್ರತೀಕಗಳಾಗಿ ಪ್ರತಿಯೊಂದರ ಮುಖಾಂತರವೂ ಕೆಸರೂರಿನ ಹುಡುಗಿಯರು ಯಮಯಾತನೆ ಕೊಡತೊಡಗಿದ್ದರು. ಅವರು ಎದುರು ಬಂದರೆ ಗಾಬರಿ ! ತಿರುಗಿ ಹೋದರೆ ಹತಾಶೆ ! ಇವರತ್ತ ತಿರುಗಿದರೆ ಏನಿದರರ್ಥ ಎಂಬ ಆತಂಕ, ನೋಡದಿದ್ದರೆ ತಮ್ಮ ಮೀಸೆ ಕ್ರಾಪು ರೂಪು ಆಕಾರಗಳ ಮೇಲೆಲ್ಲಾ ರೋಷ. ಇದು ಹೀಗೇ ಮುಂದುವರೆದಿದ್ದರೆ ಅವರಿಗೆ ಒಬ್ಬೊಬ್ಬರಿಗಾಗಿ ಖಾಯಿಲೆ ಹಿಡಿದು ಸಾಯುವುದು ಖಚಿತವಾಗಿತ್ತು.

ಇಂಥ ಸಂದರ್ಭಕ್ಕೆ ಸರಿಯಾಗಿ ಡಾ॥ ರಾಮಚಂದ್ರ ಕೆಸರೂರಿಗೆ ವರ್ಗವಾಗಿ ಬಂದ. ಬೇರೆಲ್ಲೋ ಆತ ಹುಡುಗರನ್ನು ಪ್ರೇರೇಪಿಸಿ ದೊಂಬಿಗೆ ಕಾರಣನಾದನೆಂದು ಆತನನ್ನು ಶಿಕ್ಷಿಸಲೋಸುಗವೇ ಕೆಸರೂರಿಗೆ ವರ್ಗ ಮಾಡಿದ್ದರು. ಆತ ಬರುವ ಮೊದಲೇ ಅಪಾರ ಪಾಂಡಿತ್ಯ ಉಳ್ಳ ಮೇಧಾವಿ ಎಂದು ಕೆಸರೂರಿನಲ್ಲಿ ಸುದ್ದಿಯಾಗಿತ್ತು. ಜೊತೆಗೆ ಆತ ಮೊದಲಿದ್ದ ಕಡೆ ಊರೆಲ್ಲಾ ದಂಗೆಯಾಗಲು ಆತನೇ ಕಾರಣನೆಂದೂ ಅವನು ನಕ್ಸಲ್‌ಬಾರಿ ಕಮ್ಯುನಿಸ್ಟನೆಂದೂ ಹಲವರು, ಮತ್ತೆ ಕೆಲವರು ಅವನು ಅಮೆರಿಕದ ಸಿಐಎ ಏಜೆಂಟನೆಂದೂ ಗುಸುಗುಸು ಮಾತಾಡುತ್ತಿದ್ದರು. ಬಂದಾಗ ನೋಡಿದ ನಮ್ಮ ಹುಡುಗರಿಗೆ ಆತ ಎಲ್ಲರ ತರ ನರಮನುಷ್ಯರಂತೆಯೇ ಇರುವುದನ್ನು ಕಂಡು ತುಂಬ ಸಮಾಧಾನವಾಗಿತ್ತು.

ಹುಡುಗರು ತಲೆದೂಗುವಂತೆ ಮಾತಾಡುವುದರಲ್ಲಿ ರಾಮಚಂದ್ರ ನಿಪುಣ, ಪ್ರೀತಿ, ಪ್ರೇಮ, ಮದುವೆ ಇವೆಲ್ಲ ಈ ನಾಶವಾಗುತ್ತಿರುವ ದೇಶದಲ್ಲಿ ಅರ್ಥಹೀನ, ಅಪ್ಪನ ಆಸ್ತಿಯ ಮೇಲೆ ಹೊಟ್ಟೆ ಹೊರೆಯುವ ಪರತಂತ್ರ ಜೀವಿಗೆ ಆತ್ಮವೇ ಇರುವುದಿಲ್ಲ. ದೇಶವನ್ನು ಪ್ರೀತಿಸುವವನು ಮಾತ್ರ ಹೆಣ್ಣನ್ನೂ ನಿಜವಾದ ಅರ್ಥದಲ್ಲಿ ಪ್ರೀತಿಸಬಲ್ಲ, ಎಂದೆಲ್ಲ ಗಂಭೀರವಾಗಿ ಕ್ಲಾಸಿನಲ್ಲೇ ರಾಮಚಂದ್ರ ಭಾಷಣ ಕೊರೆದ, ಸ್ತ್ರೀ ಸ್ವಾತಂತ್ರ್ಯ ಸಮಾನತೆ ಮುಂತಾದವುಗಳ ಮೇಲೆ ಹುಡುಗರಿಗೆ ಸಾಕಷ್ಟು ಭಾಷಣ ಕೊಟ್ಟ. ಅವನ ಮಾತಿಗೆ ಮೆಚ್ಚಿ ತಲೆದೂಗಿ ನಮ್ಮ ಕ್ರಾಂತಿಕಾರಿಗಳೂ ದೇಶವನ್ನು ಪ್ರೀತಿಸಲಾರಂಭಿಸಿದ್ದರು. ನಿಮ್ಮಲ್ಲಿ ನಿಜವಾದ ಪ್ರೀತಿ, ಆತ್ಮಗೌರವ,



ಅಭಿಮಾನ ಇದ್ದರೆ ನೀವು ಈ ದೇಶವನ್ನು ಪ್ರೀತಿಸಬೇಕು. ಎಂದರೆ ಈ ದೇಶವನ್ನು ಪ್ರೀತಿಸಲು ಯೋಗ್ಯವಾದ ದೇಶವನ್ನಾಗಿ ಬದಲಾಯಿಸಬೇಕು ಎಂದು ರಾಮಚಂದ್ರ ಹೇಳಿದ.

ಪಾಪ ನಮ್ಮ ಕ್ರಾಂತಿಕಾರಿಗಳಿಗೆ ನಿಜವಾದ ಪ್ರೀತಿಯೋ! ಖೋಟಾ ಪ್ರೀತಿಯೋ ಅಂತೂ ಒಟ್ಟಿನಲ್ಲಿ ಅದು ತುಂಬಿ ತುಳುಕುತ್ತಿತ್ತು. ಆದರೆ ಅದಕ್ಕೆ ಅಡ್ಡಿಯಾಗಿರುವವರು ನಮ್ಮ ದೇಶದ ಸಮಾಜ, ರಾಜಕಾರಣಿಗಳು, ಅಧಿಕಾರಶಾಹಿ, ಸರ್ಕಾರ ಇತ್ಯಾದಿಗಳೆಲ್ಲಾ ಎಂಬುದು ಗೊತ್ತಿರಲಿಲ್ಲ. ಅವರು ಈ ಕೆಸರೂರಿನ ಹುಡುಗಿಯರೇ ಗಟ್ಟಿ ಮನಸ್ಸಿನಿಂದ ಧೈರ್ಯ ಮಾಡುತ್ತಿಲ್ಲ, ಅಷ್ಟೇ ಎಂದು ತಿಳಿದಿದ್ದರು. ಆದರೆ ರಾಮಚಂದ್ರನ ಶಿಷ್ಯರಾದ ಅನಂತರ ಅವನ ಹೊಸ ತರ್ಕದಿಂದ ಗೊತ್ತಾಯ್ತು, ಈ ತಾಶೀಲ್ದಾರ, ಬಿಡಿಓ, ಡಿಸಿ, ಸಂಪನ್ನ ಶ್ರೀಮಂತರು, ಬಡ್ಡಿ ವಸೂಲಿ ಮಾರ್ವಾಡಿಗಳು, ಎಲ್ಲ ತಮ್ಮ ಅದೃಶ್ಯ ಹಸ್ತದಿಂದ ಅಡ್ಡಿಪಡಿಸುತ್ತಿರುವ ವೈರಿಗಳೆಂದು. ಇದನ್ನೆಲ್ಲಾ ಸೂತ್ರೀಕರಿಸಿಯೇ ಅವರು "ಒಟ್ಟಿನಲ್ಲಿ ಕ್ರಾಂತಿಯಾಗಬೇಕೆಂಬ" ಎಂಬ ಒಮ್ಮತದ ತೀರ್ಮಾನಕ್ಕೆ ಬಂದಿದ್ದು.

ಅವರ ಮುಂದಿನ ಕಾರ್ಯಕ್ರಮ ಏನೇ ಇರಲಿ, ಅವರ ಈ ತೀರ್ಮಾನವಂತೂ ಅವರ ಮನಸ್ಸಿಗೆ ನೆಮ್ಮದಿ ತಂದಿತ್ತು. ಕುಳಿತಾಗ ನಿಂತಾಗ ಪ್ರತಿಯೊಂದು ನಾಡಿ ತುಡಿತದೊಳಗೂ ಹೃದಯದ ಮಿಡಿತದೊಳಗೂ ಹೊಕ್ಕು ಪೀಡಿಸುತ್ತಿದ್ದ ಕೆಸರೂರಿನ ಹುಡುಗಿಯರ ಕಾಟವನ್ನು ಕೊಂಚ ಶಮನ ಮಾಡಿತ್ತು.



# ಅಧ್ಯಾಯ ೨

"ಹಲೋ! ಗುಡ್ ಈವನಿಂಗ್! ಮೈ ನೇಮ್ ಈಸ್ ಅಂಗಾಡಿ. ಶಾಮನಂದನ ಅಂಗಾಡಿ," ಎನ್ನುತ್ತ ಒಂದು ಎತ್ತರದ ಆಕೃತಿ ಕೆಸರೂರಿನ ವಿಶ್ವಭವನ ಕಾಫಿ ಬಾರಿನ ಮೆಟ್ಟಲು ಹತ್ತಿ ಅದರ ಮೂಲೆಯೊಂದರಲ್ಲಿ ಟೇಬಲ್ಲಿನ ಸುತ್ತ ಕುಳಿತಿದ್ದ ಮೂವರ ಹತ್ತಿರ ಬಂದು ನಿಂತಿತು. ಅವರು ಮೂರು ಜನ ಕಾಫಿ ಕುಡಿಯುತ್ತಾ ಕೆಲಹೊತ್ತಿನಿಂದ ಮಾತಾಡುತ್ತಾ ಕುಳಿತಿದ್ದರು. ಅವರು ಬಂದ ಆ ಆಗಂತುಕ ವ್ಯಕ್ತಿಯ ವಿಚಿತ್ರ ಹಾವಭಾವವನ್ನೂ ವಿಲಕ್ಷಣ ಕನ್ನಡ ಮಾತನ್ನೂ ಗಮನಿಸಿ ಚಕಿತರಾದರು. ಅವರಿಗೆ ಬಂದ ವ್ಯಕ್ತಿಗೆ ಯಾವ ರೀತಿ ಪ್ರತಿಕ್ರಿಯೆ ತೋರಬೇಕೆಂದೇ ತೋಚಲಿಲ್ಲ. ಬಂದ ವ್ಯಕ್ತಿ "ತಮ್ಮ ಪರಿಚಯ ಏನನ್ನೂ ಹೇಳಿಕೊಳ್ಳೋದು ಬೇಡ. ನಾನು ನಿಮ್ಮನ್ನೆಲ್ಲಾ ಚೆನ್ನಾಗಿ ಬಲ್ಲೆ" ಎಂದ. ಟೇಬಲ್ಲಿನ ಸುತ್ತ ಕುಳಿತಿದ್ದ ಮೂವರೂ ಮತ್ತಷ್ಟು ಇದರಿಂದ ಚಕಿತರಾದರು. ಮೂರು ಜನರೂ ಎಷ್ಟೊಂದು ತಮ್ಮ ನೆನಪಿನ ದಿಗಂತಗಳನ್ನೆಲ್ಲಾ ಹುಡುಕಾಡಿದರೂ ಕೂಡ ಆತ ಯಾರೆಂದು ತೋಚಲಿಲ್ಲ. ಆದರೂ ಆತ ಪಕ್ಕ ನಿಂತೇ ಇದ್ದಿದ್ದರಿಂದ ಬೇರೆ ದಾರಿ ಕಾಣದೆ ಹಸನ್ಮುಖ ತೋರಿಸುತ್ತ ನಿಂತಿದ್ದ ವ್ಯಕ್ತಿಗೆ ಅಲ್ಲೇ ಪಕ್ಕದಲ್ಲಿದ್ದ ಕುರ್ಚಿ ಎಳೆದುಕೊಟ್ಟು ಕುಳಿತುಕೊಳ್ಳುವಂತೆ ಹೇಳಿದರು.

ಬಂದ ವ್ಯಕ್ತಿ ಕುಳಿತುಕೊಂಡು ಸಾವಧಾನವಾಗಿ ಸಿಗರೇಟು ಹತ್ತಿಸುತ್ತಾ, ಕುಳಿತಿದ್ದ ಮೂವರಲ್ಲಿ ಒಬ್ಬರನ್ನು ತೋರಿಸುತ್ತ "ತಾವು ಮಿಸ್ಟರ್ ಹೆಗಡೆ! ಸಂಶೋಧನ ಕೇಂದ್ರದ ಪೆಥಾಲಜಿಸ್ಟ್ ಅಲ್ಲವೆ? ನೀವು ಸಿದ್ದಪ್ಪ, ಸಂಶೋಧನ ಕೇಂದ್ರದ ಕೀಟಶಾಸ್ತ್ರಜ್ಞ ಅಲ್ಲವೆ?" ಎಂದು ಇನ್ನೊಬ್ಬರತ್ತ ತಿರುಗಿದ. ಸಿದ್ದಪ್ಪನೂ ಹೆಗಡೆಯೂ ನಸುನಗುತ್ತ ಹೌದೆಂದು ತಲೆಯಾಡಿಸಿದರು. 'ಇವರು ಯಾರೋ ಗೊತ್ತಾಗಲಿಲ್ಲ. ದಯವಿಟ್ಟು ಕ್ಷಮಿಸಿ' ಪಕ್ಕದಲ್ಲಿದ್ದ ಮೂರನೆಯವನತ್ತ ತಿರುಗಿದ.

"ನಾನು ರಾಮಚಂದ್ರ ಅಂತ. ಇಲ್ಲಿ ಜ್ಯೂನಿಯರ್ ಕಾಲೇಜಿನಲ್ಲಿ ಅರ್ಥಶಾಸ್ತ್ರದ ಅಧ್ಯಾಪಕ."

"ಯಾರು? ತಾವು ಟಿ.ಆರ್. ರಾಮಚಂದ್ರ ಅಂತ ತುಮಕೂರಿನಲ್ಲಿ ಇದ್ದರಲ್ಲಾ ಅವರೋ?" ಎಂದು ಕೇಳಿದ.



ಹೌದೆಂದ ರಾಮಚಂದ್ರ.

"ಓ ವಂಡರ್‌ಫುಲ್! ನಮ್ಮ ಸರ್ಕಾರದ ಪಂಚವಾರ್ಷಿಕ ಯೋಜನೆ ಮೇಲೆ ನೀವು ಬರೆದ ಕಾಮೆಂಟುಗಳನ್ನು ಓದಿದ್ದೆ, ಭಾಳ ಚೆನ್ನಾಗಿ ಉಗಿದಿದೀರ. ತುಂಬಾ ಸಂತೋಷ ತಮ್ಮನ್ನು ನೋಡಿದ್ದು" ಎನ್ನುತ್ತ ಆಗಂತುಕ ಕೈ ಕುಲುಕಿದ.

ಟೇಬಲ್ಲಿನ ಪಕ್ಕ ಕುಳಿತಿದ್ದ ಮಿಕ್ಕವರಿಬ್ಬರೂ ತಮಗೇ ಗೊತ್ತಿಲ್ಲದ ರಾಮಚಂದ್ರನ ಕೀರ್ತಿಗೆ ಚಕಿತರಾದರು. ರಾಮಚಂದ್ರ ಬಂದ ವ್ಯಕ್ತಿಯನ್ನು ತೀಕ್ಷ್ಣವಾಗಿ ಅವಲೋಕಿಸಿದ. ಯಾವುದೋ ಕೊಂಪೆಯಲ್ಲಿ ತನ್ನ ಲೇಖನ ಓದಿ ಕೈಕುಲುಕುವ ಈತನನ್ನು ನೋಡಿ ಅವನೂ ಚಕಿತನಾಗಿದ್ದ.

"ತಾವು ಯಾರೂಂತ ಸರಿಯಾಗಿ ಗೊತ್ತಾಗಲಿಲ್ಲ ಮಿಸ್ಟರ್ ಅಂಗಾಡಿ" ಎಂದ ರಾಮಚಂದ್ರ.

"ಓಹ್ ಸಾರಿ, ನನ್ನ ಪರಿಚಯ ಹೇಳಿಕೊಳ್ಳಲೇ ಇಲ್ಲ. ಸಾರಿ, ನಾನು ಇಂಟೆಲಿಜೆನ್ಸ್ ಆಫೀಸರ್ ಆಗಿ ಅಲೆಪ್ಪಿಯಲ್ಲಿ ಕೆಲಸ ಮಾಡ್ತಿದೇನೆ" ಎಂದ ಅಂಗಾಡಿ.

"ಯಾವುದು? ಸೆಂಟ್ರಲ್ ಇಂಟೆಲಿಜೆನ್ಸ್ ಏಜೆನ್ಸಿಯಲ್ಲೋ ಅಥವ ಸ್ಟೇಟ್ ಇಂಟೆಲಿಜೆನ್ಸೋ" ಎಂದು ರಾಮಚಂದ್ರ ಕೇಳಿದ.

ಇಂಟೆಲಿಜೆನ್ಸ್ ಎನ್ನುತ್ತಿದ್ದಂತೆಯೇ ಅವರು ಮೂವರಲ್ಲೂ ಏನೋ ಒಂದು ಥರ ಅಪರಾಧಿ ಪ್ರಜ್ಞೆ, ಎಚ್ಚರಿಕೆಯ ಮನೋಭಾವ ಮೂಡತೊಡಗಿತು. ಇನ್ಯಾವ ಹೊಸ ಗ್ರಹಚಾರ ಕಾದಿದೆಯೋ ಎಂದುಕೊಂಡು ಸಿದ್ದಪ್ಪ ಹೆಗ್ಡೆ ಏನಾದರೂ ನೆವ ಹೇಳಿ ಇಲ್ಲಿಂದ ಗಾಡಿ ಬಿಡುವುದು ಒಳ್ಳೆಯದು ಎಂದು ಯೋಚಿಸಿದರು. ನೂರಾರು ಕಡೆ ಅನೇಕ ಜನರಿಗೆ ಪರಿಚಯ ಹೇಳಿಕೊಂಡು ಅಭ್ಯಾಸವಿದ್ದ ಅಂಗಾಡಿಗೆ ಅವರ ಮನದೊಳಗಿನ ಅಳುಕು ಗಮನಕ್ಕೆ ಬಂತು. ಅವನು ಅವರ ಆ ಅಳುಕನ್ನು ನಿವಾರಿಸಲೊ ಎಂಬಂತೆ ತನ್ನ ಬಗೆಗಿನ ವಿವರ ಕೊಡತೊಡಗಿದ.

"ವಾಸ್ತವವಾಗಿ ನನ್ನ ಹೆಸರು ಈ ತರ ಅಂಗಾಡಿ ಅಲ್ಲಾ ಸಾರ್. ನಾನು ಹುಟ್ಟಿ ಬೆಳೆದಿದ್ದು ಇಲ್ಲೇ ಕೆಸರೂರಿನಿಂದ ಎಂಟು ಮೈಲಿ ದೂರದಲ್ಲಿ ಅಂಗಡಿ ಗ್ರಾಮ ಅಂತ ಇದೆ ನೋಡಿ, ಅಲ್ಲಿ. ಆ ಗ್ರಾಮಕ್ಕೆ ನಮ್ಮಪ್ಪ ಪಟೇಲರು. ನನ್ನ ಹೆಸರು ಶಾಮೇಗೌಡ ಅಂತ. ಕಲ್ಕತ್ತಾದಲ್ಲಿ ನನಗೆ ಇಂಟರ್‌ವ್ಯೂ ಇತ್ತು. ಕೆಲಸ ಕೊಡೋದಕ್ಕೆ ನನ್ನ ಜಾತಿ ಯಾರಿಗೂ ಗೊತ್ತಾಗಬಾರದು ಅಂತ ಶಾಮನಂದನ ಅಂಗಡಿ ಅಂತ ಬದಲಾಯಿಸಿಕೊಂಡೆ. ಅಲ್ಲಿ ಇಂಟರ್‌ವ್ಯೂ ಮಾಡಿದವರೆಲ್ಲಾ ಬಂಗಾಳಿಗಳು. ಅವರಿಗೆ ದಕ್ಷಿಣ ಭಾರತದೋರನ್ನ ಕಂಡರೆ ಕಾಲ ಕಸಕ್ಕಿಂತ

ಕಡೆ. ಅದಕ್ಕೇ ಈ ವಿಚಿತ್ರ ಹೆಸರು. ಆಮೇಲೆ ನಾನು ಕೆಲಸದ ಮೇಲೆ ಅಲೆಪ್ಪಿಯಲ್ಲಿ ರಿಪೋರ್ಟ್ ಮಾಡಿಕೊಂಡೆ, ಅಲ್ಲಿ ನನ್ನ ಅಂಗಡಿ ಹೆಸರು ಮಲಯಾಳಿಗಳ ಬಾಯಲ್ಲಿ ಅಂಗಾಡಿ ಅಂತ ಆಗೋಯ್ತು. ನನ್ನ ಮೂಲದ ಹೆಸರು ಅಂಗಡಿ ಶಾಮೇಗೌಡ ಅಂತ. ಇವನ್ಯಾವನೋ ದೇಶಾಂತರದೋನು, ಇಂಟಲಿಜೆನ್ಸಿನವನು ಅಂತ ಗಾಬರಿ ಬೀಳಬೇಡಿ. ನಾನು ಇಲ್ಲಿಯೋನೇಯ" ಎಂದು ತನ್ನ ಮಾತಿನ ಧಾಟಿಗೀಟಿ ಎಲ್ಲ ಬದಲಾಯಿಸಿ ಥೇಟ್ ಮಲೆನಾಡು ಗೌಡನ ತರ ಮಾತಾಡತೊಡಗಿದ.

"ನನ್ನನ್ನ ಸೆಂಟ್ರಲ್ ಇಂಟೆಲಿಜೆನ್ಸಿ ಇಂದ ಏಲಕ್ಕಿ ಬೋರ್ಡಿಗೆ ಇಂಟೆಲಿಜನ್ಸ್ ಆಫೀಸರ್ ಆಗಿ ಪ್ರಮೋಷನ್ ಕೊಟ್ಟು ಡೆಪ್ಯೂಟ್ ಮಾಡಿದರು. ಮೊದಲು ಈ ಪೋಸ್ಟು ಸ್ಟೇಟ್ ಇಂಟೆಲಿಜೆನ್ಸ್ ಸ್ಕೇಲಿನಲ್ಲೇ ಇತ್ತು. ಅದಕ್ಕಾಗಿ ನಾನು ಹೋಗೊಲ್ಲ ಅಂತ ತಕ್ರಾರು ಮಾಡಿದ ಮೇಲೆ ಅದನ್ನೂ ಸೆಂಟ್ರಲ್ ಸ್ಕೇಲಿಗೆ ಬದಲಾಯಿಸಿ ನನ್ನ ಕೆಲಸ ಇಲ್ಲೇ ಖಾಯಂ ಮಾಡಿ ಏಲಕ್ಕಿ ಬೋರ್ಡ್ ಇಂಟೆಲಿಜೆನ್ಸ್ ಅಂತ ಬೇರೆ ಡಿಪಾರ್ಟ್‌ಮೆಂಟೇ ಮಾಡಿಬಿಟ್ಟರು. ಎಲ್ಲಾ ಡಿಪಾರ್ಟ್‌ಮೆಂಟಿನ ಪಾಲಿಟಿಕ್ಸು."

ಅಂಗಾಡಿ ಆ ಮೂವರಿಗೂ ಕೊಂಚ ಆತ್ಮೀಯನಾಗುವ ಉದ್ದೇಶದಿಂದ ಬೇಕಿದ್ದು ಬೇಡದ್ದು ಎಲ್ಲಾ ಅವರೆದುರು ಒದರತೊಡಗಿದ. ಆತ ಬಂದಿದ್ದು ಏಲಕ್ಕಿ ಕೇಂದ್ರದ ಮುಖ್ಯಸ್ಥರಾದ ಪಾಟೀಲರನ್ನು ನೋಡುವುದಕ್ಕಂತೆ. ಏಲಕ್ಕಿ ಉತ್ಪಾದನೆ ಅಪಾಯಕಾರಿ ಮಟ್ಟಕ್ಕೆ ಕುಸಿದಿರುವುದರಿಂದ ಕೇಂದ್ರ ಸರ್ಕಾರ ಈ ಬಗ್ಗೆ ಆತಂಕ ವ್ಯಕ್ತಪಡಿಸಿ ಏಲಕ್ಕಿ ಬೋರ್ಡನ್ನು ತನಿಖೆ ನಡೆಸುವಂತೆ ಕೋರಿದೆಯಂತೆ. ಜೊತೆಗೆ ಏಲಕ್ಕಿ ವ್ಯಾಪಾರದ ರಿತಿ ನೀತಿಗಳನ್ನೂ ಅಭ್ಯಾಸ ಮಾಡಲೂ ಹೇಳಿದ್ದಾರಂತೆ.

"ಕರ್ನಾಟಕದಂತೆಯೇ ಕೇರಳದ ಉತ್ಪಾದನೆಯೂ ಕುಸಿಯುತ್ತಿದೆಯೇ? ಎಂದು ಸಿದ್ದಪ್ಪ ಕೇಳಿದ.

"ಕೇರಳದಲ್ಲೂ ಎರಡು ವರ್ಷಗಳಿಂದ ಇಳಿಮುಖ ಆಗಿದೆ. ಆದರೆ ಮುಖ್ಯವಾಗಿ ಕೆಸರೂರಿನ ಏಲಕ್ಕಿ ಪ್ರಪಂಚ ಪ್ರಸಿದ್ಧವಾದದ್ದು. ಇಲ್ಲಿ ಉತ್ಪಾದನೆ ಕುಸಿಯುತ್ತಿರೋದೇ ತೀವ್ರ ಆತಂಕಕ್ಕೆ ಕಾರಣವಾಗಿದೆ" ಎಂದು ಅಂಗಾಡಿ ಉತ್ತರಿಸಿದ. ತಾನು ಡಾಕ್ಟರ್ ಜೋಗಿಹಾಳ್‌ರವರು ಈ ಕೇಂದ್ರದ ಮುಖ್ಯಸ್ಥರಾಗಿದ್ದಾಗ ನಡೆದ "ಫೀಲ್ಡ್ ಡೇ"ಗೆ ಬಂದಿದ್ದೆನೆಂದೂ ಆಗ ಸೆಮಿನಾರಿನಲ್ಲಿ ಸಿದ್ದಪ್ಪ ಮತ್ತು ಹೆಗ್ಡೆ ಮಾತಾಡಿದ್ದರೆಂದೂ ಆದ್ದರಿಂದಲೇ ತನಗೆ ಅವರ ಪರಿಚಯವಿದ್ದುದೆಂದೂ ವಿವರಿಸಿದ.



ಸಿದ್ದಪ್ಪ ನಕ್ಕು "ಮಿಸ್ಟರ್ ಅಂಗಾಡಿ, ಏಲಕ್ಕಿ ಬೆಳೆ ಕುಸಿಯೋದಕ್ಕೆ ತುಂಬಾ ಕಾರಣಗಳಿವೆ. ಕ್ರಿಮಿಕೀಟಗಳು, ಫಂಗಸ್‌ಗಳು, ವೈರಸ್‌ಗಳು, ಪ್ರತಿಕೂಲ ಹವಾಮಾನ, ಮಾರುಕಟ್ಟೆ ಏರಿಳಿತ ಹೀಗೇ ನೂರಾರು ಕಾರಣಗಳಿರುತ್ತವೆ. ಅದನ್ನು ತನಿಖೆ ಮಾಡೋದಕ್ಕೆ ಸಸ್ಯಶಾಸ್ತ್ರಜ್ಞರ ಅಧ್ಯಯನ ಮುಖ್ಯವೇ ಹೊರತು ಪೋಲೀಸ್ ಡಿಪಾರ್ಟ್‌ಮೆಂಟಿನವರಿಗೆ, ಇಂಟೆಲಿಜೆನ್ಸ್‌ನವರಿಗೆ ಕೆಲಸ ವಹಿಸಿದರೆ ಪ್ರಯೋಜನಾವಾದರೂ ಏನು? ಈಗ ಏಲಕ್ಕಿಗೆ ಏಫಿಡ್ಸ್ ಅನ್ನೋ ತಿಗಣೆಕಾಟ ಇದೆ ಅನ್ನಿ, ಅದನ್ನು ನಾನು ಪತ್ತೆಮಾಡಿ ಅದಕ್ಕೆ ಯಾವ ಔಷಧಿ ಹೊಡೆಯಬೇಕು ಎಂದು ರಿಪೋರ್ಟ್ ಮಾಡಬಲ್ಲೆನೇ ಹೊರತು, ಪೋಲೀಸ್ ಡಿಪಾರ್ಟ್‌ಮೆಂಟಿನವರೇನು ಮಾಡಬಲ್ಲರು ಏಫಿಡ್ಸ್‌ಗಳಿಗೆ ಕೈಕೋಳ ಹಾಕುತ್ತಾರೋ!" ಎಂದು ವಿನೋದವಾಗಿ ಕೇಳಿದ.

ಅಂಗಾಡಿ ಅದಕ್ಕೆ ಪ್ರತಿಯಾಗಿ ನಕ್ಕು "ಮಿಸ್ಟರ್ ಸಿದ್ದಪ್ಪಾ ನಿಮ್ಮ ಪ್ರಶ್ನೆಗೆ ಈ ಹಂತದಲ್ಲಿ ನಾನು ನ್ಯಾಯವಾಗಿ ಉತ್ತರಿಸಕೂಡದು, ಆದರೆ ಸೂಚ್ಯವಾಗಿ ನಿಮಗೆ ಹೇಳಬಯಸುತ್ತೇನೆ. ಏಲಕ್ಕಿಯನ್ನು ಅರಬ್ ರಾಷ್ಟ್ರಗಳಿಗೆ ರಫ್ತು ಮಾಡೋದರಿಂದ ನಮಗೆ ಪ್ರಾಪ್ತಿಯಾಗುತ್ತಿದ್ದ ಅಮೂಲ್ಯ ವಿದೇಶೀ ವಿನಿಮಯ ಸುಮಾರು ನಾನೂರು ಕೋಟಿ ರೂಪಾಯಿ. ಈಗ ಅದು ಐವತ್ತು ಕೋಟಿ ರೂಪಾಯಿಗಿಳಿದಿದೆ. ಸ್ವಾಭಾವಿಕವಾಗೇ ಕೇಂದ್ರ ಸರ್ಕಾರ ಈ ಬಗ್ಗೆ ಆತಂಕಗೊಂಡಿದೆ. ಈ ಇಳಿತ ಕೇವಲ ಕ್ರಿಮಿಗಳಿಂದಾಗಿದ್ದರೆ ನೀವು ಹೇಳಿದಂತೆ ನನ್ನ ಕೆಲಸ ಇಲ್ಲಿ ಏನೂ ಇಲ್ಲ. ಆದರೆ ಯಾವಾಗಲೂ ಹೀಗಿರೋದಿಲ್ಲ! ಒಂದೊಂದು ಸಾರಿ ಕ್ರಿಮಿನಲ್‌ಗಳಿರ್ತಾರೆ! ಅದಕ್ಕೇ ನಮಗೆ ವಹಿಸಿರೋದು ಕೆಲಸ. ನಿನಗೆ ತಿಳಿಯದ ಸುಳಿವು ನಮಗೆ ತಿಳಿಯುತ್ತೆ" ಎಂದು ವಿಚಿತ್ರ ಠೀವಿಯಲ್ಲಿ ತಿಳಿಸುತ್ತಾ ಅಂಗಾಡಿ ಇದ್ದಕ್ಕಿದ್ದಂತೆ ತನ್ನ ಕರ್ತವ್ಯ ಗೂಢವೂ, ರಹಸ್ಯಮಯವೂ ಆದುದು ಎಂಬ ಗತ್ತಿನಲ್ಲಿ ಕುಳಿತ. ಮಿಕ್ಕ ಮೂವರೂ ಗಾಬರಿ ಬಿದ್ದರು.

ಅದನ್ನು ತಿಳಿದ ಅಂಗಾಡಿ ಮತ್ತೆ "ಹೀಗೆಲ್ಲಾ ಹೇಳಿದೆನೆಂದು ನೀವು ನನ್ನನ್ನು ಜೇಮ್ಸ್‌ಬಾಂಡ್ ಅಂತ ತಿಳೀಬೇಡಿ. ಪತ್ತೇದಾರ ಅಂದರೆ ಹುಡುಗಿಯರೊಡನಾಟ, ಪಿಸ್ತೂಲಿನ ಸಾಹಸ ಅಂತ ಯೋಚನೆ ಮಾಡ್ತೀವಿ. ನಾನೂ ಒಂದು ಕಾಲದಲ್ಲಿ ಹಾಗೇ ತಿಳಿದಿದ್ದೆ. ನಿಜವಾಗಿಯೂ ಇಂಟೆಲಿಜೆನ್ಸಿನವರ ಕೆಲಸ ಅಂದರೆ ತಾಲ್ಲೂಕಾಫೀಸು ಗುಮಾಸ್ತನ ಕೆಲಸ. ವಿಷಯ ಕೂಲಂಕಷವಾಗಿ ತಿಳಿದು ಅದನ್ನು ಜ್ಞಾಪಕ ಇಟ್ಟುಕೊಂಡು ಫೈಲ್ ಮಾಡಿ, ಅವುಗಳನ್ನು ಜ್ಞಾಪಕದಲ್ಲಿಟ್ಟು ಒಂದಕ್ಕೊಂದು ತಾಳೆನೋಡಿ ಕ್ರಾಸ್ ಚೆಕ್ ಮಾಡಿ ಕಳಚಿದ ಕೊಂಡಿಗಳನ್ನೆಲ್ಲಾ

ಕೂಡಿಸುವ ಕತ್ತೆ ಕೆಲಸ" ಎಂದ.

ಅಂಗಾಡಿಯ ಆತ್ಮೀಯ ನಡವಳಿಕೆಯಿಂದ ಅಲ್ಲಿ ಕುಳಿತಿದ್ದ ಮೂವರ ಮನಸ್ಸಿನ ಬಿಗುವು ಕೊಂಚ ಕಡಿಮೆಯಾಗಿದ್ದೇನೋ ನಿಜ. ಆದರೂ ಪೋಲೀಸ್ ಪತ್ತೇದಾರ! ಕೊಂಚ ಜಾಗರೂಕವಾಗಿ ಮಾತಾಡೋದು ಒಳ್ಳೇದಲ್ಲವೇ ಎಂದು ಮೂವರೂ ಯೋಚಿಸಿದರು. ಎದುರುಗಡೆ ಪಾತ್ರೆ ಅಂಗಡಿ ಮಾರ್ವಾಡಿ ಕತ್ತಲಾಗುವುದಕ್ಕೆ ಮೊದಲೇ ದೀಪದ ಸ್ವಿಚ್ ಹಾಕಿ ಅದಕ್ಕೊಮ್ಮೆ ಕೈಮುಗಿದು ಗಲ್ಲಾದ ಮೇಲೆ ಕುಳಿತುಕೊಂಡ.

"ಬೈದಿಬೈ ಡಾಕ್ಟರ್ ಜೋಗಿಹಾಳ್ ತೀರಿಕೊಂಡ್ರಲ್ಲ ಏನಾಗಿತ್ತು ಅವರಿಗೆ?" ಅಂಗಾಡಿ ಸಿದ್ದಪ್ಪನನ್ನು ಕುತೂಹಲದಿಂದ ಕೇಳಿದ.

ಹೆಗ್ಡೆ "ಏನೂ ಆಗಿರಲಿಲ್ಲ, ಚೆನ್ನಾಗಿದ್ದರು. ಅವತ್ತು ಸಾಯಂಕಾಲ ನಮ್ಮನ್ನೆಲ್ಲ ಮೀಟಿಂಗ್ ಕರೆದು ಹಲವಾರು ಏಲಕ್ಕಿ ಸಂಶೋಧನೆಯ ಸಮಸ್ಯೆಗಳನ್ನು ಚರ್ಚಿಸಿದರು. ರಿಸರ್ಚ್ ವಿದ್ಯಾರ್ಥಿಗಳ ಕೆಲವು ಪ್ರಯೋಗಗಳನ್ನು ಪರಿಶೀಲಿಸಲು ಲ್ಯಾಬಿಗೆ ಹೋದರು. ಬೆಳಿಗ್ಗೆ ನೋಡಬೇಕಾದರೆ ಲ್ಯಾಬಿನಲ್ಲೇ ಜೋಗಿಹಾಳ್ ತೀರಿಕೊಂಡಿದ್ದರು. ಹೃದಯಾಘಾತವೋ, ಅಪಘಾತವೋ ಏನೊಂದು ಸರಿಯಾಗಿ ಗೊತ್ತಾಗಲಿಲ್ಲ. ಕೆಲವು ಸ್ಲೈಡ್ ಪ್ರೊಜೆಕ್ಟರು ಏನೋ ಆಗಿತ್ತು ಅನ್ನುತ್ತಾರೆ" ಎಂದು ತಿಳಿಸಿದ. ಅವನ ಮಾತಿನಲ್ಲಿ ಅವನು ಈ ವೇಳೆಗಾಗಲೇ ಅದನ್ನು ಹಲವಾರು ಜನಕ್ಕೆ ಪದೇ ಪದೇ ಹೇಳಿದ ಬೇಸರ ಎದ್ದು ಕಾಣುತ್ತಿತ್ತು.

"ಅವರೇನೋ ಡಿಡಿಟಿ ಬಾಂಬ್ ಬಗ್ಗೆ ಪ್ರಯೋಗ ಮಾಡಿದ್ರಂತಲ್ಲಾ ಹೆಗ್ಡೆ" ಎಂದ ಅಂಗಾಡಿ.

"ಅದೇನೋ ಸಿದ್ದಪ್ಪನಿಗೆ ಚೆನ್ನಾಗಿ ಗೊತ್ತು. ಅವನೇ ಆ ಸ್ಕೀಂ ತಯಾರು ಮಾಡಿ ಜೋಗಿಹಾಳರಿಗೆ ಕೊಟ್ಟಿದ್ದು."

ಸಿದ್ದಪ್ಪ "ಸರಿಯಪ್ಪಾ, ಸ್ಕೀಂ ಏನೆಂದು ಬೇಕಾದರೆ ತಿಳಿಸುತ್ತೇನೆ. ಆದರೆ ಈ ಇಂಟೆಲಿಜೆನ್ಸ್ ಅನ್ನೊ ಪದ ಕೇಳಿದಾಗಿನಿಂದ ಏನು ಹೇಳಿದರೆ ಹೇಗೋ ಅಂತ ನನ್ನ ಎದೆ ಹೊಡಕೋತಾ ಇದೆ. ಅವರು ಸತ್ತಾಗ ಪೋಲೀಸ್ನೋರು ಆ ತನಿಖೆ ಈ ತನಿಖೆ ಅಂತ ಇಪ್ಪತ್ತಾರು ಸಾರಿ ಅಲೆಸಿ ಪ್ರಾಣ ತೆಗೆದಿದ್ದಾರೆ. ನನಗೆ ಇಲ್ಲೀವರೆಗೆ ಅನುಭವಿಸಿರೋದೇ ಸಾಕಾಗಿದೆ" ಎಂದ.

"ನೋ ನೋ ನೋ, ನಿಮ್ಮೊಡನೆ ಹರಟೆ ಕೊಚ್ಚುವ ಗೆಳೆಯನಾಗಿ ಈ ವಿಷ್ಯ ಕೇಳ್ತಿರೋದು. ನೋಡಿ, ಇಂಥ ವಿಷಯ ಕೇಳಿದ ತಕ್ಷಣ, ನಾನು ಇಂಟೆಲಿಜೆನ್ಸ್ ಆಫೀಸರಾಗಿರೋದರಿಂದ ಮಾತೋಡೋವರು ನಿಜವನ್ನು ನಿಗೂಢ



ರೋಮಾಂಚಕವಾಗಿ ಪರಿವರ್ತಿಸಿಬಿಡ್ತಾರೆ. ಇಲ್ಲಾ, ಇದ್ಯಾವನಿಗೆ ಬೇಕಪ್ಪಾ ಇವರ ಸಹವಾಸ ಅಂತ, ಏನೋ ಹಾಗಂತಾರೆ ಹೀಗಂತಾರೆ, ಯಾರಿಗೆ ಗೊತ್ತು ಅಂತ ನುಸುಳುವ ಮಾತಾಡಿ ಮೆಲ್ಲಗೆ ಜಾರಿಕೊಳ್ಳುತ್ತಾರೆ. ನಿಮಗೆ ಇದನ್ನೇಕೆ ಹೇಳ್ತಿದ್ದೇನೆಂದರೆ ನಾನು ಇಲ್ಲಿಗೆ ಬಂದಿರೋ ಉದ್ದೇಶ ಏನೆಂದು ಸ್ಪಷ್ಟವಾಗಿ ಹೇಳಿದ್ದೇನಲ್ಲಾ. ನಾನು ಜೋಗಿಹಾಳರ ಸಾವನ್ನು ತನಿಖೆ ಮಾಡೋದಕ್ಕೆ ಖಂಡಿತ ಬಂದವನಲ್ಲ. ನೀವೆಲ್ಲಾ ಜೋಗಿಹಾಳರ ಸಹಾಯಕರಾಗಿ ಕೆಲ್ಸ ಮಾಡಿರೋದ್ರಿಂದ ಸುಮ್ಮನೆ ಕುತೂಹಲಕ್ಕೆ ಕೇಳ್ತಿದ್ದೇನೆಷ್ಟೆ. ನನಗೆ ಮುಖ್ಯವಾಗಿ ನೀವು ನನ್ನೊಡನೆ ಸರಳ ಸಾಧಾರಣವಾಗಿ ವರ್ತಿಸೋದೇ ಬೇಕಾಗಿರೋದು" ಎಂದ. ಅವರು ಎಂದಿನಂತೆ ವರ್ತಿಸುವ ಹಾಗೆ ಮಾಡಲು ಅಂಗಾಡಿ ತುಂಬಾ ತೊಂದರೆ ತಗೊಂಡ.

"ಡಿಡಿಟಿ ಬಾಂಬ್ ಅಂದರೆ ಸಿಡಿಮದ್ದಿನ ಸುತ್ತ ಡಿಡಿಟಿ ಇಟ್ಟು ಅದನ್ನು ತೋಟದೊಳಗಡೆ ಸಿಡಿಸೋದು. ಔಷಧ ಸಿಂಪಡಿಸುವ ವಿಧಾನಕ್ಕಿಂತ ಇದು ಸುಲಭವೆ? ಅಂತ ಪ್ರಯೋಗ ಮಾಡ್ತಿದ್ವಿ. ಆದರೆ ಇದು ಹೇಗೆ ಜೋಗಿಹಾಳರ ಸಾವಿಗೆ ಕಾರಣ ಅಂತ ಎಲ್ಲಾ ತಿಳಿದರೋ ಗೊತ್ತಿಲ್ಲ! ಈ ಡಿಡಿಟಿ ಬಾಂಬ್ ಪ್ರಾಜೆಕ್ಟಿಗೂ ಜೋಗಿಹಾಳರ ಸಾವಿಗೂ ಯಾವ ವಿಧವಾದ ಸಂಬಂಧವೂ ನನಗೆ ತೋಚುತ್ತಿಲ್ಲ" ಎಂದ ಸಿದ್ದಪ್ಪ. ಜೋಗಿಹಾಳರ ಮರಣಾನಂತರ ಸಿದ್ದಪ್ಪನನ್ನು ಕರೆದು ಪೋಲೀಸರು ಅನೇಕ ಬಾರಿ ಈ ಡಿಡಿಟಿ ಬಾಂಬ್ ಯೋಜನೆಯ ಬಗ್ಗೆ ಪ್ರಶ್ನೆ ಮಾಡಿದ್ದರು.

"ಅಲ್ಲೋ ಸಿದ್ದಪ್ಪಾ ನಿನಗೆ ಈ ಡಿಡಿಟಿ ಬಾಂಬಿನ ಕಲ್ಪನೆ ಎಲ್ಲಿಂದ ಸಿಕ್ಕಿತೋ?" ಎಂದು ಹೆಗ್ಡೆ ಕೇಳಿದ.

"ಹೆಗ್ಡೆ, ನನ್ನ ತಲೇ ಒಳಗೆ ಮೆದುಳು ಅನ್ನೋ ವಸ್ತು ಇಲ್ಲಾಂತ ತಿಳಿದಿದಿಯೇನೋ? ಪುರಸೊತ್ತು ಕೊಟ್ಟರೆ ಇಂಥ ಮನೆಹಾಳು ಐಡಿಯಾಗಳು ಒಂದು ನೂರನ್ನು ಕೊಟ್ಟೇನು" ಅಸಹನೆಯಿಂದೆಂಬಂತೆ ಸಿದ್ದಪ್ಪ ಹೆಗ್ಡೆಗೆ ಉತ್ತರಿಸಿದ.

"ಹೋಗಲಿ ಬಿಡಿ. ನಿಮಗೆ ಈ ವಿಷಯ ಈಗಾಗಲೇ ನೂರೆಂಟು ಬಾರಿ ಹೇಳಿ ಬೇಸರ ಬಂದಿರುವಂತೆ ಕಾಣುತ್ತೆ. ಆದರೆ ಜೋಗಿಹಾಳರಂಥ ಮೇಧಾವಿ ಏಲಕ್ಕಿ ಮೇಲೆ ಸಂಶೋಧನೆ ನಡೆಸಿಯೂ ಏಲಕ್ಕಿ ಉತ್ಪಾದನೆ ಕುಸಿಯೋ ಸ್ಥಿತಿ ಬಂತಲ್ಲಾ ಅನ್ನೋದೊಂದೇ ನನಗೆ ಬೇಜಾರು. ಅವರಿಗೆ ಕರ್ನಾಟಕದಲ್ಲಿ ದ್ರಾಕ್ಷಿ ಬೆಳೆಗೆ, ಸಿಮ್ಲಾದಲ್ಲಿ ಸೇಬು ಬೆಳೆಗೆ ಮಾಡಿದ ಸಂಶೋಧನೆಗಾಗಿ ಮಾಗ್‌ಸೇಸೆ ಪ್ರಶಸ್ತಿ ಸಿಗಬೇಕೆಂದು ನಿರ್ಧಾರವಾಗಿತ್ತು. ಆಗಲೇ ಅವರು ತೀರಿಕೊಂಡಿದ್ದು

ತುಂಬಾ ಅನ್ಯಾಯ. ಈವತ್ತು ನಮ್ಮ ದೇಶಧಲ್ಲಿ ದ್ರಾಕ್ಷಿ ಸೇಬು ಹಣ್ಣುಗಳನ್ನು ಗಲ್ಲಿ ಗಲ್ಲಿಯಲ್ಲಿ ರಾಶಿ ಹಾಕಿಕೊಂಡು ಮಾರೋದಕ್ಕೆ ಸಾಧ್ಯವಾಗಿರೋದು ಅವರಿಂದಲೇ. ಮೊದಲೆಲ್ಲಾ ಎಲ್ಲಿ! ಎಲ್ಲೋ ಸಿನೆಮಾದಲ್ಲಿ ರಾಜಾ ರಾಣೀರು ಸೇಬು ದ್ರಾಕ್ಷಿ ತಿನ್ನೋದನ್ನು ಮಾತ್ರ ನೋಡ್ತಿದ್ದೆವು ಅಷ್ಟೇ" ಎಂದ ಅಂಗಾಡಿ.

ಅಷ್ಟರಲ್ಲಿ ಯೋರೋ ಎಡಗಡೆ ಸರ್ಕಲ್ಲಿನಲ್ಲಿ ಡಮ ಡಮ ತಮಟೆ ಹೊಡೆದರು. "ಓಹೋ ಶುರುವಾಯ್ತಂತ ಕಾಣ್ತದೆ. ಏಲಕ್ಕಿ ಬೆಳೆಗಾರರ ಮನೆ ಜಪ್ತಿ, ಸ್ವತ್ತು ಹರಾಜು" ಎಂದು ಅತ್ತ ನೋಡಿ ರಾಮಚಂದ್ರ ಹೇಳಿದ.

"ಏಲಕ್ಕಿ ಉತ್ಪಾದನೆ ಕುಸಿಯೋದಕ್ಕೆ ಕ್ರಿಮಿಗಳು ಕಾರಣವೋ ಕ್ರಿಮಿನಲ್‌ಗಳೋ ಗೊತ್ತಿಲ್ಲ. ಆದರೆ ಬೆಳೆಗಾರರ ಮನೆ ಕುಸಿಯೋದಕ್ಕೆ ಮಾತ್ರ ಬ್ಯಾಂಕಿನ ಕ್ರಿಮಿನಲ್‌ಗಳೇ ಕಾರಣ" ಎಂದ ರಾಮಚಂದ್ರ ಕೋಪದಿಂದ. ಅಂಗಾಡಿ ಗಡಿಯಾರ ನೋಡಿಕೊಂಡು ಎದ್ದು,

"ನಾನಿನ್ನು ಬರಲೆ! ಮತ್ತೆ ಸಿಗ್ತೀರಾ?" ಎಂದ.

"ಡಾಕ್ಟರ್ ಪಾಟೀಲರನ್ನು ನೋಡೋದಕ್ಕೆ ಬರ್ತೀರಲ್ಲಾ ಅಲ್ಲೇ ಇರ್ತೇವೆ. ಇಲ್ಲದಿದ್ದರೆ ದಿನಾ ಸಾಯಂಕಾಲ ಇಲ್ಲಿ ಹರಟೆ ಕೊಚ್ಚೋದಕ್ಕೆ ಬರ್ತೇವೆ? ಎಂದು ಹೆಗ್ಡೆ ಹೇಳಿದ.

ಡಮ ಡಮ ಡಮ ಹೊರಗಡೆ ತಮಟೆ ಸದ್ದು. ಕೇಳ್ರೀ ಕೇಳ್ರೀ, ನಾಳೆ ಸೊಪ್ಪಿನಗುಡ್ಡ ರಾಮೇಗೌಡರ ಮನೆ ಸ್ವತ್ತು ಹರಾಜು. ಒಂದು ಉಪ್ಪಿನ ಕಾಯಿ ಜಾಡಿ, ಹದಿನೇಳು ಪೊರಕೆ, ಮೂರು ಅಲ್ಯೂಮಿನಿಯಂ ಪಾತ್ರೆ.... ಇತ್ಯಾದಿ. ಅಡಮಾನ ಬ್ಯಾಂಕಿನ ಆಳು ಬಾಲಯ್ಯ ತಮಟೆ ಹಿಡಿದು ಗಟ್ಟಿಯಾಗಿ ಸಾರತೊಡಗಿದ.

ನೀಳಕಾಯದ ಶಾಮನಂದನ ಅಂಗಾಡಿ ನಿಧಾನವಾಗಿ ಎದ್ದು ತನ್ನ ಕೋಟನ್ನು ಮಡಚಿ ಕೈಗೆ ನೇತುಹಾಕಿಕೊಂಡು ಇಳಿದುಹೋದ. ಅವನು ಹೋದತ್ತ ಉಳಿದ ಮೂವರೂ ನೋಡುತ್ತಿದ್ದವರು ಅವನು ಕಣ್ಮರೆಯಾದ ನಂತರ ಮುಖ ಮುಖ ನೋಡಿಕೊಂಡರು.

ಚಿದಂಬರ ರಹಸ್ಯ ೧೩

# ಅಧ್ಯಾಯ ೩

"ಒಟ್ಟಿನಲ್ಲಿ ಕ್ರಾಂತಿಯಾಗಬೇಕು" ಅನ್ನೋ ತೀರ್ಮಾನವನ್ನೇನೋ ತಗೊಂಡಾಯ್ತು. ಆದರೆ ಮುಂದೆ! ಚಕ್ರವ್ಯೂಹದ ಒಳಗಡೆ ಹೋಗಲು ಕೂಡ ದಾರಿ ಗೊತ್ತಿಲ್ಲದ ಅಭಿಮನ್ಯು ತರ ಕೆಸರೂರಿನ ಕ್ರಾಂತಿಕಾರಿಗಳು ನಾಲ್ವರೂ ಕಲ್ಲು ಬೆಂಚಿನ ಮೇಲೆ ಕುಳಿತು ಮಿಕಿಮಿಕಿ ಕೆಸರೂರಿನ ದಿಗಂತಗಳನ್ನು ನಿರುಕಿಸುತ್ತಿದ್ದರು. ಕ್ರಾಂತಿಗೂ ಸಹ ಯೋಚನೆ ಯೋಜನೆಗಳ ಅಗತ್ಯ ಇದೆಯೆಂದು ಅವರಿಗೆ ಹೊಳೆಯಲಿಲ್ಲ. ಕತ್ತಲಾಗತೊಡಗಿತ್ತು. ಇನ್ನೇನು ಮನೆಗೆ ಹೊರಡಬೇಕಲ್ಲಾ ಎಂದುಕೊಂಡ ಅಂಗಾರ 'ಈ ದರಿದ್ರ ನನ್ಮಗನ ಮನೆ ಅನ್ನೋದು ಯಾಕಿದೆಯೋ ಏನೋ" ಎಂದು ಗೊಣಗಿದ. ಸುಮ್ಮನೆ ಕ್ರಾಂತಿ ಗೀಂತಿ ಮಾಡಿಕೊಂಡು ಬೀದಿಯಲ್ಲೇ ಮಿತ್ರರೊಡನೆ ಜೀವಮಾನ ಕಳೆಯೋದು ಚೆನ್ನಾಗಿರುತ್ತದೆ ಎಂದನ್ನಿಸಿತು ಅವನಿಗೆ. "ಆ ಸೈಕಲ್ ಷಾಪಿನ ರಾಮುಗೆ ಸರಿಯಾಗಿ ಬೆಂಡೆತ್ತಬೇಕಲ್ಲಾ ರಮೇಶ" ಎಂದು ರಮೇಶನತ್ತ ತಿರುಗಿ ಹೇಳಿದ.

"ಯಾಕಪ್ಪಾ ಅವನೇನು ಮಾಡಿದ ನಿನಗೆ?" ಅಂತ ಇಂಗ್ಲೀಷ್ ಗೌಡ ಕೇಳಿದ.

"ಬೆಳಗ್ಗೆ ಬಾಡಿಗೆ ಸೈಕಲ್ಲು ನನಗೆ ಕೊಡೋದಿಲ್ಲಾಂತ ಹೇಳಿದ."

"ಯಾಕೆ ಸೈಕಲ್ಲಿಟ್ಟುಕೊಂಡು ಪೂಜೆ ಮಾಡ್ತಾನಂತ್ತೇನೋ?"

"ಮೊನ್ನೆ ಅವನ ಸೈಕಲ್ ಮೇಲೆ ಇಬ್ಬರನ್ನು ಕೂರಿಸಿಕೊಂಡು ಹಳೆ ಕೆಸರೂರಿನ ಕಡೆ ಹೋಗ್ತಿದ್ದೆ. ಅದನ್ನು ಇವನು ನೋಡಿದನಂತೆ. ಚಕ್ರ ಬೆಂಡಾಗಿದೆ. ತ್ರಿಬ್ಬಲ್ ರೈಡ್ ಮಾಡ್ತೀಯಾ! ಸೈಕಲ್ಲು ಕೊಡೋದಿಲ್ಲಾಂದ."

"ಅಂತೋರನ್ನ ವಿಚಾರಿಸೋಕೆ ಪೋಲೀಸ್ನೋರಿದ್ದಾರೆ. ಇವನಿಗ್ಯಾಕಂತೆ ಅದರ ಉಸಾಬರಿ. ನಾಳೆ ನನ್ನ ಜೊತೆ ಬಾ. ಅವನು ನನ್ನೆದುರು ಕೊಡೋಲ್ಲಾಂತ ಹೇಳಲಿ" ಎಂದ ರಮೇಶ.

ಅಷ್ಟರಲ್ಲಿ ಢಮ ಢಮ ದೂರದಲ್ಲಿ ತಮಟೆ ಮೊಳಗಿತು. "ಓಹೋ ಯಾರ ಮನೆಯದೋ ಜಪ್ತಿ ಸಾಮಾನು ಹರಾಜು! ಈ ಅಡಮಾನ ಬ್ಯಾಂಕಿನ ಸೂಳೇಮಕ್ಕಳಿಗೆ ಏನು ಮಾಡೋದು. ನಿನ್ನೆ ನಮ್ಮ ಮಾವನ ಮನೆ ಜಪ್ತಿಗೆ

ಬಂದ್ರಿದಂತೆ. ಮನೆ ಒಳಗೆ ನುಗ್ಗಿ ಪಾತ್ರೆ ಪರಡಿ ಹೊತ್ಕೊಂಡು ಹೋದ್ರಂತೆ!" ಇಂಗ್ಲೀಷ್‌ಗೌಡ ತಮಟೆ ಸದ್ದು ಕೇಳಿಸಿಕೊಂಡು ಹೇಳಿದ.

ರಮೇಶ ಹೇಳಿದ, "ಏನ್ಮಾಡಬೇಕು? ಕ್ರಾಂತಿ! ಅಷ್ಟೆ! ಅದೊಂದೆ ಇದಕ್ಕೆಲ್ಲಾ ಮದ್ದು."

"ಪಾಪ ಅಡಮಾನ ಬ್ಯಾಂಕಿನ ಆಳು ರುದ್ರ, ನಿನ್ನೇನೇ ಸಾಯಂಕಾಲ, ನಾಳೆ ಜಪ್ತಿಗೆ ಬಂದ್ರೂ ಬರಬೋದು ಒಡವೆ. ವಸ್ತು ಬೆಲೆಬಾಳೋದೇನಿದ್ರೂ ಮನೇ ಒಳಗೆ ಇಡಬೇಡಿ ಅಂತ ಮೊದಲೇ ಹೇಳಿದ. ಹಂಗಾಗಿ ಬ್ಯಾಂಕಿನವರು ಖಾಲಿ ಮನೆ ಜಪ್ತಿ ಮಾಡಿದಾರೆ. ಬೋಳೀಮಕ್ಕಳಿಗೆ ಕಸಪೊರಕೆ ಮಡಕೆಕುಡಿಕೆ ಬಿಟ್ಟು ಮತ್ತೇನು ಸಿಕ್ಲಿಲ್ಲಂತೆ ಕಣ್ರೊ. ನಾನು ಬೆಳಿಗ್ಗೆ ಹೋಗಿ ರುದ್ರನಿಗೆ ಐದ್ರೂಪಾಯಿ ಕೊಟ್ಟು, ಪ್ಯಾಟೆ ಬೀದೀಲಿ ಟಾಂಟಾಂ ಮಾಡಿ ಮಾವನ ಮಾನ ತೆಗೀಬ್ಯಾಡ ಮಾರಾಯ! ಬೇಕಾದರೆ ಬೇರೆಯೋರದ್ದನ್ನೆಲ್ಲಾ ಸಾರಿಕೋ ಅಂತ ಹೇಳಿ ಬಂದಿದ್ದೀನಿ." ಇಂಗ್ಲಿಷ್‌ಗೌಡ ತಾನು ಮಾಡಿರುವ ತಂತ್ರಗನ್ನೆಲ್ಲಾ ಗೆಳೆಯರಿಗೆ ವಿವರಸಿದ.

ಇಂಗ್ಲಿಷ್‌ಗೌಡನ ಮಾವ ಸೊಪ್ಪಿನಗುಡ್ಡೆ ರಾಮೇಗೌಡರ ಕೈಲಿ ರುಜು ಹಾಕಿಸಿಕೊಂಡು ಅರ್ಧ ದುಡ್ಡು ಅವರಿಗೆ ಕೊಟ್ಟು ಇನ್ನರ್ಧವನ್ನು ಬ್ಯಾಂಕಿಗೆ ಸೆಕ್ರೆಟರಿ ರಾಮಾಚಾರಿ ತಾನೇ ತಿಂದುಹಾಕಿದ್ದ. ಹೀಗಾಗಿ ಆ ಅಳುಕಿನಿಂದಲೇ ಪ್ರತಿಸಾರಿಯೂ ಜಪ್ತಿ ಹಿಂದಿನ ದಿನ ಆ ಮನೆಯವರಿಗೆ ಆಳುಗಳ ಕೈಲಿ ಮೊದಲೇ ಹೇಳಿಕಳಿಸಿ ಉಪಕರಿಸುತ್ತಿದ್ದುದು ರಾಮಾಚಾರಿಯ ಧರ್ಮ ಪ್ರಜ್ಞೆ ಮಾಡುತ್ತಿದ್ದ ಕೆಲಸ.

ರಮೇಶ ಇಂಗ್ಲಿಷ್‌ಗೌಡನ ಮಾತಿಗೆ ಬೇಸರಗೊಂಡು 'ಲೋ ಇಂಗ್ಲಿಷ್‌ಗೌಡ ಇದೆಲ್ಲಾ ಕ್ರಾಂತಿಕಾರಿಗಳು ಮಾಡೋ ಕೆಲಸನೇನೋ? ಲಂಚ ಕೊಡೋದು! ಪೂಸಿ ಹೊಡೆಯೋದು! ಥುತ್' ಎಂದ.

"ಒಳ್ಳೇ ಹೇಳ್ತಿಯಾ! ಮತ್ತೇನ್ಮಾಡಂತಿ? ಸದ್ಯಕ್ಕೆ ಮಾನ ಬೀದೀ ಪಾಲಾಗೋದನ್ನು ತಪ್ಪಿಸಬೇಕೋ ಬೇಡವೋ?"

"ಕ್ರಾಂತಿಕಾರಿಗಳು ಏನು ಮಾಡಬೇಕೆಂದರೆ ಮನೆ ಮುಂದೆ ಬಡಿಗೆ ಹಿಡಿದು ನಿಂತುಕೋ ಬೇಕು. ಜಪ್ತಿಗೆ ಬರ್ತಾರಲ್ಲ ಆ ಬಡವರ ರಕ್ತ ಹೀರೋ ತಿಗಣೆಗಳು, ಅವರಿಗೆ ಹೇಳಬೇಕು, ಮನೇ ಒಳಗೆ ಕಾಲಿಟ್ಟರೆ ನಿಮ್ಮ ಬುರುಡೆ ಹೋಳು ಮಾಡಿಬಿಡ್ತೀನಿ ಅಂತ" ಎಂದು ರಮೇಶ ಹೇಳಿದ.

ಮಿಕ್ಕ ಮೂವರೂ ಇವರ ಮಾತಿಗೆ ಗಾಬರಿ ಬಿದ್ದರು. "ಅಲ್ಲೋ ಅಕಸ್ಮಾತ್



ಅವರು ಒಳಗೆ ಬಂದೇಬಿಟ್ಟರು ಅನ್ನೊ! ಆಗ!" ಎಂದು ಇಂಗ್ಲಿಷ್‌ಗೌಡ ಪ್ರಶ್ನೆ ಕೇಳಿ ಗಾಬರಿಯಿಂದ ಅವನ ಮುಂದಿನ ಉತ್ತರ ನಿರೀಕ್ಷಿಸಿದ.

"ತೆಗೆದು ಕೊಟ್ಟರೆ ಬುರುಡೆ ಎರಡು ಹೋಳಾಗಬೇಕು ಸೂಳೇಮಕ್ಕಳಿಗೆ, ಅದಕ್ಕೆಲ್ಲಾ ರೆಡಿ ಇಲ್ಲದೇ ಇದ್ರೇ ನೀನೆಂಥ ಕ್ರಾಂತಿಕಾರೀನೋ?"

"ಏ ಹೋಗೋ ಹೋಗೋ! ಒಳ್ಳೆ ಚೆನ್ನಾಗಿ ಹೇಳ್ತೀಯ ನೀನು" ಚಂದ್ರ ರಮೇಶನ ಮಾತಿಗೆ ತನ್ನ ಅಸಮ್ಮತಿ ಸೂಚಿಸಿದ.

"ಬಡ್ಡೀಮಗನೆ ನಿನ್ನ ಸೋದರಮಾವ ಅಡಮಾನ ಬ್ಯಾಂಕಿನಾಗೆ ಏನೋ ಅಗಿದಾನೆ! ಅದಕ್ಕೇ ಹಿಂಗಂತಿ."

"ಮುಚ್ಕೋತ್ತೇರಿ, ನಾನು ಅಂತವನೂಂತ ತಿಳುಕೊಂಡಿದ್ದೀಯಾ! ನೂರು ರೂಪಾಯಿಗೆ ಬೇಕಾದರೆ ಅವನ ಕುತ್ತಿಗೆ ಕುಯ್ದು ಬಿಡ್ತೀನಿ ತಿಳಿಕೋ."

"ಅದ್ಯಾಕೆ ನೂರು ರೂಪಾಯಿ! ಕುತ್ತಿಗೆ ಕುಯ್ಯೋದಕ್ಕೆ? ಇನ್ನೂ ಚೀಪಾಗೇ ವರ್ಕ್‌ಔಟ್ ಅಗುತ್ತಲ್ಲಾ?"



"ದುಡ್ಡಿಸ್ಕೊಂಡು ಖೂನಿ ಮಾಡೋರು ಕ್ರಾಂತಿಕಾರಿಗಳೇನೋ? ರೌಡಿ ಗೂಂಡಾಗಳು ಅಷ್ಟೆ."

ಗೆಳೆಯರ ವಿವಿಧ ಟೀಕೆಗಳನ್ನು ನೋಡಿ ಗಾಬರಿ ಬಿದ್ದ ಚಂದ್ರ "ಹಾಗಲ್ಲಾ ಕಣ್ರೋ ಆ ಅಯೋಗ್ಯ ನನ್ಮಗನ ಪ್ರಾಣಕ್ಕೆ ನೂರು ರೂಪಾಯಿ ಬೆಲೆಯೂ ಇಲ್ಲಾಂತ ತೋರಿಸೋದಕ್ಕೆ ಹಂಗೆ ಹೇಳಿದೇ ಅಷ್ಟೇ" ಎಂದು ವಿವರಣೆ ಕೊಡತೊಡಗಿದ.

ಅಷ್ಟರಲ್ಲಿ ತಮ್ಮಟೆ ಹೊಡೆಯುವವನು ಹತ್ತಿರಾಗಿದ್ದ. ಅವನ ಟಾಂಟಾಂ ಕೂಗು ಈಗ ಮೂವರಿಗೂ ಸ್ಪಷ್ಟವಾಗಿ ಕೇಳತೊಡಗಿತ್ತು. ಸೊಪ್ಪಿನ ಗುಡ್ಡೆ ರಾಮೇಗೌಡರ ಸ್ವತ್ತು ಹರಾಜು ಎಂದು ಅವನು ಕೂಗಿದ್ದು ಈಗ ಮೂವರಿಗೂ ಸ್ಪಷ್ಟವಾಗಿ ಕೇಳಿಸಿತು.

ಇಂಗ್ಲೀಷ್‌ಗೌಡ "ಅಯ್ಯಯ್ಯೋ ಸೂಳೇಮಗನೆ! ತೆಗೆದಾ ಮಾನ! ಬೆಳಗ್ಗೆ ದುಡ್ಡಿಸ್ಕೊಂಡು ಇಂತಾ ಮೋಸ ಮಾಡ್ತಿದ್ದಾನಲ್ಲಯ್ಯ" ಎಂದು ಗೆಳೆಯರಿಗೆ ವಿನಂತಿಸಿಕೊಂಡ.

ರಮೇಶ "ನಡೀರಿ ಅವನಿಗೆ ವಿಚಾರಿಸೋಣ" ಎಂದು ಮೂವರನ್ನೂ ಕರೆದುಕೊಂಡು ತಮಟೆ ಹಿಡಿದು ಸಾರುತ್ತಿದ್ದವನ ಕಡೆಗೆ ಹೊರಟ. ನಾಲ್ವರೂ ಹತ್ತಿರ ಹೋಗಿ ನೋಡುತ್ತಾರೆ, ತಮಟೆ ಹಿಡಿದು ಟಾಂಟಾಂ ಮಾಡುತ್ತಿದ್ದವನು ರುದ್ರನಾಗಿರದೆ ಬಾಲಯ್ಯನಾಗಿದ್ದ. ಇಂಗ್ಲೀಷ್‌ಗೌಡ ಬಾಲಯ್ಯನನ್ನು ಕರೆದು ಬೆಳಿಗ್ಗೆ ರುದ್ರನಿಗೆ ಟಾಂಟಾಂ ಸಾರಬೇಡೆಂದು ಐದು ರೂಪಾಯಿ ಇನಾಮು ಕೊಟ್ಟಿದ್ದನ್ನು ತಿಳಿಸಿದ.

"ಕೊಟ್ಟಿದ್ರೆ ಕೊಟ್ಟೋನುಂಟು ತಗೊಂಡೋನುಂಟು, ನನ್ನೇನ್ರಿ ಕೇಳ್ತೀರಾ! ಐದು ರೂಪಾಯಿ ಕೊಟ್ಟು ಟಾಂಟಾಂ ಮಾಡೂಂತ ಕಳಿಸಿಯವರೆ, ಟಾಂಟಾಂ ಮಾಡ್ತೀನಿ. ಐದ್ರೂಪಾಯಿ ಕೊಟ್ಟು ನಿಲ್ಲಿಸೂಂದರೆ ನಿಲ್ಲಿಸ್ತೀನಿ."

"ಐದ್ರೂಪಾಯಿ ಈಗೆಲ್ಲಿಂದ ತರಲಿ ಮಾರಾಯಾ? ಈವತ್ತು ನೀನು ಸುಮ್ಮನೆ ಹೋದರೆ ನಾಳೆ ಏನಾದರೂ ಮಾಡಿ ತಂದುಕೊಡ್ತೀನಿ."

"ನೀವು ಕೊಟ್ರೆ, ನಾನು ತಗಂಡೆ. ಈಗ್ಯಾಕೆ ಮಾತು, ಎಲ್ಲಿ ದಾರಿ ಬಿಡಿ" ಎಂದವನೆ ಗಟ್ಟಿಯಾಗಿ ಇಂಗ್ಲಿಷ್‌ಗೌಡನ ಮಾವನ ಹೆಸರು ಹೇಳಿ ಅವನ ಮನೆ ಉಪ್ಪಿನಕಾಯಿ ಜಾಡಿ, ಕಸಪೊರಕೆ, ಕಡೆಯುವ ಕಲ್ಲು, ಇತ್ಯಾದಿ ಐಟಂಗಳನ್ನೆಲ್ಲಾ ಪಟ್ಟಿ ಮಾಡಿ ಬಾಲಯ್ಯ ಸಾರತೊಡಗಿದ.

ಅವಮಾನದ ಮೇಲೆ ಅವಮಾನ! ದೂರದಲ್ಲಿ ಹುಡುಗಿಯರ ತಂಡ ಬೇರೆ ಬರುತ್ತಿರುವಂತೆ ಕಂಡಿಂತು. ಕ್ರಾಂತಿಕಾರಿಗಳಿಗೆ ಸ್ಮರಣೆ ಮೀರಿತು.

ಇಂಗ್ಲಿಷ್‌ಗೌಡನ ಸಂಧಾನದ ಪ್ರಯತ್ನ ಮುರಿದುಬಿದ್ದುದನ್ನು ಕಂಡು ರಮೇಶ ಕೇಸನ್ನು ಕೈಗೆ ತಗೊಂಡು "ಲೋ ಬಾಲ, ಬಾಯಿ ಮುಚ್ಚುತ್ತೀಯೊ ಮುಚ್ಚಿಸಬೇಕೋ?" ಎಂದು ಹಲ್ಲು ಕಡಿಯುತ್ತ ಕೇಳಿದ.

"ಯಾವೋನಯ್ಯಾ ನೀನು, ಮನೆ ಜಪ್ತಿ ಮಾಡಿಸಿಕೊಂಡ ಮರ್ಯಾದಸ್ತಾನೆ ತಿಕ ಮುಚ್ಚಿಕೊಂಡು ಕುಂತವನೆ! ಇವನ್ಯಾವನೋ ಬಾಯಿ ಮುಚ್ಚಿಸೋಕೆ ಬಂದ! ನಿನ್ನಪ್ಪೆತ್ತರದ ಮೊಮ್ಮಕ್ಕಳವರೆ ನನಗೆ ತಿಳುಕೋ."



"ಹೌದಾ ಇನ್ನೂ ಯಾರ‍್ಯಾರು ಇದಾರೆ ಬೊಗಳು ಸೂಳೇಮಗನೆ," ಎಂದವನೆ ರಮೇಶ ಎಲ್ಲಿಂದಲೋ ಚಕ್ಕನೆ ಚೂರಿಯೊಂದನ್ನು ಹೊರತೆಗೆದು ಬಾಲಯ್ಯನ ಕಡೆಗೆ ನುಗ್ಗಿದ.



ಬಾಲಯ್ಯನಿಗೆ ಪ್ರಾಣ ಬಾಯಿಗೆ ಬಂತು. ಈ ಹುಡುಗರು ಈ ಮಟ್ಟದಲ್ಲಿ ನಿಶ್ಚಯಿಸಿಕೊಂಡು ಬಂದಿದ್ದಾರೆಂದು ಅವನು ಊಹಿಸಿರಲಿಲ್ಲ. 'ಅಯ್ಯಯ್ಯೋ ನಿಮ್ಮ ದಮ್ಮಯ್ಯ. ನನ್ನ ಜೀವ ತೆಗೀಬೇಡ್ರಿ' ಎಂದು ತಮಟೆ ಅಡ್ಡ ಹಿಡಿದ. ರಮೇಶ ಅವನ ತಮಟೆ ಚರ್ಮಕ್ಕೆ ಚಾಕು ಚುಚ್ಚಿ ಸಿಗಿದು ಹಾಕಿದ.

ರಮೇಶನ ಕ್ರಾಂತಿ ಪಿಪಾಸೆಯನ್ನು ಕಂಡು ಕಂಗಾಲಾದ ಚಂದ್ರ, ಅಂಗಾರ, ಬೇಗ ಬೇಗ ನುಗ್ಗಿ ರಮೇಶನನ್ನು ಹಿಡಿದುಕೊಂಡು ಬಾಲಯ್ಯನನ್ನು ದೂರ ತಳ್ಳಿದರು. ಈ ಗೊಂದಲದಲ್ಲಿ ಇಂಗ್ಲಿಷ್‌ಗೌಡ "ಇವನ ಮನೆ ಹಾಳಾಗ, ಖೂನಿ ಕೇಸಿಗೆ ನನ್ ಸಿಕ್ಕಾಕಿಸಿದ ಬಡ್ಡೀಮಗ" ಎಂದು ಗುಂಪು ಬಿಟ್ಟು ಎತ್ತಲೋ ಓಡಿಹೋದ.

ಅಂಗಾರ, ಚಂದ್ರ ಇಬ್ಬರೂ ಸಿಟ್ಟಿನಿಂದ ಕುದಿಯುತ್ತಿದ್ದ ರಮೇಶನನ್ನು ಹಿಡಿದುಕೊಂಡು ಸಮಾಧಾನ ಮಾಡಿದರು. "ಇನ್ನೊಂದು ಸಾರಿ ಕೆಸರೂರಿನ ಪ್ಯಾಟೇಲಿ ಬಾಯಿ ಬಿಟ್ಟೆಯೋ ನಿನ್ನ ಹೊಟ್ಟೆ ತಮಟೆ ಸಿಗಿದ ಹಾಗೆ ಸಿಗಿತೀನಿ ನೋಡ್ಕೋ" ಬಾಲಯ್ಯನಿಗೆ ಹೇಳಿದ ರಮೇಶ. ಬಾಲಯ್ಯನಿಗೆ ಅದರಲ್ಲಿ ಯಾವ ಸಂಶಯವೂ ಇರಲಿಲ್ಲ. "ಸಂಶಯಾತ್ಮಾ ವಿನಶ್ಯತಿ".

ಆತ ರಮೇಶನ ಮಾತನ್ನು ದೃಢವಾಗಿ ನಂಬಿ, "ಇಲ್ರಪ್ಪಾ ನಿಮ್ಮ ದಮ್ಮಯ್ಯಾ. ನಾನೂ ನಿಮ್ಮಂಗೆ ನರಮನ್ಸ, ಮಕ್ಳೂಮರಿ ಇರಾಂವ, ನಂಗ್ಯಾಕೆ ಬೇಕು ಈ ಹೇಲು ತಿನ್ನಾ ಕೆಲಸ" ಎಂದು ಸ್ವಲ್ಪದರದಲ್ಲಿ ಉಳಿದ ತನ್ನ ಪ್ರಾಣದ ಬಗ್ಗೆ ಚಿಂತಿಸುತ್ತಾ ನೊಂದು ನುಡಿದ.

ಪಕ್ಕದಲ್ಲೊಂದು ನೀಳಕಾಯದ ವ್ಯಕ್ತಿ "ಏನ್ರಪ್ಪಾ ಯಾಕೆ ಹೀಗೆ ಗಲಾಟೆ ಮಾಡ್ತಿದ್ದೀರಿ?" ಎಂದಿತು. ನಾಲ್ವರೂ ತಿರುಗಿ ನೋಡಿದರು. ಶಾಮನಂದನ ಅಂಗಾಡಿ ವಿಷಾದದ ಮುಖ ಹಾಕಿಕೊಂಡು ನಿಂತಿದ್ದ. ಚಾಕು ಮಡಚಿ ಜೇಬಿಗೆ ಹಾಕಿಕೊಳ್ಳುತ್ತಾ ರಮೇಶ ಅಸಡ್ಡೆಯಿಂದ "ಏನಿಲ್ಲಾ! ಉಲ್ಟಾ ಮಾತಾಡ್ತಿದ್ದ. ಅದ್ಕೇ ಸರಿಯಾಗಿ ಎಚ್ಚರಿಕೆ ಕೊಟ್ಟಿದ್ದೀವಿ. ಕ್ರಾಂತಿ ಮಾಡೋರ ಹತ್ರ ಹುಡುಗಾಟ ಆಡ ಬೇಡಾಂತ" ಎಂದ.

ಅಂಗಾಡಿ ಬಾಲಯ್ಯನಿಗೆ "ಯಾರಯ್ಯಾ ನೀನು" ಎಂದ? "ಯೋವ್ನೋನೋ ಯಾವನಿಗೆ ಗೊತ್ತು ಬಡವರ ಮನೇ ಹರಾಜು ಹಾಕಕ್ಕೆ ಹೋಗಿದ್ದ," ಎಂದ ರಮೇಶ.

"ಏನಿಲ್ಲ ಸ್ವಾಮಿ, ಜಪ್ತಿ ಹರಾಜಿನದು ಟಾಂಟಾಂ ಮಾಡ್ತಿದ್ದೆ. ಅದ್ಕೇ ಎಲ್ಲಿಂದಲೋ ಬಂದು ಬಾಯ್ಮುಚ್ಚು ಅಂತ ಮೈಮೇಲೆರಗಿ ತಮ್ಮಟೆ ಹರಿದಾಕಿಬಿಟ್ರು" ಎಂದ ಬಾಲಯ್ಯ.

"ಯಾರ ಮನೆ ಹರಾಜು ಮಿಸ್ಟರ್" ಎಂದು ಅಂಗಾಡಿ ರಮೇಶನನ್ನು ಕೇಳಿದ.

"ಯಾರದೋ ನಾವ್ಯಾಕ ತಿಳ್ಕೋಳೋಕೆ ಹೋಗೋಣ ಸಾರ್. ದಿನಾ ಯಾರದೋ ಬಡವರ ಮನೆ ಹರಾಜಾಗುತ್ತೇ. ಅವರ ಮನೆ ಪಾತ್ರೆ ಪರಡಿ ಸಾವ್ಕಾರರ ಕೈ ಸೇರುತ್ತೆ" ರಮೇಶ ಹೇಳಿದ.

"ಮತ್ಯಾಕೆ ಅವನ ತಮಟೆಗೆ ಚೂರಿ ಹಾಕಿದಿರಿ?"

"ನಾನ್ಯಾಕೆ ತಮಟೆಗೆ ಚೂರಿ ಹಾಕಲಿ. ಅವನೇ ತಮಟೆ ಅಡ್ಡ ಹಿಡಿದ. ತಮಟೆ ಹರಿದುಹೋಯ್ತು. ಅವಂದೇ ತಪ್ಪು."

ರಮೇಶನ ಒರಟಾಟಿಕೆಗೆ ಬೇಸತ್ತ ಅಂಗಾಡಿ ಈ ಅಸಂಬದ್ಧ ಪ್ರಹಸನ ಏನೆಂದೂ ಅರ್ಥವಾಗದೆ "ಸರಿಯಪ್ಪಾ, ನೀನು ಮತ್ತೆ ಮಾತಾಡಿ ಜಗಳ ಅರಂಭಿಸಬೇಡ. ನಡಿ" ಎಂದು ಬಾಲಯ್ಯನನ್ನು ಅತ್ತ ಕಳಿಸಿ ಕೆಸರೂರಿನ ಟಿಬಿ ಕಡೆಗೆ ಸರಸರ ನಡೆಯತೊಡಗಿದ.

ಅಂಗಾಡಿ ಮತ್ತು ಬಾಲಯ್ಯ ಅತ್ತ ಹೋದಕೂಡಲೇ ಅಂಗಾರ "ಲೋ



ಬಡ್ಡೀ ಮಗನೆ ಆ ಬಡಪಾಯಿ ಮೇಲೆ ಯೋಕೋ ಕತ್ತಿ ಮಸೆಯೋದಕ್ಕೆ ಹೋದೆ. ನೋಡು ಹೇಡಿಸೂಳೇಮಗ ಇಂಗ್ಲಿಷ್‌ಗೌಡ ಜಗಳ ಹಚ್ಚಾಕಿ ಎತ್ಲಾಗೋ ಓಡೋಗಿದ್ದಾನೆ. ಅವನ ಮಾವಾನೂ ಮರ್ಯಾದೆ ಹರಾಜು ಹಾಕಿಸಿಕೊಳ್ತಾ ಮನೇಲಿ ಇದ್ದಾನೆ. ಅವರು ಯಾರಿಗೂ ಇಲ್ದೆ ಇರೋ ಕೋಪ ನಿಂಗ್ಯಾಕೋ?" ಎಂದ.

ರಮೇಶನಿಗೆ ಇಂಗ್ಲಿಷ್‌ಗೌಡನ ಪುಕ್ಕಲು ನೋಡಿ ಇನ್ನೊಮ್ಮೆ ಕೋಪ ಮರುಕಳಿಸಿತು. "ತುತ್! ಈ ಗೌಡ ಸೂಳೇಮಕ್ಕಳ ಹಣೇಬರಾನೇ ಹಿಂಗೆ, ಗುಳ್ಳೇನರಿ ಸೂಳೇಮಕ್ಳು." ಎಂದು ಇಂಗ್ಲಿಷ್‌ಗೌಡನ ಜಾತಿಯನ್ನು ಬಯ್ಯತೊಡಗಿದ.

"ನೀ ಯಾವ ಜಾತಿನೋ?" ಎಂದ ಅಂಗಾರ.

"ನಂಗ್ಯಾವ ಜಾತಿ. ಅವತ್ತು ಮೀಟಿಂಗ್ ಮಾಡಿ ಇನ್ಮೇಲೆ ಜಾತಿ ಗೀತ ಎಲ್ಲಾ ಬಿಟ್ಟು ಬಿಡಬೇಕು ಅಂತ ತೀರ್ಮಾನ ತೆಗೊಳ್ಳಿಲ್ಲೇನೋ!"

"ಮತ್ಯಾಕೆ ಅವನಿಗೆ ಗೌಡಾಂತ ಜಾತಿ ವಿಷ್ಯ ಎತ್ತಿ ಬಯ್ತೀಯಾ?"

"ಮತ್ಯಾಕೆ ಆ ಸೂಳೇಮಗ ಜಾತಿಬುದ್ಧಿ ತೋರಿಸಕೋಬೇಕು. ಅದಕ್ಕೆ."

"ಅದೆಲ್ಲಾ ಇರ್ಲಿ. ಇವನು ಎತ್ಲಾಗಿ ಓಡೋದ ಪತ್ತೆ ಮಾಡಿ ಅವನಿಗೆ ಸರಿಯಾಗಿ ಬೆಂಡೆತ್ತಬೇಕು" ಮುಂದಿನ ಕಾರ್ಯಕ್ರಮವನ್ನು ಸೂಚಿಸಿದ ಅಂಗಾರ.

"ತುತ್ ನಮ್ಮೂರ ಹುಡುಗೀರ ಉಚ್ಚೆ ಕುಡಿಯೋ ಯೋಗ್ಯತೆ ಇಲ್ಲ ಇವನಿಗೆ," ಎಂದು ಚಂದ್ರ ತಿರಸ್ಕಾರದಿಂದ ಬಯ್ದು.

"ಆ ಯೋಗ್ಯತೆ ನಿನಗೆ ಖಂಡಿತಾ ಇದೆ ಕಣೋ ಚಂದ್ರ. ಇನ್ಮೇಲೆ ಅದನ್ನೇ ಕುಡಿಯುವಿಯಂತೆ" ಎಂದು ಇಬ್ಬರು ಗೆಳೆಯರೂ ಅದನ್ನೇ ಹಿಡಿದು ಚಂದ್ರನಿಗೆ ಗೇಲಿ ಮಾಡತೊಡಗಿದರು. ಚಂದ್ರ ಮತ್ತೆ ಗಾಬರಿಬಿದ್ದು ಅದನ್ನು ನಾನು ಯಾವರ್ಥದಲ್ಲಿ ಹೇಳಿದೆ, ಹೇಗೆ ಅರ್ಥ ಮಾಡಿಕೊಳ್ಳಬೇಕು ಇತ್ಯಾದಿ ವಿವರಣೆ ಕೊಡತೊಡಗಿದ.

ಮೂರು ಜನವೂ ತಮ್ಮ ಕ್ರಾಂತಿಯನ್ನು ಅನಿರ್ದಿಷ್ಟ ಕಾಲದವರೆಗೆ ಮುಂದೂಡಿ ಹೆದರಿಕೊಂಡು ಓಡಿಹೋದ ಇನ್ನೊಬ್ಬ ಕ್ರಾಂತಿಕಾರಿಯನ್ನು ಹಿಡಿದು ಕೋರ್ಟ್ ಮಾರ್ಷಲ್ ಮಾಡಲು ಹುಡುಕಿಕೊಂಡು ಹೊರಟರು.

"ಇವನ ಸಹಾಯಕ್ಕೇಂತ ನಾವು ಹೋದರೆ ಇವನೇ ಓಡೋದ್ನಲಯ್ಯಾ!"

"ಅವನಿಗೆ ನಾವು ಹೊಡೆಯೋದಕ್ಕೆಂತ ಹೋದರೆ ಇವನಿಗೆ ಯಾಕಯ್ಯ ಪುಕ್ಕಲು ಹತ್ತಿಕೊಂಡಿತು?"

"ಅಲ್ಲಾ ಇವನಿಗೇ ಯಾರಾದರೂ ಚೂರಿ ತೋರಿಸಿದರೆ ಇನ್ನು ಯಾವ

ತರ ಓಡೋಗಬಹುದು?"

"ತತ್ ಹೆದರುಪುಕ್ಲ."

"ಹೇತ್ಲಾಂಡಿ."

"ಸಿಕ್ಲೀ ಅವನಿಗೆ."

ಇತ್ಯಾದಿತ್ಯಾದಿ ಬೈಗುಳಭರಿತ ಸಂಭಾಷಣೆಗಳು ಅವರು ಸಾಗಿದ ದಿಕ್ಕಿನಿಂದ ಕತ್ತಲಲ್ಲಿ ಕೇಳಿಬಂದುವು.





# ಅಧ್ಯಾಯ ೪

ಇಂಗ್ಲಿಷ್‌ಗೌಡ ನಸುಗತ್ತಲಲ್ಲಿ ಚರಂಡಿ ಹಾರಿ ಓಡಿದ. ಅವನ ಮನಸ್ಸಿನ್ಲಲಿ ಮಿಕ್ಕ ಮೂವರು ತಮ್ಮ ಕ್ರಾಂತಿ ಕಾರ್ಯಕ್ರಮದ ಅಂಗವಾಗಿ ಬಾಲಯ್ಯನಿಗೆ ಚೂರಿ ಹಾಕಿದ್ದೇ ತಮ್ಮ ಹಿಂದೆ ಓಡಿಬರುತ್ತಾರೆಂದು ಊಹೆ. ಸುಮಾರು ಒಂದೆರಡು ಫರ್ಲಾಂಗು ಓಡಿದನಂತರ ಇಂಗ್ಲಿಷ್‌ಗೌಡನಿಗೆ ಏದುಸಿರು ಬರತೊಡಗಿತು. ಓಡುವುದನ್ನು ನಿಲ್ಲಿಸಿ ಹಿಂದುರುಗಿ ನೋಡಿದ. ಇವನ ಹಿಂದೆ ಯಾರೂ ಓಡಿಬರುತ್ತಿರಲಿಲ್ಲ. ಸರಿ ಇವರು ಮೂವರೂ ಹಾಗಾದರೆ ಈಗಾಗಲೇ ಪೋಲೀಸನವರ ಕೈಗೆ ಸಿಕ್ಕಿಕೊಂಡು ನಾನೇ ಖೂನಿ ಮಾಡಿಸಿದೆ ಅಂತ ಹೇಳಿಕೆ ಕೊಟ್ಟಿರುತ್ತಾರೆ ಎಂದು ಊಹಿಸಿದ. ಅವನಿಗೆ ದುಃಖವಾಗತೊಡಗಿತು. ತನ್ನ ಮಾವನ ಮೇಲೇನೂ ಅವನಿಗೆ ಅಷ್ಟೊಂದು ವಿಶ್ವಾಸ ಇರಲಿಲ್ಲ. ಏನೋ ಸ್ವಂತ ಮಾವನ ಮರ್ಯಾದೆ ಪೇಟೆ ಬೀದಿಯಲ್ಲಿ ಹರಾಜಾಗುತ್ತಲ್ಲಾಂತ ನೋಡಲಾರದೆ ಅದನ್ನು ತಡೆಯಲು ಕೊಂಚ ಪ್ರಯತ್ನ ಮಾಡಿದ್ದ. ಆದರೆ ಈ ಪ್ರಯತ್ನದಲ್ಲಿ ಅವನು ರಮೇಶನಂಥ ಉಗ್ರಗಾಮಿಯ ಸಹಾಯ ತಗೊಂಡದ್ದೇ ದೊಡ್ಡ ತಪ್ಪಾಯ್ತೆಂದು ಅವನಿಗೆ ಅನ್ನಿಸತೊಡಗಿತು. ರಮೇಶನನ್ನು ಎದುರು ಹಾಕಿಕೊಂಡರೆ ಇರುವಷ್ಟೇ ಅಪಾಯ ಗೆಳೆತನದಿಂದಲೂ ಇರುವಂತೆ ತೋರುತ್ತದೆಲ್ಲಾ ಎಂದು ಚಿಂತಿಸುತ್ತ ಮುನ್ನಡೆದ.

ಓಡುತ್ತೋಡುತ್ತ ಇಂಗ್ಲಿಷ್‌ಗೌಡ ಕೆಸರೂರಿನ ಹೊರವಲಯಕ್ಕೆ ಬಂದಿದ್ದ. ಕೊನೆಯ ಬೀದಿ ದೀಪದಡಿ ಬಂದಾಗ ಎಲ್ಲಿಗೆ ಹೋಗುವುದು? ಎಂಬ ಸಮಸ್ಯೆ ಇದಿರಾಯ್ತು. ಹೇಗಾದರೂ ಮಾಡಿ ಈ ರಾತ್ರಿ ಪೋಲೀಸರ ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳಬೇಕು. ಇವತ್ತು ಏನಾಯ್ತೆಂದು ನಾಳೆಗೊತ್ತಾಗುತ್ತೆ. ಅನಂತರ ಮುಂದಿನ ಕಾರ್ಯಕ್ರಮ ಯೋಚಿಸೋಣ ಎಂದು ಆಲೋಚಿಸಿ ಕೆಸರೂರಿನಿಂದ ಒಂದೆರಡು ಮೈಲಿ ದೂರದಲ್ಲಿದ್ದ ದೊಡ್ಡಮ್ಮನ ಮನೆಗೆ ಹೋಗಲು ನಿರ್ಧರಿಸಿ ಸರಸರ ನಡೆದ. ಕೆಸರೂರಿನ ಮಂಡಿ ಮರ್ಚೆಂಟ್ ಕೃಷ್ಣೇಗೌಡರ ತೋಟದ ಹಿಂದಿನಿಂದ ಹೋಗುವ ಒಳದಾರಿಯಲ್ಲಿ ಹೋಗೋಣೆಂದು ನಿರ್ಧಾರ ತಗೊಂಡು ಅವರ ತೋಟದ ಬೇಲಿ ಹಾರಿ ಏಲಕ್ಕಿ ತೋಟದ ಒಳಗಿನ ಕಾಲುಹಾದಿಯಲ್ಲಿ ಕಣ್ಣಂದಾಜಿನ ಮೇರೆಗೆ ನಡೆಯತೊಡಗಿದ.



ದೂರದಲ್ಲಿ ಎಲೆಗಳ ನಡುವೆ ಇಣುಕುತ್ತಿದ್ದ ಕೃಷ್ಣೇಗೌಡನ ಮನೆ ದೀಪಗಳು ಹತ್ತಿರ ಹತ್ತಿರಾದವು. ಆತನ ಮನೆ ಹತ್ತಿರಾದಾಗ ಇಂಗ್ಲಿಷ್‌ಗೌಡನ ಕಿವಿಗೆ ಏನೋ ತೋಟದೊಳಗೆ ಬರ ಬರ ಓಡಾಡಿದ ಸದ್ದಾಯ್ತು. ಏನಿರಬಹುದು? ಏಲಕ್ಕಿ ವಾಸನೆಗೆ ತೋಟದೊಳಗಡೆ ನಾಗರ ಹಾವುಗಳು ಬರುತ್ತವಂತೆ. ಅವೇನಾದರೂ ತರಗೆಲೆಯ ಮೇಲೆ ಹರಿಯುತ್ತಿವೆಯೋ? ಅಥವಾ ಕೃಷ್ಣೇಗೌಡನ ಮನೆ ಕಸದ ಗುಂಡಿಯ ಎಂಜಲು ತಿನ್ನಲು ಬಂದಿರುವ ಕಂತ್ರಿ ನಾಯಿಗಳೋ? ಇಂಗ್ಲಿಷ್‌ಗೌಡನಿಗೆ ಕೊಂಚ ದಿಗಿಲಾಯ್ತು. ನಾಯಿ ನರಿಗಳ ಕೈಯಲ್ಲಿ ನಿರಾಯುಧನಾಗಿ ಸಿಕ್ಕಿಕೊಳ್ಳೋ ಒಂದು ದೊಣ್ಣೆಯನ್ನೋದರ ಬದಲು ಕಲ್ಲನ್ನೋ ಕೈಯಲ್ಲಿ ಹಿಡಿದಿರೋದು ವಾಸಿ ಎನ್ನುತ್ತಾ ಅತ್ತಿತ್ತ ನೋಡಿದ. ಮಬ್ಬು ಬೆಳಕಿನಲ್ಲಿ ಬರಿಯ ಏಲಕ್ಕಿ ಗಿಡಗಳು ಮಾತ್ರ ಕಂಡವು. ಕಾಲಿಗೆ ಏನೋ ಗಟ್ಟಿ ತಾಗಿದಂತಾಯ್ತು. ಬಗ್ಗಿ ನೋಡಿದ. ಕಲ್ಲು! ಅದೇ ಇರಲಿ ಎಂದು ಕಲ್ಲು ತೆಗೆದುಕೊಂಡ. ಮತ್ತೆ ತೋಟದೊಳಗಡೆ ಜರಬರ ಸದ್ದು. ಜೊತೆಗೆ ಅವನೇ! ಅವನೇ! ಸೂಳೇಮಗ! ಬಿಡಬಾರ್ದು ಈ ಸಾರಿ ಎಂದು ಮನುಷ್ಯರ ಮಾತು ಕೇಳಿಸಿತು. ಇಂಗ್ಲೀಷ್‌ಗೌಡನಿಗೆ.

ಇದರಿಂದ ಝುಂಗಾಬಲವೇ



ಉಡುಗಿದಂತಾಯ್ತು. ಯಾರು? ಏಕೆ? ಏನೊಂದೂ ಅರ್ಥವಾಗದಿದ್ದರೂ ಯಾರೋ ತನ್ನನ್ನು ಹಿಡಿಯಲು ಹಿಂದೆ ಬರುತ್ತಿದ್ದಾರೆ ಎಂಬುದಂತೂ ಖಚಿತವಾಯ್ತು. ಬಲಕ್ಕೆ ತಿರುಗಿ ಬಂದ ದಾರಿಯ ದಿಕ್ಕಿನಲ್ಲೇ ಧಡ ಧಡ ಓಡತೊಡಗಿದ. ತಕ್ಷಣ "ಅರರೇ ಓಡ್ದ ಹಿಡುಕೊಳ್ರೋ ಬಿಡಬ್ಯಾಡಿ, ಮಲ್ಲಪ್ಪಾ ಆ ಕಡಿಂದಾ ಬಾ, ತಿಮ್ಮಾ ನಾಯಿ ಛೂ ಬಿಡು" ಇತ್ಯಾದಿ ನಾನಾ ಬಗೆಯ ಕೂಗುಗಳು ಏಳ ತೊಡಗಿದವು. ಇಂಗ್ಲಿಷ್‌ಗೌಡ ಹೊಟ್ಟೆಯೊಳಗಿಂದ ಭೀತಿ ಉಕ್ಕಿತು. ಸುಮ್ಮನೆ ಕಣ್ಣುಮುಚ್ಚಿ ಓಡಲಾರಂಭಿಸಿದ. ಕೃಷ್ಣೇಗೌಡನ ತೋಟದ ಬೇಲಿಯನ್ನು ಒಂದೇ ಏಟಿಗೆ ಹಾರಿ ಮೇನ್ ರೋಡಿನಲ್ಲಿ ಓಡಿದ. ಮೊದಲೇ ಓಡಿ ದಣಿದಿದ್ದ ಇಂಗ್ಲಿಷ್‌ಗೌಡನ ಕಾಲುಗಳು ಸೋಲ ತೊಡಗಿದವು. ಹಿಂದುಗಡೆ ಅನೇಕರು ದುಪುದುಪು ಓಡಬರುವ ಸದ್ದು ಕೇಳಿತು. ಹಿಂದೆ ಬಯ್ಯುತ್ತ ಓಡಿ ಬರುತ್ತಿದ್ದವನೊಬ್ಬ ಹತ್ತಿರಾಗಿ ಇಂಗ್ಲಿಷ್‌ಗೌಡನ ಅಂಗಿ ಕಾಲರನ್ನು ಹಿಂದಿನಿಂದ ಹಿಡಿದೇಬಿಟ್ಟ. ಅವನು ಜಗ್ಗಿದ ಹೊಡೆತಕ್ಕೆ ಕಾಲರ್ ಕಿತ್ತು ಗುಂಡಿಗಳೆಲ್ಲ ಬಿಚ್ಚಿಕೊಂಡು ಅಂಗಿ ಒಂದೆರಡು ಕಡೆ ಪರಕ್ ಎಂದು ಹರಿಯಿತು.

ಹಿಡಿದುಕೊಂಡವ "ಸೂಳೇಮಗನೇ ಓಡ್ತೀಯಾ?" ಎಂದು ಪಟಪಟ ಇಂಗ್ಲೀಷ್‌ಗೌಡನ ಮುಖ ಮೋರೆ ನೋಡದೆ ಹೊಡೆದ. "ಹಾಕಿ ನಾಲ್ಕು! ವದೀರಿ! ತದುಕಿ!" ಎಂದೆನ್ನುತ್ತಾ ಇನ್ನೂ ನಾಲ್ಕಾರು ಜನ ಓಡಿಬಂದು ಸೇರಿಕೊಂಡರು. ಇಂಗ್ಲೀಷ್‌ಗೌಡನಿಗೆ ಇನ್ನಷ್ಟು ಹೊಡ್ತ ಬಿದ್ದವು.

ಕೈಲಿದ್ದ ಕಲ್ಲನ್ನು ಕೆಳಗೆ ಹಾಕುತ್ತಾ "ಏ ಯಾರ್ರೋ ನೀವು?" ಎಂದು ಇಂಗ್ಲಿಷ್‌ಗೌಡ ಗಟ್ಟಿಯಾಗಿ ಅರಚಿದ.

"ಕಲ್ಲೆಸೀತಾನೆ ನೋಡಿ, ಕಲ್ಲೆತ್ತಿಕೊಳ್ಳಿ, ಮಾಲು ಸಮೇತ ಕಳ್ಳನ್ನ ತಗೊಂಡೋಗಿ ಪೋಲೀಸಿಗೆ ಕೊಡಬೇಕು," ಎಂದು ಒಬ್ಬ ಗುಂಪಿನಿಂದ ಕೂಗಿದ. ಯಾರೋ ಇಂಗ್ಲಿಷ್‌ಗೌಡ ಎಸೆದಿದ್ದ ಕಲ್ಲನ್ನು ಕೈಗೆತ್ತಿಕೊಂಡ.

"ಇವನ್ನ ಎಳಕೊಂಡು ಹೋಗಿ ಸಾವ್ಕಾರ್ರ ಮನೆ ಕಂಬಕ್ಕೆ ಕಟ್ಟಾಕಿ ಬಿಡೋಣ ಕಣ್ರೋ" ಎಂದ ಮತ್ತೊಬ್ಬ.

ಹಿಡಿದ ಕಳ್ಳನನ್ನು ಏನು ಮಾಡುವುದೆಂದು ಅವರವರಲ್ಲೇ ಚರ್ಚೆಯಾಗತೊಡಗಿತು. ಯಾರೂ ಇಂಗ್ಲಿಷ್‌ಗೌಡನಿಗೆ ಅವನು ಮಾಡಿದ ಭಯಾನಕ ಅಪರಾಧ ಏನು ಎಂದು ತಿಳಿಸುವ ತೊಂದರೆ ತಗೊಳ್ಳಲಿಲ್ಲ. ಅವರು ಅವನನ್ನು ತಳ್ಳುತ್ತಾ ಬಯ್ಯುತ್ತಾ ಅವರ ಸಾವ್ಕಾರರನ್ನು ನಿರೀಕ್ಷಿಸುತ್ತಾ ಕೆಸರೂರಿನ ಪೋಲೀಸ್ ಸ್ಟೇಷನ್ನಿಗೆಂದು ಸಾವಕಾಶವಾಗಿ ಮುಂದುವರಿದರು.

## ಅಧ್ಯಾಯ ೫

ರಮೇಶ, ಚಂದ್ರ ಅಂಗಾರ ತಮ್ಮ ಕೈ ಕೊಟ್ಟ ಕ್ರಾಂತಿಕಾರಿ ಗೆಳೆಯನನ್ನು ಶಿಕ್ಷಿಸಲು ಹುಡುಕುತ್ತಾ ಇಂಗ್ಲಿಷ್‌ಗೌಡ ಓಡಿದ ದಿಕ್ಕಿನಲ್ಲಿ ಕೆಸರೂರಿನ ಗಲ್ಲಿ ಬೀದಿಗಳನ್ನೆಲ್ಲಾ ಹುಡುಕುತ್ತಿರಬೇಕಾದರೆ ಅವರಿಗೆ ಇನ್ನೊಬ್ಬ ಕ್ರಾಂತಿಕಾರಿ ಗೆಳೆಯ ರಫೀಕ್ ಸಿಕ್ಕ.

"ಏನೋ ಸಾಬಿ ಇಷ್ಟೊತ್ತಲ್ಲೀ?" ಎಂದು ಅಂಗಾರ ಖುಷಿಯಿಂದ ಕೇಳಿದ.

ರಫಿಗೂ ಈ ಗೆಳೆಯರನ್ನು ಇಷ್ಟು ಹೊತ್ತಿನಲ್ಲಿ ಅನಿರೀಕ್ಷಿತವಾಗಿ ನೋಡಿ ತುಂಬಾ ಆನಂದವಾಯ್ತು. "ಎಲ್ಲಿಗೆ ಹೊರಟ್ರೋ ಬಡ್ಡೀಮಕ್ಳಾ?" ಎಂದ.

"ಆ ಇಂಗ್ಲಿಷ್‌ಗೌಡ ಬೋಳಿಮಗ ನಮಗೂ ಇನ್ಯಾವನಿಗೋ ಜಗಳ ಹಚ್ಚಾಕಿ ನಾನು ಅತ್ಲಾಗಿ ಗುದ್ದಾಡ್ತ ಇರಬೇಕಾದರೆ ಇತ್ಲಾಗಿ ಓಡೋಗಿ ಬಿಡೋದಾ? ಅವನ್ನ ಹಿಡುಕೊಂಡು ನಾಲ್ಕು ಸರಿಯಾಗಿ ತದುಕೋಣಾಂತ ಹುಡುಕ್ತಿದ್ದೀವಿ. ಈವತ್ತು ರಾತ್ರಿ ಎಲ್ಲಾ ಆದರೂ ಸರಿ, ಅವನ್ನ ಮಾತ್ರ ಬಿಡೋದಿಲ್ಲ," ಎಂದ ಅಂಗಾರ.

"ನಾನು ಊಟಕ್ಕೇಂತ ರೂಮಿನ ಬೀಗ ಹಾಕ್ಕೊಂಡು ಬರಬೇಕಾದರೆ ಅವನು ಕಲ್ಲು ಸೇತುವೆ ದಾರಿಲಿ ಹೋದಂಗಾಯ್ತು. ಅವನೇ ಹೌದೋ ಅಲ್ಲೊ ಸರಿಯಾಗಿ ಗೊತ್ತಿಲ್ಲಪ್ಪಾ. ಅಂತೂ ಅವನ ಹಾಗೇ ಇದ್ದ," ಎಂದ ರಫಿ.

"ಅವನೇ! ಅವನೇ! ಈ ಕಡೇನೇ ಬಂದ ಅವನು. ನೀ ಯಾಕೆ ಸುಳ್ಳೇಳ್ತಿಯ!" ಎಂದು ಅವನ ಮಾತನ್ನು ಸಮರ್ಥಿಸಿದ ಅಂಗಾರ.

"ಬಾರೋ ಲೋ ರಫಿ, ಆ ನನ್ಮಗನಿಗೆ ಇವತ್ತು ಸರಿಯಾಗಿ ಬುದ್ದಿ ಕಲಿಸಬೇಕು" ಎಂದು ರಮೇಶ ರಫಿಯನ್ನು ಕರೆದ.

"ನಾನು ಊಟಕ್ಕೆ ಹೊರಟಿದ್ನಲ್ಲೋ."

"ಬಡ್ಡಿಮಗನೆ, ತೆಗೆದೆಯಲ್ಲಾ ನಿನ್ನ ಬುದ್ಧಿ, ನಾವೇನು ಊಟ ತಿಂಡಿ ಮಾಡಿ ಹೊರಟಿದ್ದೀವೇನೋ? ನೀ ಕರೆದಾಗ ಮಾತ್ರ ನಾವು ಬರಬೇಕು. ನಾವು ಕರೆದರೆ ಹಿಂಗಂತೀಯಾ!" ಎಂದು ರಮೇಶ ರಫಿ ಮೇಲೆ ರೇಗಿದ. ರಫಿ ಮರುಮಾತಾಡದೆ ಅವರ ಗುಂಪಿಗೆ ಸೇರಿಕೊಂಡು ಹೊರಟ.



ಅಂಗಾರ ರಫಿಗೆ ಪೇಟೆಬೀದಿಯಲ್ಲಿ ನಡೆದುದನ್ನೆಲ್ಲಾ ಸವಿವರನಾಗಿ ವಿವರಿಸಿದ.

"ಕರೆಕ್ಟ್, ಅವನಿಗೆ ಈವಾಗ್ಲೆ ಸರಿಯಾಗಿ ಬುದ್ದಿ ಕಲಿಸಬೇಕು. ಮನ್‌ಷಾ ಅವನು ಒಳ್ಳೇವನೆ. ಆದರೆ ಒಳ್ಳೇ ಟೈಂನಲ್ಲಿ ನಮ್ಮಕ್ ಹರಾಂ ಬುದ್ಧಿ ತೊರಿಸ್ತಾನೆ. ಈಗಲೇ ಅವನಿಗೆ ಬುದ್ಧಿ ಕಲಿಸೋದು ಒಳ್ಳೇದು," ಎಂದು ಅವರ ತೀರ್ಮಾನಕ್ಕೆ ರಫಿ ಸರ್ವಾನುಮತದ ಸಮ್ಮತಿ ತೋರಿಸಿದ. ನಾಲ್ವರೂ ಕಲ್ಲು ಸೇತುವೆ ಕಡೆಯ ಕಾಡಿನ ಹಾದಿಯತ್ತ ಸಾಗತೊಡಗಿದರು.



ಕೆಸರೂರಿನ ಟಿಬಿ ಬಳಿ ಬಲಕ್ಕೆ ತಿರುಗವ ಹೊತ್ತಿಗೆ ಆ ನಾಲ್ವರಿಗೂ ದೊಣ್ಣೆಗಳನ್ನು ಹಿಡಿದುಕೊಂಡು ಗಲಾಟೆ ಮಾಡುತ್ತಿದ್ದ ಒಂದು ಗುಂಪು ಇದಿರಾಯ್ತು.

ಇದಿರಾದ ಗುಂಪನ್ನು ಕೊಂಚ ಹತ್ತಿರದಿಂದ ಇಣುಕಿ ನೋಡಿದ ರಫಿ, "ಅರೆತ್ತೇರಿ!! ಇಂಗ್ಲಿಷ್‌ಗೌಡ! ಇಲ್ಯಾಕೋ ಇದೀಯ?" ಎಂದ. ರಮೇಶ, ಅಂಗಾರ,

ಚಂದ್ರ ಎಲ್ಲಾ ಕುತೂಹಲದಿಂದ ಅತ್ತ ತಿರುಗಿದರು. ನೋಡಿದರೆ ಇಂಗ್ಲಿಷ್‌ಗೌಡ! ಕಾಲರೆಲ್ಲಾ ಹರಿದಿದೆ! ಗುಂಡಿಗಳೆಲ್ಲಾ ಬಿಚ್ಚಿದೆ. ತಲೆಕೆದರಿಕೊಂಡಿದೆ! ಮುಖ ಊದಿಹೋಗಿದೆ.

"ಯಾವ್ನೋನೋ ನಿನಗೆ ಹೊಡೆದೋನು?" ಎಂದು ರಫಿ ರೋಷದಿಂದ ಕೇಳಿದ. ಇಂಗ್ಲಿಷ್‌ಗೌಡ ತನ್ನ ಕ್ರಾಂತಿಕಾರಿ ಗೆಳೆಯರನ್ನು ಕಂಡೊಡನೆ ಮಾತಾಡದೆ ಗಳಗಳ ಅತ್ತ. ರಫಿಗೆ ಮೈ ಎಲ್ಲಾ ಬೆಂಕಿಯಾಯ್ತು. ಕೈಯಲ್ಲಿ ಯಾವ ಆಯುಧವೂ ಇಲ್ಲ!

ನಾಲ್ವರೂ ದೊಣ್ಣೆ ಹಿಡಿದು ಬರುತ್ತಿದ್ದ ಗುಂಪನ್ನು ಯಾಕೆ ತಮ್ಮ ಸ್ನೇಹಿತನನ್ನು ಹಿಡಿದುಕೊಂಡು ಬರುತ್ತಿದ್ದೀರಿ ಎಂದು ಕೇಳುವ ಗೋಜಿಗೆ ಹೋಗಲೇ ಇಲ್ಲ. ಅವನು ಏನು ಅಪರಾಧ ಮಾಡಿದ ಎಂದು ತನಿಖೆಯನ್ನೂ ಮಾಡಲಿಲ್ಲ. ಅವರ ವಯಸ್ಸಿನ ಮಹಿಮೆ ಇರಬೇಕು, ಕಣ್ಣಿಗೆ ಕಂಡುದಕ್ಕೆ ತಕ್ಷಣ ಪ್ರತಿಕ್ರಿಯೆ ಹೊರ ಹೊಮ್ಮುತ್ತಿತ್ತು. ಪೂರ್ವಾಪರ ವಿವೇಚನೆ ಎನ್ನುವುದು ಅವರ ಶಬ್ದಕೋಶದಲ್ಲೆ ಇರಲಿಲ್ಲ. ವಾಸ್ತವವಾಗಿ ಅವರು ಇಂಗ್ಲಿಷ್‌ಗೌಡನನ್ನು ಹುಡುಕಿ ಬಂದದ್ದು ಅವನನ್ನು ಹಿಡಿದು ಚೆನ್ನಾಗಿ ಥಳಿಸಬೇಕೆಂದು!

ರಫಿ ಕ್ಷಣಮಾತ್ರದಲ್ಲಿ ಗುಂಪಿನ ಒಬ್ಬನನ್ನು ಒದ್ದು ತಳ್ಳಿ ಅವನ ದೊಣ್ಣೆ ಕಿತ್ತುಕೊಂಡು ಇಂಗ್ಲಿಷ್‌ಗೌಡನನ್ನು ಹಿಡಿದಿದ್ದವರಿಗೆ ರಪರಪ ಚಚ್ಚ ತೊಡಗಿದ. ಅವನು "ಅಯ್ಯಯ್ಯೋ ಈ ದುಷ್ಟ ಮುಂಡೇಗಂಡ ಹೊಡೀತಾನಲ್ಲ ಹಿಡೀರ್‍ರಲೇ" ಎಂದು ಅರಚಿದ. ಅಷ್ಟರೊಳಗೇ ಯುದ್ಧ ಘೋಷಣೆಯಾಗಿ ಹೋಗಿತ್ತು. ನಡುಬೀದಿಯೇ ಒಂದು ರಣರಂಗವಾಗಿತ್ತು.

ಈ ನಾಲ್ವರೂ ಹೀಗೆ ಏನು ಎತ್ತ ಎಂದು ಒಂದೂ ವಿಚಾರಿಸದೆ ಏಕಾಏಕಿ ಯುದ್ಧಕ್ಕೆ ಧುಮುಕಿದ್ದನ್ನು ನೋಡಿ ಅಲ್ಲಿದ್ದವರಿಗೆಲ್ಲಾ ಅನುಮಾನ ಗಾಬ್ರಿ ಉಂಟಾಯ್ತು.

"ಇವ್ರೆಲ್ಲಾ ಒಂದೇ ಗ್ಯಾಂಗು. ಇವನ್ನ ಬಿಡಿಸಿಕೊಂಡು ಹೋಗಕ್ಕೆ ಬೇರೆ ದಾರೀಲಿ ಬಂದವ್ರೆ ಕಣ್ರೋ, ಇಕ್ರೊ" ಎಂದು ಗುಂಪಿನೊಳಗಿನಿಂದ ಒಬ್ಬ ಕೂಗಿದ. ಅವನ ಮಾತು ಮುಗಿಯುವುದರೊಳಗೆ ಅವನ ಹೊಟ್ಟೆಗೆ ತಿಂದದ್ದೆಲ್ಲಾ ಕಕ್ಕಿಕೊಳ್ಳುವಂತೆ ರಮೇಶ ಒದ್ದ. ಅವರೂ ದೊಣ್ಣೆಗಿಣ್ಣೆ ಹಿಡಿದುಕೊಂಡು ಸಜ್ಜಾಗೇ ಇದ್ದರು. ಇವರೋ ಕ್ರಾಂತಿಕಾರಿಗಳು! ಹಿಂದೇಟು ಹೊಡೆಯುವಂತೆಯೇ ಇರಲಿಲ್ಲ. ರಮೇಶನ ಭುಜಕ್ಕೆ ಒಬ್ಬ ದೊಣ್ಣೆಯಲ್ಲಿ ಹೊಡೆದ. ಅಷ್ಟರೊಳಗೆ ಅಂಗಾರ ಅವನ ಮುಸುಡಿಗೆ ಗುದ್ದಿದ. ಧಪ್ ಧುಪ್ ಧಿಕ್ ಭಡ್ ಎಂದು ಏಟುಗಳ ಸದ್ದು.



"ಹಾಕಿ ಸೂಳೆಮಕ್ಳಿಗೆ!"

"ಬೋಳೀಮಗನೆ ಬೀಜಕ್ಕೆ ವದೀತೀಯ?"

"ಕಳ್ಳಲೌಡಿ ಮಕ್ಳ ಕಲ್ಲು ಹೊಡೀತೀರ?"

"ನಿಮ್ಮಪ್ಪ ಸೂಳೇಮಗ."

"ನಿನ್ನಿವತ್ತು ಜೀವಸಮೇತ ಬಿಡಲ್ಲಾ!"

"ಮಾದರಚತ್! ಹಲ್ಲಿಗೆ ಗುದ್ದುತೀಯಾ"

ಮುಂತಾದ ಬಯ್ದಾಟಗಳು ಏಟಿನ ಸದ್ದಿಗೆ ತಕ್ಕ ಪಲ್ಲವಿಯಾಗಿ ದೊಂಬಿಯಲ್ಲಿ ಕೇಳಿಬರತೊಡಗಿತು.

"ಏಯ್ ಏಯ್ ತಡೀರೊ, ಯಾಕೆ ಹಾಗೆ ಹೊಡೆದುಕೊಳ್ಳುತ್ತೀರಿ?" ಎಂದು ಕೂಗುತ್ತಾ ಒಂದು ನೀಳ ಕಾಯದ ವ್ಯಕ್ತಿ ಟಿಬಿಯಿಂದ ಓಡೋಡಿ ಬಂತು.

"ಅಯ್ಯಯ್ಯೋ ಮಾರಾಮಾರಿ ಅಗ್ತಿದೆ! ಪೋಲೀಸ್, ಪೋಲೀಸ್" ಎಂದು ಟಿಬಿಯ ಮೇಟಿಯೂ ಜವಾನನೂ ಕೂಗಿಕೊಂಡು ಓಡಬಂದರು. ಅಷ್ಟು ಹೊತ್ತಿಗೆ ಜೀಪೊಂದು ಪ್ರಕಾಶಮಾನವದ ಬೆಳಕನ್ನು ಬೀರುತ್ತ ಅದೇ ಹಾದಿಯಲ್ಲಿ ಬಂದಿತು.

ಜೀಪು ಕಾಣುತ್ತಲೇ ದೊಂಬಿಯ ಚಟುವಟಿಕೆಗಳು ಮಂದವಾಗುತ್ತಾ ಜೀಪು ನಿಲ್ಲುವ ವೇಳೆಗೆ ಜಗಳ ಒಂದು ನಿಲುಗಡೆಗೆ ಬಂತು.

# ಅಧ್ಯಾಯ ೬

ಕೃಷ್ಣೇಗೌಡ, ಚಂದ್ರೇಗೌಡ, ಹಾಲಪ್ಪ, ಅತ್ತಾಉಲ್ಲ, ಶ್ಯಾಮಭಟ್ಟ, ರೇಂಜರು ಸೀನಪ್ಪ ಎಲ್ಲಾ ಮೇಜಿನ ಸುತ್ತ ಕೆಸರೂರಿನ ಕ್ಲಬ್ಬಿನಲ್ಲಿ ಕುಳಿತುಕೊಂಡಿದ್ದರು. ಅವರೆಲ್ಲಾ ಕಾಡು ಹರಟೆ ಹೊಡೆಯುತ್ತಿದ್ದರೂ ದೃಷ್ಟಿ ಎಲ್ಲಾ ಕೈಲಿದ್ದ ಇಸ್ಪೀಟೆಲೆಗಳಕಡೆಗೇ ಇತ್ತು. ಕೃಷ್ಣೇಗೌಡನ ಕೈಯಲ್ಲೊಂದು ಅರ್ಧ ಖಾಲಿಯಾದ ವಿಸ್ಕಿ ಲೋಟ ಇತ್ತು. ಕೃಷ್ಣೇಗೌಡ ಸುಮ್ಮನೆ ಕಂಪನಿಗೆಂದು ಕುಳಿತುಕೊಂಡಿದ್ದ. ರೇಂಜ್ ಫಾರೆಸ್ಟ್ ಆಫೀಸರ್, ಜ್ಯೂನಿಯರ್ ಎಂಜಿನಿಯರು ಎಲ್ಲ ಬಂದು ಕ್ಲಬ್ಬಿನಲ್ಲಿ ಕಳೆಯುತ್ತಿದ್ದ ಸಾವಿರ ಸಾವಿರ ರೂಪಾಯಿಗಳನ್ನು ನೋಡಿದರೆ ಅವರು ಯಾವ ರೀತಿ ಲಂಚ ಹೊಡೆಯುತ್ತಿದ್ದರೆಂದು ಊಹಿಸಲು ಸಾಧ್ಯವಾಗುತ್ತಿತ್ತು. ಆದರೆ ಕೃಷ್ಣೇಗೌಡ ಅದನ್ನು ಯೋಚಿಸುತ್ತಿರಲಿಲ್ಲ. ತನ್ನ ಉಗ್ರಾಣದಲ್ಲಿ ದಾಸ್ತಾನು ಇಟ್ಟಿದ್ದ ಸಹಸ್ರಾರು ಕೇಜಿ ಏಲಕ್ಕಿಯನ್ನು ಮಾರಲು ಇದು ಸೂಕ್ತ ಸಮಯವೋ ಅಲ್ಲವೋ ಎಂದಷ್ಟೇ ಯೋಚಿಸುತ್ತಿದ್ದ. ಏಲಕ್ಕಿಯ ಬೆಲೆ ತುಂಬ ಏರಿತ್ತು. ಏಲಕ್ಕಿ ಬೆಲೆ ಯಾವಾಗಲೂ ಏರುವುದಕ್ಕಿಂತ ಇಳಿಯುವುದು ಹೆಚ್ಚು ವೇಗವಾಗಿ. ಆದ್ದರಿಂದ ಏನು ಮಾಡುವುದು? ಇನ್ನೂ ಏರಲೆಂದು ಕಾಯಲೋ ಅಥವಾ ಎಂದಿನಂತೆ ತನಗೆ ಲಾಭ ಸಾಕೆಂದೆನ್ನಿಸಿದ ಕೂಡಲೇ ಕೊಟ್ಟಿ ಬಿಡಲೋ? ಎಂದು ಯೋಚಿಸುತ್ತಿದ್ದ. ಸುಮ್ಮನೆ ಕಾಯುತ್ತಾ ಕುಳಿತರೆ ಏಲಕ್ಕಿ ರೇಟು ಇದ್ದಕ್ಕಿದ್ದಂತೆ ಕುಸಿದು ಮಾರುಕಟ್ಟೆಗಳೆಲ್ಲಾ ಸ್ತಬ್ಧವಾಗಿ ಹೋದರೆ ಏನು ಕತೆ! ಎಂದೇ ಅವನ ಚಿಂತೆಯಾಗಿತ್ತು. ಅವನಿಗೆ ಕೆಸರೂರಿನ ಸಮೀಪದಲ್ಲಿಯೇ ಸ್ವರ್ಣಧಾರ ಎನ್ನುವ ಏಲಕ್ಕಿ ತೋಟ ಇತ್ತು. ಆತ ಅದರೊಳಗೇ ಒಳ್ಳೆ ಬಂಗಲೆಯನ್ನೂ ಕಟ್ಟಿಸಿಕೊಂಡು ವಾಸವಾಗಿದ್ದ. ಏಲಕ್ಕಿ ವ್ಯಾಪಾರದಿಂದ ಉತ್ಪಾದಿಸಿದ ಲಾಭವನ್ನೆಲ್ಲಾ ಆತ ತೋಟದ ಉತ್ಪತ್ತಿ ಎಂದು ತೋರಿಸಿ ವ್ಯವಸಾಯ ತೆರಿಗೆ ಮಾತ್ರ ಕೊಟ್ಟು ಒಳ್ಳೆ ಶ್ರೀಮಂತನಾಗಿದ್ದ. ಆದ್ದರಿಂದ ಸ್ವರ್ಣಧಾರ ಆತನ ಪಾಲಿಗೆ ಸುವರ್ಣಧಾರೆಯನ್ನೇ ಎರೆದಿತ್ತು.

ಅವನಿಗೆ ತೃಪ್ತಿ ತರುವಷ್ಟು ಲಾಭವೇನೋ ಸದ್ಯದ ಬೆಲೆಯಿಂದ ಖಂಡಿತಾ ದೊರೆಯುತ್ತಿತ್ತು. ಆದರೂ ಆತ ಯೋಚನಾಮಗ್ನನಾಗಿದ್ದೇಕೆಂದರೆ ಏಲಕ್ಕಿ ಉತ್ಪಾದನೆ ಮುಂಬರುವ ವರ್ಷಗಳಲ್ಲಿ ತೀರಾ ಕುಸಿಯುವ ಸಂಭವ



ಕಾಣತೊಡಗಿತ್ತು. ಕೆಸರೂರಿನ ಆಸುಪಾಸಿನಲ್ಲಿ ಎಲ್ಲಿ ನೋಡಿದರೂ ಹಾಳು ಬೀಳುತ್ತಿರುವ ತೋಟಗಳೇ ಕಾಣಿಸುತ್ತಿದ್ದವು. ತನ್ನ ವ್ಯಾಪಾರದ ಉಚ್ಛ್ರಾಯ ಸ್ಥಿತಿಯ ಕೊನೆ ಬಂದಿದೆಯೋ! ಹಾಗಾದರೆ ತನ್ನ ಬಳಿ ಇರುವ ದಾಸ್ತಾನಿನ ಸದುಪಯೋಗವನ್ನು ಆದಷ್ಟೂ ಪಡೆದುಕೊಳ್ಳುವುದು ಒಳ್ಳೆಯದಲ್ಲವೆ? ಕಿಟಕಿಯ ಹೊರಗಿನ ಕತ್ತಲನ್ನೇ ದಿಟ್ಟಿಸುತ್ತಾ ಒಂದೇ ಸಮ ಗಾಢವಾಗಿ ಆಲೋಚಿಸುತ್ತಿದ್ದ ಕೃಷ್ಣೇಗೌಡ.

ಹಿಂದಿನಿಂದ ಯಾರೋ ಅವನನ್ನು ತಟ್ಟಿದಂತಾಯ್ತು. ಕೃಷ್ಣೇಗೌಡ ಬೆಚ್ಚಿ ಹಿಂದಿರುಗಿ ನೋಡಿದ. ಕ್ಲಬ್ಬಿನ ಸೆಕ್ರೆಟರಿ ನಿಂತಿದ್ದ.



"ಯಾರೋ ನಿಮ್ಮ ತೋಟದ ಆಳಂತೆ ಕರೆಯುತ್ತಿದ್ದಾನೆ ಗೌಡರೆ" ಎಂದ.

ಕೃಷ್ಣೇಗೌಡ ಚಕಿತನಾದ. ಕ್ಲಬ್ಬಿಗೆ ಆಳು ಕಳಿಸಬೇಕಾದರೆ ಮನೆಯಲ್ಲೇನೋ ಅನಾಹುತವೇ ಆಗಿರಬೇಕು! ಅವನ ಮನಸ್ಸು ನೂರೆಂಟು ಆಲೋಚನೆಗಳಿಂದ ಗಾಬರಿಗೊಂಡಿತು.

"ಯಾಕೆ? ಏನಂತೆ?" ಅಂದ.

"ಏನೋ ಗೊತ್ತಿಲ್ಲ ಸಾವ್ಕಾರರ ಹತ್ರ ಮಾತಾಡಬೇಕು ಅಂತ ಹೇಳ್ತಿದಾನೆ."

ಉಳಿದ ವಿಸ್ಕಿಯನ್ನು ಒಂದೇ ಗುಟುಕಿನಲ್ಲಿ ಕುಡಿದು ಕೃಷ್ಣೇಗೌಡ ಬಾಗಿಲ

ಕಡೆ ಹೊರಟ. ತೋಟದ ಆಳು ಚನಿಯ ಬಾಗಿಲಲ್ಲಿ ನಿಂತಿದ್ದ.

"ಏನೋ?"

"ಏನಿಲ್ಲಯ್ಯ ಅಮ್ಮಾವರು ಸಾವ್ಕಾರರನ್ನು ಒಂಚೂರು ಕೂಡಲೇ ಬಂದು ಹೋಗಕ್ಕೆ ಹೇಳು ಅಂದರು" ಎಂದ ಚನಿಯ.

"ಯೋಕೋ ಏನಾಗಿದೆಯೋ ಮನೇಲಿ?"

"ಮನೆ ಮೇಲೆ ಯೋರೋ ನಾಕು ಕಲ್ಲು ಎಸೆದರು, ಕಳ್ರೋ ಕಾಕರೋ ಅಂತ ಭಯ ಬಂದು ಸಾವ್ಕಾರರಿಗೆ ಹೇಳಿ ಬಾ ಅಂತ ಹೇಳಿದರು."

"ತುಥ್ ಕತ್ತೆ! ಯಾರೋ ಎಸೆದ ಕಲ್ಲು ಬಂದು ಮನೆ ಮೇಲೆ ಬಿದ್ರೆ ಅದ್ಯಾಕೆ ಹೆದರಿಕೊಂಡು ಬಂದು ನನಗೆ ಹೇಳ್ತಿಯೋ? ಅಷ್ಟೊಂದು ಜನ ಆಳ್ಗಳು ಎಲ್ಲಾ ಮನೆ ಸುತ್ಮುತ್ತಾ ಇದೀರ. ಒಂದು ಚೂರು ಹುಡುಕಾಡಿ. ಯಾರಾದರೂ ಪೋಕ್ರಿ ಲೌಡೀ ಮಕ್ಕಳು ಇದ್ರೆ ಹಿಡಿದು ವದ್ದು ಪೋಲೀಸಿಗೆ ಕೋಡೋದು ಬಿಟ್ಟು, ಒಂದು ಕಲ್ಲು ಬಿದ್ದಿದ್ದಕ್ಕೆ ಕಂಗಾಲಾಗಿ ನನ್ನತ್ರ ಬಂದು ಪುಕಾರು ಕೊಡ್ತೀಯಾ. ಹೋಗೋ ಹೋಗೋ ಕತ್ತೆ" ಎಂದು ಕೃಷ್ಣೇಗೌಡ ಎಗರಾಡಿದ.

"ಮೇಸ್ತ್ರಿ ತೋಟದಾಗೆಲ್ಲಾ ಜನಾ ಬಿಟ್ಟು ಪಹರೆ ಮಾಡ್ಸಿದಾನಯ್ಯ. ನಂಗೇನೂ ಗಾಬ್ರಿ ಇಲ್ಲ. ನನ್ನ ಜೀವ ಯಾವ ದೊಡ್ಡ ಮಹಾ. ಅಂಥಾ ಹೆದ್ರಿಕೆ ಮನ್‌ಷ ಆಗಿದ್ರೆ ನಾ ಯಾಕೆ ತೋಟದ ಕಾವಲು ಒಪ್ಪಿಕೊತ್ತಿದ್ದೆ ಹೇಳಿ? ಮುಖ್ಯ ಬಂಗಲೇ ಒಳಗೆ ಅಮ್ಮಾರೊಬ್ರೆ ಇದಾರೆ. ಊರಿಂದ ದೂರ ಇರೋ ಮನೆ. ಕಳ್ಳರು ಬಂದ್ರೆ ನಾವೂ ಕೈಲಾದ್ದು ಮಾಡೇ ಮಾಡ್ತೀವಿ. ಆದ್ರು ಈಗಿನ ಕಾಲದಾಗೆ ಹ್ಯಾಗಂತಾ ಹೇಳಾನ! ಕಾರ್ನಾಗೆ ಬಂದು ಮನೇನುಗ್ಗಿ ಕಾರ್ನಾಗೆ ಹೋಗೋ ಕಳ್ಳರೂ ಇದಾರಂತೆ! ಅದೆಲ್ಲಾ ತಲೇ ಒಳಗೆ ಬಂದು ದಿಗಿಲಾಯ್ತು. ಏನಕ್ಕೂ ನಿಮಗೊಂದು ಮಾತು ಹೇಳಾನ ಅಂತ ಬಂದೆ" ಎಂದ ಚನಿಯ.

ಕೃಷ್ಣೇಗೌಡ ಚಿಂತೆಯಿಂದ ಯೋಚಿಸಿದ. ಮನೆಯೊಳಗೆ ತೋಟಾ ಬಂದೂಕೇನೋ ಇದೆ. ಆದರೆ ಅದನ್ನು ಹಿಡಿಯೋದಕ್ಕೆ ಬರೋದು ಮನೇಲಿ ತನಗೊಬ್ಬನಿಗೇ. ಆದರೂ ಈ ಆಳು ಸೂಳೇಮಕ್ಕಳು ಸ್ವಾಮಿನಿಷ್ಠೆ ಪ್ರದರ್ಶನ ಮಾಡೋದಕ್ಕೆ ಇದನ್ನು ಒಳ್ಳೆ ಅವಕಾಶ ಮಾಡಿಕೊಂಡು ಒಂದಕ್ಕೆರಡು ಮಾಡಿ ಬಣ್ಣ ಕಟ್ಟಿ ಹೇಳಲಿಕ್ಕೂ ಸಾಕು. ಎಂದೆಲ್ಲಾ ಯೋಚಿಸಿ "ಹೋಗೋ ಹೋಗೋ" ಎಂದು ಬಯ್ದವನು ಅನಂತರ "ನೀ ಹೋಗ್ತಾ ಇರು, ಹಿಂದಿನಿಂದ ನಾನು ಬರ್ತೀನಿ" ಎಂದು ಹೇಳಿದ. ಚನಿಯ ವಾಪಸ್ಸು ಹೊರಟ.

ಕೃಷ್ಣಗೌಡ ಒಳಕ್ಕೆ ಬಂದನಾದರೂ ಎಂದಿನಂತೆ ಕೂರಲು ಅವನಿಗೆ ಮನಸ್ಸು ಬರಲಿಲ್ಲ. ಏನಾರಾಗಲಿ ನಮ್ಮ ಹುಷಾರಿ ನಮಗೆ. ಕೈ ಮೀರಿದ ಮೇಲೆ ಹಿಂಗಾಯ್ತಲ್ಲಾಂತ ಯೋಚಿಸೋದು ಬೇಡ ಎಂದು ಯೋಚಿಸಿ ತನ್ನ ಜೀಪು ಸ್ಟಾರ್ಟ್ ಮಾಡಿ ಹೊರಟ. ಅನತಿ ದೂರದಲ್ಲೇ ಅವನಿಗೆ ಇದಿರದ ಚನಿಯನನ್ನೂ ಕೂರಿಸಿಕೊಂಡ. ಆತ ಟಿಬಿ ಬಳಿ ಬಂದು ಬಲಕ್ಕೆ ತಿರುಗುವ ಹೊತ್ತಿಗೆ ಸರಿಯಾಗಿ ದಾರಿಗೆ ಅಡ್ಡವಾಗಿ ಒಂದು ದೊಂಬಿ ನಡೆಯುತ್ತಿತ್ತು. ಲೈಟಿನ ಬೆಳಕಿನಲ್ಲಿ ನೋಡಿದರೆ ಎಲ್ಲ ಅವನ ತೋಟದ ಆಳುಗಳೇ!



"ಏಲನೋ ಚನಿಯ? ಇವರು ಇಲ್ಲಿ?" ಎಂದ.

"ಏನಪ್ಪ! ತೋಟಕ್ಕೆ ಪಹರೆ ಕಾಯಕ್ಕಂತ ಮೇಸ್ತ್ರಿ ಕಳಿಸಿದ್ದ. ಇವರು ನೋಡಿದರೆ ಇಲ್ಲಿ ದೊಂಬಿ ಮಾಡ್ತಿದ್ದಾರೆ, ಏನು ಸಮಾಚಾರ ಗೊತ್ತಾಗ್ತಿಲ್ಲ" ಎಂದ ಚನಿಯ ಜೀಪಿನಿಂದ ಹೊರಕ್ಕೆ ಹಾರಿಕೊಂಡು ನಿಂತ.

# ಅಧ್ಯಾಯ ೭

ಶಾಮನಂದನ ಅಂಗಾಡಿ ಮತ್ತು ಕೃಷ್ಣೇಗೌಡ ಈ ಇಬ್ಬರು ವಯಸ್ಕರೂ ಅಲ್ಲಿ ಇದ್ದುದರಿಂದ ವಿಷಯ ಏನೆಂದು ಸ್ಪಷ್ಟವಾಗುವುದು ಸಾಧ್ಯವಾಯ್ತು.

ಕೃಷ್ಣೇಗೌಡನ ಆಳುಗಳು ಸಾವ್ಕಾರರ ಹತ್ತಿರ ಈ ಘಟಿಂಗ ಸೂಳೇಮಕ್ಳೇ ಮನೇ ಮೇಲೆ ಕಲ್ಲು ಹೊಡೀತಿದ್ದವರು. ನಾವು ಓಡಿಸಿ ಇವರನ್ನು ಹಿಡಿದೆವು. ಮಿಕ್ಕವರೆಲ್ಲ ತಪ್ಪಿಸಿಕೊಂಡು ಬೇರೆ ದಾರಿಯಿಂದ ಏನೂ ಅರಿಯದೋರ ಹಂಗೆ ಬಂದು ಇವನನ್ನು ಬಿಡಿಸಿಕೊಂಡು ಹೋಗಲು ಮೇಲೆ ಬಿದ್ದು ಹೊಡೆದಾಟ ಮಾಡಿದ್ದಾರೆ ಎಂದು ತಮ್ಮದೇ ಆದ ವ್ಯಾಖ್ಯಾನ ನೀಡಿದರು.

"ಕಲ್ಲು ಯಾಕೆ ಹೊಡೆಯೋಣ ನಾವು? ಕಲ್ಲು ಹೊಡೆದು ನಮಗೆ ಏನಾಗಬೇಕಾಗಿದೆ. ನಾನು ಇವನನ್ನು ಹುಡುಕಿಕೊಂಡು ಬಂದೆವು. ನೋಡಿದರೆ ಇವರೆಲ್ಲಾ ನಮ್ಮ ಸ್ನೇಹಿತನನ್ನ ಹಿಡಿದುಕೊಂಡು ಹೊಡೀತಾ ಇದ್ದರು. ನಾವು ಹೇಗೆ ಅಂತ ಸಮಯದಲ್ಲಿ ಸುಮ್ಮನಿರೋದಕ್ಕೆ ಆಗುತ್ತೇ? ನಾವು ಪೇಟೆ ಕಡೆಯಿಂದ ಈಗತಾನೆ ಈ ಕಡೆ ಬಂದೆವು. ಇವನು ಯಾಕೆ ಇವರ ಕೈಗೆ ಸಿಕ್ಕಾಕಿಕೊಂಡನೋ ನಮಗೆ ಗೊತ್ತಿಲ್ಲ" ಎಂದು ರಫಿ ತನ್ನ ಪಾಲಿನ ಸತ್ಯ ಹೇಳಿದ.

ಇಂಗ್ಲಿಷ್‌ಗೌಡ ತಾನು ದೊಡ್ಡಮ್ಮನ ಮನೆಗೆ ಕೃಷ್ಣೇಗೌಡರ ತೋಟದ



ಒಳದಾರಿಯಿಂದ ಹೋಗುತ್ತಿದ್ದುದಾಗಿಯೂ, ಇವರೆಲ್ಲಾ ಓಡಿಸಿಕೊಂಡು ಬಂದು ಅಂಗಿ ಹರಿದು ಹೊಡೆದುದಾಗಿಯೂ ಹೇಳಿದ.

ಅಂಗಾಡಿ ಕುತೂಹಲದಿಂದ ಚಕಿತನಾಗಿ, "ನೀವೆಲ್ಲ ಯಾರು?" ಎಂದು ಕೇಳಿದ.

"ನಾವು ಜೂನಿಯರ್ ಕಾಲೇಜ್ ಸ್ಟೂಡೆಂಟ್ಸ್" ಎಂದ ರಮೇಶ

"ನಾನು ಬರುತ್ತಾ ಪೇಟೆಬೀದಿಯಲ್ಲಿ ಜಗಳ ಆಡುತ್ತಿದ್ದಿರಿ! ಇಲ್ಲಿಗೆ ಯಾವಾಗ ಬಂದಿರಿ?" ಎಂದು ಕೇಳಿದ.

"ಅದೇ ಆ ಜಗಳದಲ್ಲೇ ಇವನು ಹೆದರಿಕೊಂಡು ಓಡೋದ. ಹೀಗೆ ಮಾಡಿದನಲ್ಲಾ ಇವನಿಗೆ ನಾಲ್ಕು ಕೊಟ್ಟು ಬುದ್ಧಿ ಕಲಿಸಬೇಕು ಅಂತ ಇಲ್ಲಿಗೆ ಹುಡುಕಿಕೊಂಡು ಬಂದೆವು. ನೋಡಿದರೆ ಇವರೆಲ್ಲಾ ಇವನನ್ನು ಹಿಡಿದು ಹೊಡೀತಾ ಇದ್ದರು" ಎಂದ ರಮೇಶ.

ಕಾಲೇಜು ಸ್ಟೂಡೆಂಟ್ಸ್ ಎಂದು ಗೊತ್ತಾದಕೂಡಲೆ ಕೃಷ್ಣೇಗೌಡನಿಗೆ ಗಾಬರಿಯಾಯ್ತು. ಇವರು ಹೋಗಿ ನಾಳೆ ಎಲ್ಲಾ ಹುಡುಗರಿಗೂ ಹೇಳಿ ಕ್ಲಾಸಿಗೆ ಹೋಗದೆ ಮುಷ್ಕರ ಹೂಡಿದರು ಅಂದರೆ ಏನು ಗತಿ. ನಾಳೆ ಇವರೆಲ್ಲಾ ಜೈಕಾರ ಧಿಕ್ಕಾರಗಳನ್ನು ಕೂಗುತ್ತಾ ಏಲಕ್ಕಿ ಮಂಡಿಗೆ ದಾಳಿ ಮಾಡಿದರೆ! ಆಳುಗಳು ಇವರ ತಂಟೆಗೆ ಹೋಗಿದ್ದೇ ದೊಡ್ಡ ಅಚಾತುರ್ಯವಾಯ್ತು ಎಂದೆನ್ನಿಸಿತು ಆತನಿಗೆ.

ತಕ್ಷಣ ಆತ "ಸಾರಿ ಮಿಸ್ಟರ್, ಇಲ್ಲಿ ಏನೋ ಎಲ್ಲರೂ ಒಬ್ಬರನ್ನೊಬ್ಬರು ತಪ್ಪು ತಿಳಿದುಕೊಂಡ ಹಾಗೆ ತೋರುತ್ತದೆ. ಅದೂ ಗುದ್ದಾಟದವರೆಗೆ ಹೋಗಿದ್ದು ತೀರಾ ವಿಷಾದದ ವಿಷಯ. ಇದಕ್ಕೆಲ್ಲಾ ನಾನು ಕ್ಷಮೆ ಕೇಳ್ತೀನಿ. ದಯವಿಟ್ಟು ಆತ ಇನ್ನೊಂದು ಅಂಗಿ ಹೊಲಿಸಿಕೊಳ್ಳಲಿ ಈಗಲೇ ಹಣ ಕೊಟ್ಟು ಬಿಡ್ತೀನಿ. ನನ್ನ ಮಗಳೂ ಜೂನಿಯರ್ ಕಾಲೇಜಿನ ಸ್ಟೂಡೆಂಟೇ. ಜಯಂತಿ ಅಂತ, ಕಾಲೇಜು ವಿದ್ಯಾರ್ಥಿಗಳೂ ಅಂದರೆ ನನಗೆ ತುಂಬಾ ಗೌರವ. ಆಗಿದ್ದು ಆಗಿಹೋಯ್ತು. ಏನೂ ತಿಳುಕೋಬೇಡಿ" ಎಂದ.

ಜಯಂತಿ.....!

ಹೆಸರು ಕೇಳಿದ್ದೇ ತಡ, ಐದು ಜನ ಕ್ರಾಂತಿಕಾರಿಗಳಿಗೂ ಸಿಡಿಲು ಹೊಡೆದಂತಾಯ್ತು. ಜಯಂತಿ! ಕಾಲೇಜಿನ ಚೆಲುವೆ! ದೇವರೇ ಗತಿ! ಇನ್ನು ಅವಳಪ್ಪ ಹೋಗಿ ಮನೆಯಲ್ಲಿ ನಮ್ಮ ಬಗ್ಗೆ ಏನು ಹೇಳ್ತಾನೋ! ಆಳುಗಳ ಕೈಲಿ ಚೆನ್ನಾಗಿ ಒದೆಸಿದೆ ಅಂತ ಹೇಳಿದರೆ ಏನು ಗತಿ! ನಾಳೆ ಕಾಲೇಜಿಗೆ ಹೋದರೆ

ಇಡೀ ಹುಡುಗಿಯರ ಸಮುದಾಯ ನಮ್ಮನ್ನು ನೋಡಿಕೊಂಡು ನಗುತ್ತಾರೆ! ಮರ್ಯಾದೆ ಹೋದ ಮೇಲೆ ಇನ್ನು ಕ್ರಾಂತಿ ಮಾಡೋದೇನು ಬಂತು. ನಮ್ಮ ಜನ್ಮಕ್ಕೆ ಬೆಂಕಿ ಹಾಕ! ಎಂದು ಐದು ಜನವೂ ಮೌನವಾಗಿ ತಮ್ಮ ದುರಾದೃಷ್ಟವನ್ನು ಶಪಿಸಿಕೊಳ್ಳತೊಡಗಿದರು.

ಐದು ಜನವೂ ಮೌನವಾಗಿ ಪೆಚ್ಚಾದುದನ್ನು ಕಂಡು ಕೃಷ್ಣೇಗೌಡ ಇನ್ನಷ್ಟು ಗಾಬರಿಯಾದ, ತಾನು ಕೊಡಬೇಕೆಂದಿದ್ದ ಸಾಲದಾಯ್ತೆಂದು ತಿಳಿದು, "ಮಿಸ್ಟರ್, ಬೇಜಾರು ಮಾಡ್ಕೋಬೇಡಿ, ಬೇಕಾದರೆ ಎಲ್ಲರಿಗೂ ಒಂದೊಂದು ಶರಟು ಹೊಲಿಸಿಕೊಟ್ಟುಬಿಡುತ್ತೇನೆ. ಎಷ್ಟಾಗುತ್ತೆ ಹೇಳಿ. ಈಗಲೇ ಹಣ ಕೊಟ್ಟು ಬಿಡ್ತೀನಿ," ಎಂದು ಅಂಗಲಾಚುವಂತೆ ಕೇಳಿಕೊಂಡ. ಅವನ ಆಳುಗಳು ತಮ್ಮಿಂದೇನೋ ಭಾರಿ ಅಪಚಾರವಾಗಿದೆಯೆಂದು ತಿಳಿದು ಗಾಬರಿಯಾದರು.

"ಹೌದ್ರೀ ಮಿಸ್ಟರ್, ಇವರು ಹೇಳ್ತೀರೋದು ಸರಿ. ನಿಮ್ಮದೇನೂ ತಪ್ಪಿಲ್ಲಾಂತ ನನಗೆ ಗೊತ್ತು. ನಾನೇ ನಿಮ್ಮನ್ನು ಕೊಂಚ ಹೊತ್ತಿನ ಹಿಂದೆ ಪೇಟೆಬೀದಿಯಲ್ಲಿ ನೋಡಿದ್ದೆನಲ್ಲಾ. ಅವರು ಹೇಳಿದ್ದಕ್ಕೆ ಒಪ್ಪಿ. ಬೇಸರ ಮಾಡ್ಕೋಬೇಡಿ," ಎಂದು ಅಂಗಾಡಿಯೂ ಮನವಿ ಮಾಡಿಕೊಂಡ.

"ಬೇಡಾ ಸಾರ್, ನಾವೇ ಜಗಳಾ ಆಡಿ ಕೊನೆಗೆ ದುಡ್ಡಿಸ್ಕೊಳ್ಳೋದು ಕ್ರಾಂತಿಕಾರಿಗಳಿಗೆ ಮರ್ಯಾದೆ ತರೋಲ್ಲ," ಎಂದವರೇ ಅಲ್ಲಿಂದ ಐದು ಜನವೂ ನಿಲ್ಲದೆ ಕಾಲ್ಕಿತ್ತರು.





# ಅಧ್ಯಾಯ ೮



ಪೇಟೆದಾರಿಯಲ್ಲಿ ಅವರು ನಾಲ್ವರಿಗೂ ಇಂಗ್ಲಿಷ್‌ಗೌಡನಿಗೆ ಚಚ್ಚಬೇಕೆಂದೆನ್ನಿಸಿತು. ಆದರೆ ಕೃಷ್ಣೇಗೌಡನ ಆಳುಗಳೇ ಆ ಕೆಲಸ ಮಾಡಿದ್ದರಿಂದ ಇವರು ಮತ್ತೆ ಅದನ್ನು ಪುರಾವರ್ತನೆ ಮಾಡಲಿಲ್ಲ. ಇದೆಲ್ಲಕಿಂತಲೂ ಕೃಷ್ಣೇಗೌಡ ತಮ್ಮ ಕಾಲೇಜಿನ ಜಯಂತಿಯ ಅಪ್ಪ ಎಂದು ತಿಳಿದು ತೀರಾ ಖಿನ್ನರಾಗಿ ಹೋಗಿದ್ದರು.

"ಇಂಗ್ಲಿಷ್‌ಗೌಡ ಎಂತಾ ಕೆಲಸ ಮಾಡಿದ ನೋಡು! ನಾಳೆಯಿಂದ ನಾವು ಕಾಲೇಜಿಗೆ ಹೋಗೋ ಹಾಗಿಲ್ಲ. ಹುಡುಗೀರೆಲ್ಲ ನಮ್ಮನ್ನು ನೋಡಿ ನಗ್ತಾರೆ."

"ಯಾಕೆ ನಾವೇನು ಮಾಡಿದ್ವಿ ನಗೋ ಅಂಥದು?"

"ಅವಳಪ್ಪ ಹೋಗಿ ಹೇಳ್ತಾನೆ. ನಿನ್ನ ಕಾಲೇಜಿನ ಸ್ಟೂಡೆಂಟ್ಸ್ ಕಲ್ಲು ಹೊಡೀತಿದ್ರು. ಆಳುಗಳ ಕೈಲಿ ಹಿಡಿದು ಚೆನ್ನಾಗಿ ಒದೆಸಿದೆ ಅಂತ."

"ನಾವೇ ಸರಿಯಾಗಿ ಕೊಟ್ಟಿದೀವಿ ಅವರಿಗೆ"

“ಕೊಟ್ಟಿರಬೋದಪ್ಪಾ, ಅವಳಪ್ಪ ಹಂಗೆ ಹೇಳ್ತಾನಾ? ಸರಿಯಾಗಿ ಒದ್ದೆವು ಅಂತಾನೆ ಹೇಳ್ತಾನೆ.”

“ಥತ್! ನಾನಂತೂ ನಾಳೇನಿಂದ ಕಾಲೇಜಿನ ಕಡೆ ಮುಖ ಹಾಕೋದಿಲ್ಲ. ಹುಡುಗೀರ ಹತ್ರ ಮರ್ಯಾದೆ ಕಳಕೊಳ್ಳೋದರ ಬದಲು ಎಲ್ಲಾದ್ರು ಹೋಗಿ ಪ್ರಾಣ ತಕ್ಕೋಳೋದು ವಾಸಿ.”

“ಬಡ್ಡೀ ಮಗನೆ ನಿನ್ನಿಂದಾನೇ ನೋಡು ಇಷ್ಟೆಲ್ಲಾ ಆಗಿದ್ದು” ಎಂದು ಎಲ್ಲರೂ ಮೌನವಾಗಿದ್ದ ಇಂಗ್ಲಿಷ್‌ಗೌಡನಿಗೆ ಉಗಿದರು.

“ಈಗೇನ್ಮಾಡೋದೋ ಹೇಳು! ಆಗೋದಾಗೋಯ್ತಲ್ಲಾ! ಅವನ ತೋಟದ ಕಡೆ ನಾ ಹೋಗಿದ್ದೇ ತಪ್ಪಾಗಿಹೋಯ್ತು” ಎಂದು ಇಂಗ್ಲಿಷ್‌ಗೌಡ ಅಪಾರ ದುಃಖದಿಂದ ಹೇಳಿದ.

ತಮ್ಮ ಪ್ರೀತಿಯ ಹುಡುಗಿಯರು ನಾಳೆ ತಮ್ಮನ್ನು ಕಾಲೇಜಿನಲ್ಲಿ ಕಂಡೊಡನೆ ಅಪಹಾಸ್ಯ ಮಾಡಿಕೊಂಡು ನಗುತ್ತಾರೆನ್ನುವ ಕಲ್ಪನೆಯನ್ನು ಊಹಿಸಿದಷ್ಟೂ ಅವರಿಗೆ ಸಹಿಸಲಾಗದ ಯಾತನೆಯಾಗತೊಡಗಿತು. ವಿಪರೀತ ಕಳವಳಗೊಂಡ ಅವರು ಕೊನೆಗೆ ನಡೆಯುವುದನ್ನು ನಿಲ್ಲಿಸಿ ಒಬ್ಬರಿಗೊಬ್ಬರು ಬಯ್ದುಕೊಳ್ಳುತ್ತಾ ನಿಂತೇಬಿಟ್ಟರು.

ಅದೇ ದಾರಿಯಲ್ಲಿ ಅಷ್ಟು ಹೊತ್ತಿಗೆ ಸರಿಯಾಗಿ ಅವರ ಕಾಲೇಜಿನ ಕ್ರಿಕೆಟ್ ಕ್ಯಾಪ್ಟನ್ ಗೂಗ್ಲಿ ಬೋಲರ್ ಭಾರ್ಗವ ಬರುತ್ತಾ ಇದ್ದ. ರಸ್ತೆಯಲ್ಲಿದ್ದ ಕಲ್ಲುಗಳನ್ನೆಲ್ಲಾ ತಂತಿಕಂಬಕ್ಕೆ ಬೋಲ್ ಮಾಡುತ್ತಾ ಇಡೀ ಜಗತ್ತನ್ನೇ ಕ್ರಿಕೆಟ್ ಮೈದಾನ ಅಂತ ತಿಳಿದುಕೊಂಡು ಕಾಲ್ಪನಿಕ ಎದುರಾಳಿಗಳ ವಿಕೆಟ್‌ಗಳನ್ನೆಲ್ಲಾ ಉರುಳಿಸುತ್ತಾ ನಡೆದು ಬರುತ್ತಿದ್ದ. ಈ ಐದು ಜನ ಕಾಲೇಜು ಮಿತ್ರರನ್ನು ಕಂಡಕೂಡಲೇ ಅಪೂರ್ವ ಮಂದಹಾಸದಿಂದ ಇವರತ್ತ ಬಂದ.

“ಏನೋ ಗೂಗ್ಲಿ ಎತ್ತಲಾಗಿ ಹೊರಟೆಯೋ?” ಎಂದು ಅಂಗಾರ ಕೇಳಿದ.

“ಏನ್ರೋ ಇಲ್ಲಿ? ಏನೋ ಭಾಳ ಸೀರಿಯಸ್ ವಿಷ್ಯ ಮಾತಾಡ್ತಿರೋ ಹಂಗಿದೆಯಲ್ಲಾ. ಏನಾದ್ರೂ ಪರ್ಸನಲ್ ವಿಷಯ ಆದ್ರೆ ಹೇಳ್ರಪ್ಪಾ. ನಾನು ಹೋಗ್ತೀನಿ” ಎಂದ.

“ಪರ್ಸನಲ್ ಏನಿಲ್ಲಾ ಕಾಣೋಮ್ಮಾ. ಸ್ನೇಹಿತರ ಹತ್ರ ಎಂಥದೋ ಪರ್ಸನಲ್ಲೂ. ಈ ಲೋಫರ್ ಇಂಗ್ಲಿಷ್‌ಗೌಡ ಎಂಥಾ ಕೆಲಸ ಕೊಟ್ಟಿದಾನೆ ಅಂದ್ರೆ ನಾಳೇನಿಂದ ನಾವು ಕಾಲೇಜಿಗೆ ಬರದ ಹಾಗೆ ಮಾಡಿಬಿಟ್ಟಿದಾನೆ. ಹುಡುಗೀರಿಗೆ ಮುಖ ತೋರ್ಸೋಹಂಗಿಲ್ಲಾ” ಎಂದ ರಮೇಶ.



“ಲೋ ನಿಮಗೇನ್ರೋ ಬಂದಿದೆ ರೋಗ? ಯಾವಾಗ ನೋಡಿದರೂ ಹುಡುಗೀರ ವಿಷ್ಯಾನೆ ಯೋಚನೆ ಮಾಡಿಕೊಂಡು ಸಾಯ್ತಿರ್ತೀರಲ್ಲ, ಬೇರೆ ಕೆಲಸ ಇಲ್ವೇನ್ರೋ. ನಿಮ್ಮಪ್ಪಂದಿರಿಗೆ ಹೇಳಿ ನಿಮಗೆಲ್ಲಾ ಒಂದೊಂದು ಮದ್ವೀನಾದರೂ ಮಾಡಿಸಬೇಕು. ಥತ್ ಬಡ್ಡೀಮಕ್ಳ. ಯಾವಾಗ ನೋಡಿದರೂ ಹುಡ್ಗೀರು ಹುಡ್ಗೀರು” ಎಂದು ತಾನು ಅರಿಷಡ್ವರ್ಗಗಳನ್ನು ಗೆದ್ದ ಸನ್ಯಾಸಿಯಂತೆ ಆ ಐದು ಜನಕ್ಕೂ ಬಯ್ದ.

“ಲೋ ಗೂಗ್ಲಿ, ನಿನಗೇನೋಮ್ಮ! ನೀನು ನಮ್ಮ ಟೀಮಿನ ಕ್ರಿಕೆಟ್ ಕ್ಯಾಪ್ಟನ್ನು, ಹುಡುಗೀರಿಗೆಲ್ಲಾ ಪೆಟ್ಟಾಗಿದ್ದೀಯಾ. ನಿಂಗೇನಾಗಬೇಕು! ಅದಕ್ಕೇ ನಮಗೆ ಬುದ್ಧಿ ಹೇಳೋದಕ್ಕೆ ಬರ್ತೀಯ” ಎಂದ ಅಂಗಾರ.

“ಏನ್ರಯ್ಯ ನನ್ನ ವಿಷ್ಯ ಎಲ್ಲಾ ಗೊತ್ತಿದ್ರೂ ಹೀಗೆಲ್ಲಾ ಹೊಟ್ಟೆ ಉರಿಸ್ತೀರಲ್ಲಾ. ಇಷ್ಟೊಂದು ಟೂರ್ನಮೆಂಟ್ ಗೆದ್ದು ಕಾಲೇಜಿಗೆಲ್ಲಾ ಶೀಲ್ಡು ತಂದುಕೊಟ್ಟಿದ್ದೀನಿ. ಇವತ್ತಿಗೂ ಒಬ್ಳಾರ ಹುಡ್ಗಿ ನನ್ನತ್ರ ಮಾತಾಡಿದಾಳೇನ್ರೋ? ಹುಡುಗೀರಿಗೆ ಪೆಟ್ಟಾಗಿದೀಯಾಂತ ಹೊಟ್ಟೆ ಉರಿಸೋದಕ್ಕೆ ಹೇಳ್ತಿರೇನೋ? ಅವತ್ತು ಧೈರ್ಯಮಾಡಿ ವನಮಾಲನ ಹತ್ರ ಮಾತಾಡೋದಕ್ಕೆ ಹೋದ್ರೆ ಹಿಂದಿಂದ “ಸ್ಪಿಡೀಗೂಗ್ಲಿ” ಅಂತ ಕೂಗಿ ಗಾಬರಿ ಮಾಡಿದೀರ. ಈವತ್ತು ಹೀಗೆ ಹೇಳ್ತೀರಲ್ಲ!” ಎಂದು ತನ್ನ ವಿವೇಕದ ಧಾಟಿಯನ್ನು ಒಮ್ಮೆಲೆ ತೊರೆದು ತನ್ನ ದುಃಸ್ಥಿತಿಯನ್ನು ತೋಡಿಕೊಳ್ಳುತ್ತ ಹುಡುಗಿಯರನ್ನು ಶಪಿಸತೊಡಗಿದ.

“ನಾವು ನಿನಗೆ ಪ್ರೋತ್ಸಾಹ ಕೊಡೋದಕ್ಕೆ ಕೂಗಿದರೆ ನೀನೇ ಕೈ ಕಾಲು ನಡುಗತ್ತೆ ಅಂತ ಓಡಿ ಬಂದವನು.” ಎಂದ ಅಂಗಾರ.

“ಅವಳತ್ರ ಹೋಗು ನಿಂಗೂ ನಡುಗುತ್ತೆ. ಏನ್ಮಾಡೋದು ಹೇಳು. ಅದಿರಲಿ ಏನು ನಿಮ್ಮ ತೊಂದ್ರೆ?” ಎಂದು ಅವರು ಚಿಂತಿಸುತ್ತಿದ್ದ ಸಂಗತಿಯತ್ತ ಗಮನ ಸೆಳೆದ.

ಗೂಗ್ಲಿಗೆ ಐವರೂ ತಮ್ಮ ತಮ್ಮ ದೃಷ್ಟಿಕೋನಗಳಿಗೆ ಅನುಸಾರವಾಗಿ ನಡೆದುದ್ದನ್ನೆಲ್ಲಾ ತಿಳಿಸಿದರು. ತಾವು ವಿದ್ಯಾಭ್ಯಾಸ ನಿಲ್ಲಿಸಿ ಕಾಲೇಜು ತೊರೆಯಬೇಕಾದ ಪರಿಸ್ಥಿತಿ ಬಂದಿದೆ ಎಂದು ತಮ್ಮ ಅಳಲನ್ನು ತೋಡಿಕೊಂಡರು. ಮಧ್ಯೆ ಮಧ್ಯೆ ಇಂಗ್ಲಿಷ್‌ಗೌಡನಿಗೆ ಉಗಿತ ನಡೆಯುತ್ತಲೇ ಇತ್ತು.

ಗೂಗ್ಲಿ ಸಹಾನುಭೂತಿಯಿಂದ ಗೆಳೆಯರ ಸಮಸ್ಯೆಯನ್ನೆಲ್ಲಾ ಕೇಳಿದ. ಅವನಿಗೂ ತುಂಬಾ ಬೇಸರವಾಯ್ತು. “ಥತ್ ಎಂಥಾ ಬೇಕೂಫಾನೋ ನೀನು!” ಎಂದು ಇನ್ನೊಮ್ಮೆ ಇಂಗ್ಲಿಷ್‌ಗೌಡನಿಗೆ ಬಯ್ದ. ಅದರಿಂದ ಯಾವ ಸಮಸ್ಯೆ

ತಾನೆ ಪರಿಹಾರವಾದಂತಾಯ್ತು? ಆದ್ದರಿಂದ ಆ ಗೆಳೆಯರ ಗುಂಪು ಅಲ್ಲೇ ನಿಂತು ಸಮಾಲೋಚನೆ ನಡೆಸತೊಡಗಿತು. ಆಗೊಮ್ಮೆ ಗೂಗ್ಲಿಗೆ ಹಠಾತ್ತಾಗಿ ಒಂದು ಯೋಚನೆಯ ಮಿಂಚು ಹೊಳೆಯಿತು.

"ಲೋ ಇಲ್ಕೇಳ್ರೋ. ಈಗ ಡೇಂಜರ್ ಇರೋದು ನಿಮ್ಮಿಂದ್ಲೇ. ನಾನು ಹೇಳಿದ ಹಾಗೆ ಕೇಳಿದರೆ ನೋಡ್ರಪ್ಪ ಬಚಾವಾಗ್ತೀರ ಈ ತೊಂದ್ರೆಯಿಂದ" ಎಂದ ಗೂಗ್ಲಿ. ಐವರೂ ಸಮಾಧಾನದ ನಿಟ್ಟುಸಿರು ಬಿಡುತ್ತಾ, 'ಏನಯ್ಯಾ ಕ್ಯಾಪ್ಟನ್' ಎಂದರು.

"ಏನಿಲ್ಲಾ ಈಗ ಇರೋದು ಡೇಂಜರ್ ನಿಮ್ಮಿಂದಾನೆ ಕಣ್ರೋ. ನೀವು ಈ ವಿಷ್ಯಾನ ನನ್ನೆದುರು ಹೇಳಿದ್ರಲ್ಲಾ ಹಾಗೆ ಇನ್ಯಾರೆದುರಾದರೂ ಹೇಳಿದೀರಾ? ಇಲ್ಲಾ ತಾನೆ! ಎಲ್ಲೂ ಬಾಯಿಬಿಡಕೂಡದು ಗೊತಾಯ್ತೋ. ಜಯಂತಿ ಅಪ್ಪನಿಗೆ ನೀವು ಕಾಲೇಜ್ ಸ್ಟೂಡೆಂಟ್ಸ್ ಅನ್ನೋ ಅಷ್ಟು ಮಾತ್ರ ಗೊತ್ತಿದೆ! ನೀವ್ಯಾರೂಂತ ಏನು ಗೊತ್ತು. ನೀವು ಚಕಾರ ಎತ್ತದೆ ಸುಮ್ಮನಾದ್ರಿ ಅಂತ ಇಟ್ಟುಕೊಳ್ಳಿ. ಯಾರೋ ಕಾಲೇಜ್ ಹುಡುಗರು ಅಂತ ಅಂದುಕೊಳ್ತಾರೆ. ಅದು ಬಿಟ್ಟು ಊರೆಲ್ಲಾ ಗೋಳಾಡಿದರೆ ನಿಮ್ಮ ಮರ್ಯಾದೆ ಉಳಿಯೋದಿಲ್ಲ" ಎಂದು ಗೂಗ್ಲಿ ತನಗೆ ಹೊಳೆದ ಬ್ರಿಲಿಯಂಟ್ ಐಡಿಯಾ ಹೇಳಿದ.

"ಇಲ್ಲಾ ಕ್ಯಾಪ್ಟನ್, ನಾವು ಈ ವಿಷ್ಯಾ ಬಾಯೇ ಬಿಡೋಲ್ಲ" ಎಂದು ರಮೇಶ ಹೇಳಿದ. ಅದಕ್ಕೆ ಮಿಕ್ಕ ನಾಲ್ವರೂ ಹೌದೌದು ಎಂದು ತಲೆಯಾಡಿಸಿದರು.



## ಅಧ್ಯಾಯ ೯



ಕೆಸರೂರಿನ ಸುತ್ತಲೂ ಪರ್ವತಗಳು ಒಂದರ ಹಿಂದೆ ಒಂದರಂತೆ ಒಟ್ಟಿಗೆ ಮಲಗಿದ ಬಸವನ ಮಂದೆಯ ತರ ಹಬ್ಬಿಕೊಂಡಿದ್ದವು. ದಟ್ಟ ಅರಣ್ಯ ಈ ಗುಡ್ಡಗಳನ್ನು ಕಂಬಳಿ ಹೊದಿಸಿದಂತೆ ಮುಚ್ಚಿಕೊಂಡಿತ್ತು. ಎಲ್ಲ ಮರಗಳೂ ಒಟ್ಟಾಗಿ ಇಡೀ ಗುಡ್ಡವೇ ಒಂದು ಭೂತಾಕಾರದ ಮರದಂತೆ ಕಾಣುತ್ತಿತ್ತು. ಸಂಜೆಯಾಗುತ್ತಲೇ ಕಡಲತ್ತಣಿಂದ ಹಾಯ್ದು ಬರುವ ತೇವದ ಹವೆ ಮಂಜಿನ ಮೋಡವಾಗಿ ಪರಿವರ್ತನೆಗೊಂಡು ಆ ಬೆಟ್ಟಗಳ ನಡುವಿನಿಂದ ಕೆಸರೂರಿನ ಮೇಲೆ ಹರಿಯುತ್ತವೆ. ಇಡಿಯ ಕೆಸರೂರನ್ನು ಒಂದು ಮಾಯಾಲೋಕವನ್ನಾಗಿ ಮಾಡುತ್ತವೆ. ಕೆಸರೂರು ಮಳೆಗಾಲದ ನಾಲ್ಕು ತಿಂಗಳು ಮಾತ್ರ ಕೆಸರೂರಷ್ಟೆ. ಅನಂತರ ಸದಾ ತಣ್ಣಗಿರುವ ನಿತ್ಯ ಹರಿದ್ವರ್ಣದ ಕಾಡನಿಂದ ಸುತ್ತವರಿದಿದ್ದ ಇದು ಒಂದು ಅಪ್ಸರಲೋಕ. ಗಿರಿತಪ್ಪಲಿನ ಈ ಪುಟ್ಟ ಊರು ಕರ್ನಾಟಕದ ಸ್ವಿಡ್ಜರ್ಲೆಂಡ್.

ಶಾಮನಂದನ ಅಂಗಾಡಿ ಒಬ್ಬನೇ ಪೆನ್ನು ಫೈಲು ಹಿಡಿದುಕೊಂಡು

ಕೆಸರೂರಿನ ಟಿಬಿಯ ವರಾಂಡದಲ್ಲಿ ಕುಳಿತಿದ್ದ. ತನ್ನ ಮೂಲ ಕಛೇರಿಗೆ ದೈನಂದಿನ ರಿಪೋರ್ಟ್ ಕಳಿಸಬೇಕಿತ್ತು. ಆದರೆ ಮನಸ್ಸಿನಲ್ಲಿ ಏನೇನೋ ಆಲೋಚನೆಗಳು. ಆ ಐದುಜನ ಕಾಲೇಜು ಹುಡುಗರ ಬಗ್ಗೆ ಯೋಚಿಸುತ್ತಿದ್ದ. ಅವರು ಕೆಲವೇ ಕಾಲದಲ್ಲಿ ಈ ಊರನ್ನು ತ್ಯಜಿಸುವುದರಲ್ಲಿ ಅನುಮಾನವಿರಲಿಲ್ಲ. ಇಷ್ಟೊಂದು ಸುಂದರ ತಾಣದ ಈ ಊರು. ಅದೇನೋ ಸಾಹಸಿಗಳಿಗೆ ಯೌವನಕ್ಕೆ ಮಹತ್ವಾಕಾಂಕ್ಷೆಗೆ ಬೇಕಾಗಿರಲಿಲ್ಲ. ಹುಡುಗ ಹುಡುಗಿಯರಿಗೆ ಇದೊಂದು ನಿರ್ಜೀವ ವಸ್ತು. ಶಾಮನಂದನ ಅಂಗಾಡಿ ಕೆಸರೂರಿನಲ್ಲಿ ಓದುತ್ತಿದ್ದಾಗ ಇದೇ ತರದ ಹುಡುಗನಾಗಿದ್ದ. ಆಗ ಜೂನಿಯರ್ ಕಾಲೇಜು ಇರಲಿಲ್ಲ. ಹೈಸ್ಕೂಲ್ ಮಾತ್ರ ಇತ್ತು. ಅವನಿಗೆ ಗೊತ್ತಿತ್ತು ಈ ಮೊಂಡಾಟದ ಹುಡುಗ ಹುಡುಗಿಯರೇ ಏನನ್ನಾದರೂ ಸಾಧಿಸಬಲ್ಲರು ಎಂದು. ಆದರೆ ಅವರಿಗೆ ಸ್ಥಾನವಿಲ್ಲ! ಯಾಕೆ? ತನ್ನೊಡನೆ ಓದಿದ ಓರಗೆಯವನು ಈ ಒಬ್ಬನಾದರೂ ಕೆಸರೂರಿನಲ್ಲಿ ಇರಬೇಡವೇ?

ಈ ಕೆಸರೂರಿಗೆ ಏನು ಕೊರತೆ? ಯೋಚಿಸಿದಷ್ಟು ಅಂಗಾಡಿಗೆ ಇದೊಂದು ಅಗಮ್ಯ ಸಮಸ್ಯೆಯಾಗಿ ಕಂಡಿತು. ಇಪ್ಪತ್ತು ವರ್ಷದ ಅನಂತರ ಮೊದಲ ಬಾರಿಗೆ ತಾನು ಬೆಳೆದ ಓಡಾಡಿದ ಚಿಕ್ಕಂದಿನ ಊರಿಗೆ ಬಂದಿದ್ದ. ತಾನು ಬೆಳೆದ ಊರೆಂಬುದೊಂದನ್ನು ಬಿಟ್ಟರೆ ಅಂಗಾಡಿಗೆ ಕೊಂಚವೂ ಕೆಸರೂರಿನ ಬಗ್ಗೆ ಆದರ ಅಭಿಮಾನ ಪ್ರೀತಿ ಹುಟ್ಟಲಿಲ್ಲ.

ನಿಜಕ್ಕೂ ಅಂಗಾಡಿಗೆ ತನ್ನ ಗುರುತನ್ನೇ ತೋರಿಸಿಕೊಳ್ಳದೆ ಸಂಪೂರ್ಣ ಆಗತುಕನಾಗೇ ಓಡಾಡಿದ್ದರೆ ಚೆನ್ನಾಗಿತ್ತೆಂದೆನ್ನಿಸಿತು.

ಕೆಸರೂರಿಗೆ ಬಳಸಿಕೊಂಡಂತೆ ಅತ್ಯಂತ ದಟ್ಟ ಅರಣ್ಯ ಇತ್ತು. ಅವುಗಳ ತುಂಬಾ ಕಳೆಯಂತೆ ಏಲಕ್ಕಿ ಬೆಳೆಯುತ್ತಿತ್ತು. ಇಡೀ ಪ್ರಪಂಚದಲ್ಲೇ ಹೆಸರಾಂತ ಪರಿಮಳದ ಏಲಕ್ಕಿ ಇದು. ಅದನ್ನು ಪ್ರತಿ ವರ್ಷ ಅರಣ್ಯ ಇಲಾಖೆಯವರು ಹರಾಜು ಹಾಕುತ್ತಿದ್ದರು. ಆದರೆ ಅನಂತರ ಕೆಸರೂರಿನ ರಾಜಕಾರಣಕ್ಕೆ ಹಣ ಸಾಲದೆ ಅರಣ್ಯ ಇಲಾಖೆಯವರಿಗೆ ಲಂಚ ಸಾಲದೆ ಅವರೆಲ್ಲರ ಆಸೆಗಣ್ಣುಗಳು ಕೆಸರೂರಿನ ಅರಣ್ಯದ ಮೇಲೆ ಬಿತ್ತು. ಮಂತ್ರಿಗಳವರೆಗೂ ಹೋಗಿ ಅದನ್ನು ಹತ್ತಾರು ವರ್ಷಗಳಿಗೆ ಒಮ್ಮೆಹರಾಜು ಕೂಗುವಂತೆ ಕಾನೂನು ತಂದರು. ಕೇರಳದಿಂದ ಬಂದ ಒಬ್ಬ ಸುಲೇಮಾನ್ ಯೂಸಫ್ ಬೇರಿ ಅನ್ನುವವನಿಗೆ ಕಂಟ್ರಾಕ್ಟ್ ಕೊಡಿಸಿದರು. ಅವನಿಂದ ದೊರೆತ ಥೈಲಿಗಟ್ಟಲೆ ಹಣ ನೋಡಿ ಮಂತ್ರಿಗಳಿಗೂ ಬಾಯಲ್ಲಿ ನೀರೂರಿತು. ಅದು ಮನ್ನಾ ಜಂಗ್ಲಿ. ಅದರಲ್ಲಿ ಮರ ಕಡಿಯಲೇಕೂಡದೆಂದು ಸರ್ಕಾರದ ಆಜ್ಞೆ ಇದ್ದರೂ ಏಲಕ್ಕಿ ಕೃಷಿಗೆ ಕೊಂಬೆಗಳನ್ನು



ಕಡಿದು ನೆರಳು ಕೊಂಚ ಕಡಿಮೆ ಮಾಡಬಹುದೆಂದೂ ಅದನ್ನು ಸೌದೆಯಾಗಿ ಬಿಕರಿ ಮಾಡಬಹುದೆಂದೂ ಪರ್ವಾನಗಿ ತಂದರು.

ಸರಿ ಆರಂಭವಾಯ್ತು. ಸುಲೇಮಾನ್ ಯೂಸಫ್ ಬೇರಿ ಕೊಂಬೆ ಕಡಿಯ ಹೊರಟವನು ಕಾಂಡಗಳನ್ನೇ ಕಡಿದ. ನೂರಾರು ವರ್ಷಗಳ ದೇಗುಲದ ಕಂಬಗಳಂಥ ಹೆಮ್ಮರಗಳು ಚೀತ್ಕಾರದೊಂದಿಗೆ ನೆಲಕ್ಕುರುಳಿದವು. ಲೋಡುಗಟ್ಟಲೆ ಮರದ ದಿಮ್ಮಿಗಳು ಕೆಸರೂರಿನ ಹಾದಿಯಲ್ಲಿ ಮಂಗಳೂರಿನ ದಿಕ್ಕು ಹಿಡಿದವು. ಕೆಸರೂರಿನ ಜನಕ್ಕೆ ವರ್ಷಾಂತರದವರೆಗೆ ಇದೊಂದು ಚಿರಪರಿಚಿತ ನೋಟ ಅನಂತರ ಕಾಡಿನಡಿಯಲ್ಲಿ ಬೆಳೆದಿದ್ದ ಏಲಕ್ಕಿ ಗಿಡಗಳು ಎಲೆ ಬಾಡಿ ಬಿಸಿಲಿನ ಹೊಡೆತಕ್ಕೆ ಕ್ಷೀಣಿಸಿ ಬಹುಬೇಗ ನೆಲ ಹಿಡಿದುವು. ಕಾಡು ನೆಲಸಮವಾದಲ್ಲಿ ಲಂಟಾನದ ಅಭೇದ್ಯ ಜಿಗ್ಗು ಕೋಟೆಗಟ್ಟಿ ಕೆಸರೂರನ್ನು ಸುತ್ತುವರಿಯಿತು.

ಲಂಟಾನದಂಥ ಮಾಯಾವಿ ರಾಕ್ಷಸನೇ ಇಲ್ಲ. ಗಿಡವನ್ನು ಬೇರುಸಮೇತ ಕಿತ್ತೊಗೆದರೆ ಅಲ್ಲೇ ಬೇರು ಕೊಡುತ್ತದೆ. ಕಡ್ಡಿ ಮುರಿದೆಸೆದರೆ ಅದೇ ಬೇರು ಕೊಟ್ಟು ಚಿಗುರೊಡೆಯುತ್ತದೆ. ಹಕ್ಕಿಗಳು ಬೀಜ ತಿಂದು ಹಿಕ್ಕೆ ಹಾಕಿದರೆ ಅಲ್ಲೇ ಮೊಳಕೆ ಒಡೆಯುತ್ತದೆ. ಬಳ್ಳಿಯಂತೆ ಮರಕ್ಕೆ ಹಬ್ಬುತ್ತದೆ. ಪೊದೆಯಂತೆ ಸ್ವತಂತ್ರವಾಗಿ ನಿಂತು ಬೆಳೆಯುತ್ತದೆ. ಲಂಟಾನದ ಈ ಭಯಾನಕ ಜಿಗ್ಗು ಏಲಕ್ಕಿಯ ಕುತ್ತಿಗೆ ಹಿಸುಕಿ ಕಾಡನ್ನೆಲ್ಲಾ ಅಕ್ರಮಿಸಿತು. ಕೆಸರೂರಿನ ಜನ ಇದರ ವಿರಾಟ್ ರೂಪವನ್ನು ಕಂಡು ಕಂಗಾಲಾದರು. ಬೇರಿ ಕೆಲಸದ ದೂರಗಾಮಿ ಪರಿಣಾಮಗಳನ್ನು ಅವರು ಊಹಿಸಿರಲಿಲ್ಲ. ಆದರೆ ದುರ್ದೈವದ ಸಂಗತಿ ಎಂದರೆ ಇದು ಅಲ್ಲಿಗೇ ನಿಲ್ಲುವಂತದಾಗಿರಲಿಲ್ಲ. ಜನರ ನಿರ್ಲಿಪ್ತ ಅಸಹಾಯಕತೆಯಲ್ಲಿ ಒಂದು ಸಂಸ್ಕೃತಿಯೇ ಅವಸಾನವನ್ನೈದುತ್ತಿರುವಾಗ ಏನೆಲ್ಲ ಸಂಭವಿಸುತ್ತದೆಯೋ ಅದೆಲ್ಲಾ ಕೆಸರೂರಿನಲ್ಲಿ ಆರಂಭವಾಗಿತ್ತು.

ಈಗ ಖಾಸಗಿ ತೋಟಗಾರರೂ ತಮ್ಮ ತೋಟದ ಮರಗಳನ್ನು ಒಬ್ಬೊಬ್ಬರಾಗಿ ಮಾರತೊಡಗಿದ್ದರು. ಅಡಮಾನ ಬ್ಯಾಂಕಿನ ಸಾಲಕ್ಕೆ, ಮನೆ ಜಪ್ತಿಗೆ ಬರುವವರ ಸಮಾಧಾನಕ್ಕೆ, ಹೀಗೆ ಮಾಡದೆ ಬೇರೆ ವಿಧಿಯೇ ಇರಲಿಲ್ಲ. ಏಲಕ್ಕಿ ಬೆಳೆ ಕುಸಿಯತೊಡಗಿದೆ. ಗೊಬ್ಬರ ಹಾಕಿ ಔಷಧಿ ಸಿಂಪಡಿಸಿ ಏನೇನು ಮಾಡಿದರು ಉಪಯೋಗ ಕಾಣುತ್ತಿಲ್ಲ. ಲಂಟಾನದ ರಾಕ್ಷಸ ತೋಟದ ಬೇಲಿಯಾಚೆ ನುಗ್ಗಲು ಕಾದು ಕುಳಿತಿದ್ದಾನೆ.

ಶಾಮನಂದನ ಅಂಗಾಡಿಗೆ ರಿಪೋರ್ಟ್ ನೋಟ್ಸ್ ತಯ್ಯಾರು ಮಾಡಲು ಕೈಯೇ ಬರುತ್ತಿಲ್ಲ. ತಾನು ಅತ್ಯಂತ ಜಟಿಲ ಸಮಸ್ಯೆಯೊಂದನ್ನು ತನಿಖೆ ಮಾಡಲು

ಬಂದಂತೆನ್ನಿಸಿತು, ಏನೇ ಆಗಲಿ ಈ ಗೊಂದಲವನ್ನು ಗೊಂದಲವನ್ನಾಗೇ ತನಿಖೆ ಮಾಡಬಾರದು ಎಂದು ತನ್ನ ಸಮಸ್ಯೆಗಳನ್ನೆಲ್ಲಾ ವರ್ಗೀಕರಿಸತೊಡಗಿದ. ಮೊದಲು ಮಾರ್ಕೆಟಿಂಗ್, ಇಲ್ಲಿನ ಏಲಕ್ಕಿ ಮಾರುಕಟ್ಟೆ ವ್ಯವಹಾರ ಹೇಗಿದೆ. ಬೆಳೆಗಾರರಿಗೆ ಯಾವ ಯಾವ ರೀತಿ ತೊಂದರೆ ಹಾಗೂ ಅನುಕೂಲಗಳಿದ್ದಾವೆ? ಏಲಕ್ಕಿ ಬೆಳೆ ಕಡಿಮೆಯಾಗುತ್ತಿದೆಯೇ ಅಥವಾ ಉತ್ಪಾದನೆ. ಇನ್ನಾವುದೋ ಕಳ್ಳಹಾದಿಯಿಂದ ದೇಶದಾಚೆಗೆ ರವಾನೆಯಾಗುತ್ತಿದೆಯೇ? ಕುಸಿಯುತ್ತಿದ್ದರೆ ಅದಕ್ಕೇನು ಕಾರಣ. ಇಲ್ಲಿನ ಸಂಶೋಧನ ಕೇಂದ್ರ ಏನಾದರೂ ಈ ಬಗ್ಗೆ ತನಿಖೆ ತೀರ್ಮಾನಗಳಿಗೆ ಬಂದಿದೆಯೋ? ಇಷ್ಟೇ ತಾನೆ! ನನಗೆ ವಹಿಸಿರೋ ಕೆಲಸ.

ಅದರೆ ಎಲ್ಲಕ್ಕಿಂತ ಮುಖ್ಯ ನಮ್ಮ ದೇಶದ ಅತ್ಯುತ್ತಮ ಕೃಷಿ ವಿಜ್ಞಾನಿ ಜೋಗಿಹಾಳ್ ಈ ಬಗ್ಗೆ ಏನೂ ಮಾಡಲಿಲ್ಲವೆ? ಅವರ ಸಾವು ಆಕಸ್ಮಿಕವೆ? ಅಂಗಾಡಿ ತಲೆಕೊಡವಿಕೊಂಡ. ನನಗ್ಯಾಕೆ ಈ ಯಾವುದೋ ಆಗಿಹೋದ ಅನಾಹುತದ ಉಸಾಬರಿ? ಎಂದೆನ್ನಿಸಿತು. ಆದರೂ ಅದೇಕೋ ಜೋಗಿಹಾಳ್‌ರ ಸಾವಿಗೂ ತನ್ನ ಉದ್ದೇಶಕ್ಕೂ ಸಂಬಂಧವಿರಬಹುದು ಎಂಬ ಶಂಕೆ ಅವನಲ್ಲಿ ಮೂಡತೊಡಿಗತ್ತು.

ಮಂಜಿನ ಮೋಡಗಳು ತಂಗಾಳಿಯಲ್ಲಿ ಕೆಸರೂರಿನ ನಡುವೆ ನುಗ್ಗಿ ಬರತೊಡಗಿದವು. ಮಂಜು ಮುಸುಗಿದ್ದರಿಂದ ದೂರದ ದೀಪಗಳೆಲ್ಲಾ ಹತ್ತಿಯ ಮುದ್ದೆಗಳಂತೆ ಕಾಣುತ್ತಿದ್ದವು.



## ಅಧ್ಯಾಯ ೧೦



ಸಂಶೋಧನ ಕೇಂದ್ರದ ಡಾಕ್ಟರ್ ಪಾಟೀಲ್ ಒಬ್ಬ ಅತ್ಯಂತ ಚುರುಕಾದ ಚೂಪು ಮೂಗಿನ ತೆಳ್ಳನೆಯ ಮನುಷ್ಯ. ಅಂಗಾಡಿ ಅವರ ಟೇಬಲ್ಲಿನ ಎದುರು ಕುಳಿತುಕೊಳ್ಳುತ್ತಿದ್ದಂತೆಯೆ "ವೆಲ್ ವೆಲ್ ವೆಲ್. ಏನಾಗಬೇಕು ನಿಮಗೆ? ತಾವ್ಯಾರು ಗೊತ್ತಾಗಲಿಲ್ಲ" ಎಂದರು. ಟೇಬಲ್ಲಿನ ಇನ್ನೊಂದು ತುದಿಯಲ್ಲಿ ಮತ್ಯಾರೋ ಒಬ್ಬರು ಗಡ್ಡ ಬಿಟ್ಟವರು ಕುಳಿತಿದ್ದರು. ಅಂಗಾಡಿ ಪಾಟೀಲರು ಮಾತಾಡಿಸಿದ್ದರಿಂದ ಅವರನ್ನು ಅಷ್ಟಾಗಿ ಗಮನಿಸಲಿಲ್ಲ.

"ನನ್ನ ಹೆಸರು ಅಂಗಾಡಿ, ಶಾಮನಂದನ್ ಅಂಗಾಡಿ. ನಾನು ಅಲೆಪ್ಪಿಯಿಂದ ಬಂದಿದ್ದೇನೆ ನಾನು ಅಲ್ಲಿ ಏಲಕ್ಕಿ ಬೋರ್ಡಿನ ಚೀಫ್ ಇಂಟೆಲಿಜೆನ್ಸ್ ಆಫೀಸರ್."

"ಓಹೋ ತುಂಬಾ ಸಂತೋಷ. ನಮ್ಮ ಸಂಶೋದನ ಕೇಂದ್ರ ಕೃಷಿ ವಿಶ್ವವಿದ್ಯಾಲಯಕ್ಕೆ ಸೇರಿರೋದರಿಂದ ನನಗೆ ಏಲಕ್ಕಿ ಬೋರ್ಡ್ ಜನಗಳು ಅಷ್ಟಾಗಿ ಪರಿಚಯವಿಲ್ಲ. ತುಂಬಾ ಸಂತೋಷ."

"ನಾನು ಕೆಲವು ವಿಷಯ ತಮ್ಮನ್ನು ಕೇಳೋದಕ್ಕೇಂತ ಬಂದಿದ್ದೇನೆ ಸಾರ್. ತಾವು ತುಂಬಾ ಕೆಲಸದ ಗಡಿಬಿಡಿಯಲ್ಲಿದ್ದರೆ ನಾನು ಬಂದ ಕೆಲಸ ಏನೆಂದು ಸಂಕ್ತಿಪ್ತವಾಗಿ ವಿವರಿಸಿ ಅನಂತರ ಬಂದು ತಮ್ಮನ್ನು ಕಾಣುತ್ತೇನೆ."

"ಹೌದು, ಇವತ್ತು ತಿಂಗಳ ಮೊದಲು ನೋಡಿ, ತುಂಬಾ ಕೆಲಸದ ಒತ್ತಡ ಇದೆ. ನೀವು ಮತ್ತೆ ನೋಡಿದರೆ ಕೊಂಚ ಗಮನಕೊಟ್ಟು ಮಾತಾಡಬಹುದು" ಎಂದವರು ಮತ್ತೆ ಜ್ಞಾಪಿಸಿಕೊಂಡವರಂತೆ "ಸಾರಿ, ಇವರು ನೋಡಿ ಜಯರಾಂ ಅಂತ. ಇಲ್ಲಿಗೆ ಹದಿನೈದು ಮೈಲಿ ದೂರದಲ್ಲಿ ಇವರದೊಂದು ಒಳ್ಳೆ ಏಲಕ್ಕಿ ತೋಟ ಇದೆ. ಒಳ್ಳೆ ಬರಹಗಾರರು ವಿಚಾರವಾದಿ ಆಂದೋಳನದ ಮುಂದಾಳುಗಳು. ಅಲೌಕಿಕ ಘಟನೆಗಳ ತನಿಖೆಗಾಗಿ ಪ್ರಸಿದ್ಧ ವಿಚಾರವಾದಿ ಡಾ. ಕೋವೂರ್‌ರವರು ಕರ್ನಾಟಕಕ್ಕೆ ಇವರನ್ನೇ ಪ್ರತಿನಿಧಿಯನ್ನಾಗಿ ನಿಯಮಿಸಿದ್ದಾಎ," ಎಂದು ಪಕ್ಕ ಕುಳಿತಿದ್ದ ಗಡ್ಡದ ಮನುಷ್ಯನನ್ನು ಪಾಟೀಲರು ಅಂಗಾಡಿಗೆ ಪರಿಚಯ ಮಾಡಿಕೊಟ್ಟರು.

"ವೆರಿ ಗ್ಲಾಡ್ ಟು ಮೀಟ್ ಯು" ಎಮದು ಅವರ ಕೈ ಕುಲುಕಲು ಎದ್ದ ಅಂಗಾಡಿ ಇದ್ದಕ್ಕಿದ್ದಂತೆ ಷಾಕ್ ಹೊಡೆದಂತೆ ಏನನ್ನೋ ಜ್ಞಾಪಿಸಿಕೊಂಡು "ಅರೆ" ಎಂದ. ಆ ಕ್ಷಣದಲ್ಲಿ ಜಯರಾಂಗೂ ಏನೋ ಜ್ಞಾಪಕವಾಗತೊಡಗಿತು. ಪಾಟೀಲರು ಕೌತುಕದಿಂದ ಇವರಿಬ್ಬರ ಪ್ರತಿಕ್ತಿಯೆಗಳನ್ನೂ ಗಮನಿಸಿದರು.

"ನೀವು ನೆತ್ತರುಕೊಂಡದ ಜಯರಾಮ್ ಅಲ್ವ? ಜ್ಞಾಪಕ ಆತ್ತಪ್ಪಾ ನಿಮ್ಮ ಹೆಸರು."

"ಅದು ನಾನು ಪೋಲೀಸ್ ಡಿಪಾರ್ಟಮೆಂಟು ಬಿಟ್ಟು ಇಂಟೆಲಿಜೆನ್ಸ್ ಸೇರಿದಾಗ ವದಲಾಯಿಸಿಕೊಂಡಿದ್ದು. ಕಾರಣ ಇಷ್ಟೆ" ಎಂದು ಹಿಂದೆ ಹೇಳಿದ್ದನ್ನೆ ಮತ್ತೆ ಸಂಕ್ಷಿಪ್ತವಾಗಿ ಜಯರಾಮ್‌ಗೆ ತಿಳಿಸಿದ.

"ಏನು ನಿಮ್ಮಿಬ್ಬರದೂ ಹಳೇ ಪರಿಚಯ ಅನ್ನೋ ಹಾಗೆ ಕಾಣ್ತದೆ?' ಎಂದರು ಪಾಟೀಲರು.

"ಪರಿಚಯ ಅಲ್ಲಾ ಸಾರ್. ಒಂದು ವಿಚಿತ್ರ ಪರಿಸ್ಥಿತೀಲಿ ನಾನು ಇವರನ್ನು



ಸಂಧಿಸಿದ್ದು. ಇವರದ್ದೊಂದು ಕಥೇನ ಸಿನಿಮಾ ಮಾಡೋದಕ್ಕೆ ಅಂತ ಒಬ್ಬ ಡೈರೆಕ್ಟರ್ ತಗೊಂಡು ಅದಕ್ಕೆ ಎಫ್.ಎಫ್.ಸಿ.ಗೆ ಸಾಲಕ್ಕೆ ಅರ್ಜಿ ಹಾಕಿದದ. ಸಾಲ ಕೊಡೋದಕ್ಕೆ ಮೊದಲು ಅದನ್ನು ಪೋಲೀಸ್ ಅಬೀಪ್ರಾಯಕ್ಕಾಗಿ ಕಳಿಸಿದ್ದರು. ಆಗ ನಾನು ಆರು ತಿಂಗಳು ಎಸ್.ಐ. ಆಗಿ ಹಾಸನ ಜಿಲ್ಲೆಯಲ್ಲಿದ್ದೆ. ಇವರ ತೋಟ ಹಾಸನ ಜಿಲ್ಲೆಯೊಳಗೆ ಬರುತ್ತೆ.

ಅದೊಂದು ಒಳ್ಳೆ ಕಥೆ. ಒಂದು ಸ್ಕೂಲಿಗೆ ಹೋಗೋ ಹುಡುಗಿ ಕೊಲೆಯಾದ ಕತೆ. ನಾನು ಆ ಕಥೆ ಓದಿದ ತಕ್ಷಣ ಅಲ್ಲಿ ನಡೆದ ಅಂಥದೆ ಒಂದು ಘಟನೆ ಜ್ಞಾಪಕಕ್ಕೆ ಬಂತು. ಕೇಸ್ ತನಿಖೆ ರಿಜಿಸ್ಟರ್ ತೆಗೆದು ನೋಡ್ತೇನೆ ಅಂಥದೇ ತದ್ರೂವು ಘಟನೆ ಬಂದಿದೆ ಅಲ್ಲಿ ಆದರೆ ಕೊಲೆಗಡುಕ ಮಾತ್ರ ನಾಪತ್ತೆ. ನನಗೆ ಜಯರಾಮ್‌ಗೆ ಈ ವಿಷಯ ಚೆನ್ನಾಗಿಗೊತ್ತಿರಬೇಕೆಂದು ಗುಮಾನಿ ಬಂತಿ. ಅದಕ್ಕೆ ಅವರನ್ನು ಕರೆಸಿದೆ; ಆದರೆ ಇವರು ತನಗೆ ಒಂದೆರಡು ದೂರದ ವರ್ತಮಾನ ಬಿಟ್ಟರೆ ಮತ್ತೇನೂ ಗೊತ್ತಿಲ್ಲ ಅಂದುಬಿಟ್ಟರು. ಸುಮಾರು ಇಪ್ಪತ್ತು ವರ್ಷ ಹಿಂದಿನ ವಿಷಯ. ನನಗೆ ಗೊತ್ತಿದ್ದಪ್ಪನ್ನಾದರೂ ಹೇಳಬಹುದಿತ್ತಲ್ಲಾ ಅಂತ. ಬಹುಶಃ ಜಯರಾಮ್ ಕೋರ್ಟು, ಕೇಸು, ಸಾಕ್ಷ್ಯ ಹೇಳೋದು ಇತ್ಯಾದಿಗಳನ್ನೆಲ್ಲಾ ಯೋಚಿಸಿ ಹಿಂಜರಿದರು ಅಂತ ಕಾಣ್ತದೆ. ಅಂತೂ ನಮ್ಮ ಪರಿಚಯ ಈ ತರ ವಿಚಿತ್ರ ರೀತಿಯಲ್ಲಿ ಆದ್ದರಿಂದ ಮರೆಯೋಹಾಗಿಲ್ಲ," ಎಂದು ಹಳೆ ಪುರಾಣವನ್ನು ಪಾಟೀಲರಿಗೆ ಅಂಗಾಡಿ ಕೊರೆದ.

"ಒಬ್ಬ ಬರಹಗಾರನಿಗೆ ಕೆಲವು ವಾಸ್ತವ ಸಂಗತಿಗಳನ್ನು ತಿಳಿಸಿದರೆ ಅವನು ಸತ್ಯಕ್ಕೆ ತೀರಾ ಹತ್ತಿರವಾದ ಕಲಾಕೃತಿ ರಚಿಸ್ತಾನೆ ಅಂಗಾಡಿ. ಈಗಲೂ ನಿಮ್ಮ ಅನುಮಾನ ಉಳಿದಿದ್ದರೆ ಅದನ್ನು ಬಿಡಿ. ನಾನು ಆ ಬಗ್ಗೆ ಆಗ ಹೇಳಿದ್ದನ್ನೇ ಈಗಲೂ ಹೇಳೋದು. ನನಗೆ ಆ ವಿಷಯ ಏನೇನೂ ಈಗಲೂ ಗೊತ್ತಿಲ್ಲ," ಎಂದ ಜಯರಾಮ್.

"ಒಂದು ಕಲಾಕೃತಿ ಸಿನಿಮಾ ಮಾಡೋದಕ್ಕೆ ಮೊದಲು ಪೋಲೀಸ್ ವಿಮರ್ಶೆ ಬೇರೆ ಆಗಬೇಕೆ?" ಎಂದು ಆಶ್ವರ್ಯ ಸೂಚಿಸಿದರು ಪಾಟೀಲರು.

"ಅಯ್ಯೋ ಬಿಡಿ, ಈಗ ನಾಟಕ ಆಡೋದಕ್ಕೂ ಪೋಲಿಸರ ಅನುಮತಿಬೇಕು. ಎಫ್.ಎಫ್.ಸಿಯವರು ಲಕ್ಷಾಂತರ ಹಣ ತೊಡಗಿಸೋದರಿಂದ ಅದೇನಾದರೂ ತೀರಾ ವಿವಾದಸ್ಪದ ವಿಷಯದ ಕತೇನೋ ತಿಳಿದುಕೊಳ್ಳಲು ಈ ಕ್ರಮ ಇಟ್ಟಿಕೊಂಡಿದ್ದಾರೆ ಅಂತ ಕಾಣ್ತದೆ."

"ಕೊನೆಗೆ ಆ ಕಥೆ ಸಿನಿಮಾ ಆಯ್ತೊ?" ಎಂದರು ಪಾಟೀಲ್.

"ನಾನು ಬಂದದ್ದು ಕರ್ನಾಟಕದ ಏಲಕ್ಕಿ ಉತ್ಪಾದನೆ ತೀವ್ರವಾಗಿ ಕುಸಿಯುತ್ತಾ ಇರುವುದರ ಬಗ್ಗೆ ಭಾರತ ಸರ್ಕಾರ ಕಳವಳಗೊಂಡಿದೆ. ಅದಕ್ಕಾಗಿ ಇದರ ಬಗ್ಗೆ ಯಾವ ಯಾವ ತರದ ಮಾಹಿತಿ ಏನೇನು ಸಿಕ್ಕುತ್ತದೋ ಅದನ್ನೆಲ್ಲಾ ತಿಳಿದು ವರದಿ ಮಾಡಬೇಕಾಗಿದೆ. ಮಾರುಕಟ್ಟೆ ಇನ್ನೂ ಮಾರ್ವಾಡಿಗಳು, ಬೇರಿಗಳು, ರಫ್ತುದಾರರು ಇತ್ಯಾದಿ ಖಾಸಗಿಉ ವ್ಯಕ್ತಿಗಳ ಕಥಲೇ ಇರೋದರಿಂದ ಅದೇನಾದರೂ ಬೆಳೆಗಾರರಿಗೆ ಪ್ರತಿಕೂಲವಾಗಿದೆಯೋ? ಪರಿಶಿಲಿಸಬೇಕಾಗಿದೆ. ಇನ್ನೊಂದು, ಯಾವ ನಿಶ್ಚಿತ ಕಾರಣದಿಂದ ಹೀಗಾಗ್ತಿದೆ ಅನ್ನೋದನ್ನೇನಾದರೂ ಸಂಶೋದಕರು ಪತ್ತೆ ಮಾಡಿದ್ದಾರೆಯೋ? ಇದರ ಜೊತೆಗೆ ನನಗೆ ಡಾ॥ ಜೋಗಿಹಾಳರು ತಮ್ಮ ಸ್ಥಾನದಲ್ಲಿ ಹಲವಾರು ವರ್ಷ ಕೆಲಸ ಮಾಡಿದ್ದರಲ್ಲಾ ಅವರು ಏಲಕ್ಕಿಗೆ ಯಾವ ವಿಧವಾದ ಸಹಾಯವನ್ನು ಏಕೆ ಮಾಡಲಾಗಲಿಲ್ಲ? ಮಿಕ್ಕ ಕೃಷಿರಂಗದಲ್ಲಿ ಕ್ರಾಂತಿಕಾರಕ ಬದಲಾವಣೆ ಮಾಡಿದರು. ಇಲ್ಲಿ ಯಾಕೆ ಅವರಿಗೆ ಸಾಧ್ಯವಾಗಲಿಲ್ಲ? ಅನ್ನೋದೊಂದು ಕಾಡ್ತಾ ಇದೆ. ಇವನ್ನೆಲ್ಲಾ ತಾವು ಕೊಂಚ ಯೋಚನೆ ಮಾಡಿದ್ದರೆ ನಾನು ಅನಂತರ ಬಂದು ತಮ್ಮೊಡನೆ ಮಾತಾಡ್ತೀನಿ ಸಾರ್. ಹರಿಬರೀಲಿ ರಿಪೋರ್ಟು ತಯ್ಯಾರು ಮಾಡಿ ಏನೋ ಉಪಯೋಗವಿಲ್ಲ. ಯಾಕೆಂದರೆ ನನ್ನ ರಿಪೋಪೊರ್ಟು ನೇರವಾಗಿ ಕೇಂದ್ರ ಕೃಷಿ ಮಂತ್ರಿಗಳ ಟೇಬಲ್ಲಿಗೇ ಹೋಗುತ್ತೆ," ಎಂದು ಅಂಗಾಡಿ ತಾನು ಬಂದ ಉದ್ದೇಶವನ್ನು ಸಂಕ್ಷಿಪ್ತವಾಗಿ ಪಾಟೀಲರಿಗೆ ವರದಿಮಾಡಿದ.

"ನನ್ನ ಪಾಲಿನ ಕೃಷಿ ವಿಜ್ಞಾನಕ್ಕೆ ಸಂಬಂಧಪಟ್ಟಿದ್ದನ್ನು ನಾನು ಹೇಳಬಲ್ಲೆ ಅಂಗಾಡಿ. ಆದರೆ ಮಿಕ್ಕದ್ದು ನನಗೆ ಯಾವೂ ಸರಿಯಾಗಿ ಗೊತ್ತಿಲ್ಲ. ಹೇಳಿದರೂ ಅದೆಲ್ಲಾ ಆಫ್ ದಿ ರಿಕಾರ್ಡ್. ಆ ಕಡೆ ನಿಮ್ಮ ತನಿಖೆ ಮುಂದುವರಿಸೋದಕ್ಕೆ ನೀವು ಜಯರಾಮ್ ಅಂಥವರಿಂದ ಬೇಕಾದಷ್ಟು ಸಹಾಯ ತಗೋಬಹುದಂತ ಕಾಣ್ತದೆ. ಏಲಕ್ಕಿಗೆ ಈಗ ಪ್ರಕೃತಿ, ಪರಿಸರ, ಸಮಾಜ ಎಲ್ಲಾ ಕಡೆಯಿಂದ ವೈರಿಗಳ ಹಾವಳಿ ಆರಂಭವಾಗಿದೆ. ಯಾವ ದಿಕ್ಕಿನಲ್ಲಿ ಸಂಶೋಧನೆ ಮಾಡಲೂ ತೋಚದ ಪರಿಸ್ಥಿತಿ. ಜೊತೆಗೆ ಡಾ॥ ಜೋಗಿಹಾಳರ ಅಕಾಲ ಮರಣ ಬೇರೆ ನಮಗೆ ದೊಡ್ಡ ಅಡಚಣೆಯಾಗಿದೆ. ನಮ್ಮ ಸಂಶೋಧನೆ ಮುಂದುವರಿಸೋದಕ್ಕೆ ಯಾವು ದಿಕ್ಸೂಚಿನೂ ಇನ್ನೂ ಕಾಣ್ತ ಇಲ್ಲ"

"ಹಾಗಲ್ಲ ಡಾ॥ ಪಾಟೀಲ್, ಜೋಗಿಹಾಳರ ಜೊತೆ ಅನೇಕ ವಿಜ್ಞಾನಿಗಳು ಇಲ್ಲಿ ಸಹಾಯಕರಾಗಿ ಕೆಲಸ ಮಾಡಿರಲಿಲ್ಲವೆ? ಅವರಿಂದೇನೂ ಸಹಾಯವಾಗೋದಿಲ್ಲವೆ?"



"ಇದಾರಿದಾರೆ! ಭಾಳ ಜನ! ಸಂಬಳ ದಂಡಕ್ಕೆ. ಡಾ॥ ಜೋಗಿಹಾಳ್‌ರಿಗೇ ಏನೂ ಮಾಡಲಾಗಲಿಲ್ಲ ಅಂದಮೇಲೆ ನಾನು ಇವರ ಬಗ್ಗೆ ಹೇಳೋದೇನಿದೆ. ಸತ್ಯನಾರಾಯಣ ಪೂಜೆ, ವರಲಕ್ಷ್ಮಿವ್ರತ, ಉದ್ಭವ ವೆಂಕಟೇಶ್ವರ ಮಹಾತ್ಮೆ ನಡಸ್ತಾ ಪರಲೋಕದ ಕ್ಷೇಮಚಿಂತನೆ ಮಾಡ್ತಾ ಒಂದು ಕಾಲು ಆಗಲೇ ಸ್ವರ್ಗದಲ್ಲಿಟ್ಟಿದ್ದಾರೆ. ನೀವು ಬಂದಿರೋದು ತನಿಕೆ ಮಾಡೋದಕ್ಕೆ ತಾನೆ! ಅವರನ್ನೆಲ್ಲಾ ಕೇಳಿ ನೋಡಿ. ತನಿಖೆ ಮಾಡಿ. ನಾನು ಮಾತಾಡೋದಕ್ಕೆ ಹೋದರೆ ಎಲ್ಲಾ ಆಫ್ ದಿ ರಿಕಾರ್ಡ್ ಮಾತುಗಳೂ ಅನ್‌ಪಾರ್ಲಿಮೆಂಟರಿ ಶಬ್ದಗಳೂ ಬರ್ತವೆ."

ಅಂಗಾಡಿಗೆ ಪಾಟೀಲರ ಮಾತಿನಲ್ಲಿ ಅವರ ಸಹೋದ್ಯೋಗಿಗಳ ಬಗ್ಗೆ ಅಪಾರ ಕೋಪ ಇರುವುದು ಕಂಡಿತು.

"ಕೋಪಾ ಮಾಡಿಕೊಳ್ಳೋದರಿಂದೇನೂ ಪ್ರಯೋಜನವಿಲ್ಲಾ ಸಾರ್. ಈ ದೇಶದಲ್ಲಿ ಎಲ್ಲಾ ಸಂಶೋಧನ ಕೇಂದ್ರಗಳೂ ಹೆಚ್ಚೂಕಮ್ಮಿ ಇದೇ ತರಾ ಇದಾವೆ. ಬಾಹ್ಯಾಕಾಶ ಸಂಶೋಧನೆ, ಇಂಧನ ಸಂಶೋಧನೆ, ಅಹಾರ ಸಂಶೋಧನೆ ಹೀಗೇ ನೂರಾರಿವೆ. ಅವಕ್ಕೆ ಹೋಲಿಸಿದರೆ ನಿಮ್ಮದು ಎಷ್ಟೋ ವಾಸಿ," ಎಂದು ಕೋಪ ಶಮನ ಮಾಡುವಂತೆ ಅಂಗಾಡಿ ಮಾತಾಡಿದ.

"ಹಾಗಲ್ರೀ ಅಂಗಾಡಿ, ನೀವು ಇವತ್ತು ಇಲ್ಲಿಗೆ ಹೊಸದಾಗಿ ಕಾಲಿಡ್ತಿದ್ದೀರಿ. ಒಂದು ಉದಾಹರಣೆ ಕೊಡ್ತೀನಿ ನೋಡಿ ವಿಷ್ಯಾ ಅರ್ಥವಾಗಲೀ ಅಂತ. ಇವತ್ತು ನಮ್ಮ ಸಂಶೋಧನ ಕೇಂದ್ರದ ನೌಕರರ ಪ್ರತಿಭಟನೆ ಅಂತೆ! ಅದಕ್ಕೇ ಇವತ್ತು ನನಗೆ ಪುರುಸೊತ್ತಿಲ್ಲ. ಏನಪ್ಪಾ ಕಾರಣ ಅಂತ ಕೇಳಿದರೆ ಕೇಂದ್ರ ಸರ್ಕಾರದ ಕಾನೂನಿನಲ್ಲಿ ಸಮುದ್ರ ಮಟ್ಟಕ್ಕಿಂತ ನಾಲ್ಕು ಸಾವಿರ ಅಡಿ ಎತ್ತರದಲ್ಲಿ ಇರೋ ಜಾಗದಲ್ಲಿ ನೌಕರರಿಗೆ ಚಳಿಗಾಲದ ಭತ್ಯೆ ಅಂತ ಇದೆಯಂತೆ. ನಮ್ಮ ವಿಜ್ಞಾನಿ ಯಾವ್ನೋನೋ ಅದನ್ನು ಸಂಶೋದನೆ ಮಾಡಿದ್ದಾನೆ. ಮೊನ್ನೆ ತಾನೆ ಒಂದು ಅಲ್ಟಾಮೀಟರ್ ನಮ್ಮ ಸಂಶೋಧನೆಗಳಿಗೆ ಅಂತ ತರಿಸಿದೆವು. ಅದನ್ನು ತಗೊಂಡು ಕೆಸರೂರಿನ ತಾಲ್ಲೂಕಾಫೀಸ್ ಇರೋ ಜಾಗ ಸಮುದ್ರ ಮಟ್ಟಕ್ಕಿಂತ ನಾಲ್ಕು ಸಾವಿರ ಅಡಿ ಎತ್ತರದಲ್ಲಿದೆ ಅಂತ ಪತ್ತೆ ಮಾಡಿ ನಮಗೂ ಚಳಿಗಾಲದ ಭತ್ಯೆ ಬರಬೇಕಂತ ಪ್ರತಿಭಟನೆ ಮಾಡ್ತಿದಾರೆ! ನೋಡಿದಿರಾ! ನಮ್ಮ ಉಪಕರಣಗಳು ವಿಜ್ಞಾನಿಗಳು ಎಲ್ಲಾ ಮಾಡ್ತಿರೋ ಕೆಲಸ!"

ಜಯರಾಮ್‌ನಿಗೆ ರಾಜಕಾರಣದ ಬಗ್ಗೆ ಅಷ್ಟೊಂದೇನೂ ಕುತೂಹಲ ಹುಟ್ಟಲಿಲ್ಲೆಂದು ಕಾಣ್ತದೆ. "ಬರ್ತೀನಿ ಸಾರ್. ಹಾಗಾದರೆ ನೀವು ಮಂತ್ರ ಮೋಡಿ ಹಾಕೋದು ಯಂತ್ರ ಕಟ್ಟೋದು ಎಲ್ಲ ಸುಳ್ಳೂಂತ ನಮ್ಮ ಸದಸ್ಯರಿಗೆ ತಿಳಿಸಿಬಿಡ್ತೇನೆ,"

ಎಂದು ಹೇಳುತ್ತಾ ಎದ್ದ.

"ನೋನೋ! ನಾನೂ ನಿಮ್ಮಂಗೆ ವಿಚಾರವಾದಿ ಅಂತ ತಿಳಿದೂ ಈ ಪ್ರಶ್ನೆ ಕೇಳ್ತಿರಲ್ಲ! ನಿಮ್ಮ ಹುಡುಗರು ತಪ್ಪು ತಿಳುಕೊಂಡು ನಿಮಗೆ ತೊಂದರೆ ಕೊಟ್ಟಿದ್ದಾರೆ ಜಯರಾಮ್."

"ಇಲ್ಲ ಸಾರ್, ನಾನು ನಂಬಲಿಲ್ಲಾ. ಆದರೂ ನಮ್ಮ ಹುಡುಗರಿಗೆ ಕಾರ್ಯಕ್ರಮ ಇಲ್ಲದೆ ಬೇಜಾರಾಗಿತ್ತಂತ ಕಾಣ್ತದೆ. ಇದನ್ನು ನೀವು ತನಿಖೆ ಮಾಡಲೇಬೇಕೂಂತ ಬಲತ್ಕಾರ ಮಾಡೋದಕ್ಕೆ ಶುರು ಮಾಡಿದರು" ಎಂದು ಹೇಳಿ ಹೊರಡಲನುವಾಗಿ ಜಯರಾಮ್ ಎದ್ದ.

"ಮತ್ಯಾವಾಗ ಸಿಗ್ತೀರ ಜಯರಾಮ್?" ಎಂದು ಅಂಗಾಡಿ ಕೇಳಿದ.

"ಯಾವಾಗ ಬೇಕೆಂದರೆ ಅವಾಗ, ನಾನು ದಿನಾ ಸಾಯಂಕಾಲ ಕಾಫಿ ಕ್ಲಬ್ಬಿಗೆ ಬರ್ತೀನಿ ನಮ್ಮ ಮಿತ್ರರ ಜೊತೆ ಹರಟೆ ಹೊಡೆಯೋದಕ್ಕೆ. ಅಲ್ಲಿ ಹೋಟೆಲ್ ಕೌಂಟರಿನಲ್ಲಿ ಒಂದು ಮಾತು ತಿಳಿಸಿದ್ದರೆ ನನಗೆ ತಿಳಿಸುತ್ತಾರೆ."

ಜಯರಾಮ್ ನಿರ್ಗಮಿಸಿದ ನಂತರ "ಮಿಸ್ಟರ್ ಅಂಗಾಡಿ ನನಗೆ ನಮ್ಮ ಏಲಕ್ಕಿಗೆ ಏನೂ ಮಾಡಲಾಗದೆ ಇರೋದಕ್ಕೆ ವಿಜ್ಞಾನಿಯಾಗಿ ತಲೆ ತಗ್ಗಿಸುವಂತಾಗಿದೆ. ಏಲಕ್ಕಿ ಅಂಥ ಒಂದು ಡೆಡ್‌ಲಾಕ್‌ನಲ್ಲಿ ಸಿಕ್ಕಾಕಿಕೊಂಡಿದೆ. ಅದನ್ನು ಹೇಗೆ ರಕ್ಷಿಸಬೇಕೋ ಗೊತ್ತಾಗ್ತಿಲ್ಲ. ಮತ್ತೆ ಸಿಕ್ಕಿ, ನಿಮ್ಮ ಹತ್ತಿರ ಎಲ್ಲಾ ವಿವರವಾಗಿ ಹೇಳ್ತೇನೆ," ಎಂದರು ಪಾಟೀಲ್.

"ಮತ್ತೆ ಫೋನ್ ಮಾಡಿ ತಿಳಿಸಿ ನಿಮ್ಮನ್ನು ಕಾಣ್ತೀನಿ ಸಾರ್" ಎಂದು ಅಂಗಾಡಿಯೂ ಎದ್ದ.



# ಅಧ್ಯಾಯ ೧೧

"ಈ ಜಿಲ್ಲೆಗೆ ಏನಯ್ಯ ಶಾಪ? ಇಷ್ಟೊಂದು ಸುಂದರವಾಗಿದೆ. ಕಾಡುಗಳಿದ್ದಾವೆ. ಮಳೆ ಇದೆ. ಬೆಳೆ ಇದೆ. ತಣ್ಣಗೆ ಜೀವನೋಪಾಯ ಸಾಗಿಸ್ತಾರೆ. ಆದರೆ ಯಾವುದೋ ಒಂದು ಭಯಾನಕ ಕೊರತೆ ಇದೆ ಇಲ್ಲಿ ಹೆಗ್ಡೆ. ಇಲ್ಲಿ ಹೊರಗಿನಿಂದ ಬಂದು ಬದುಕು ಆರಂಭಿಸಿದೊಡನೆ ಅದು ಅನುಭವಕ್ಕೆ ಬರ್ತದೆ...

"ಅಲ್ಲೋ ಈ ಜಿಲ್ಲೆಯಿಂದ ಕಳೆದ ಹಲವಾರು ಶತಮಾನಗಳಿಂದ ಒಬ್ಬನೇ ಒಬ್ಬ ಅಸಾಧಾರಣ ಅನ್ನುವ ವ್ಯಕ್ತಿ ಹುಟ್ಟಿಲ್ಲ ಅಂದರೆ ಏನಯ್ಯಾ? ಒಬ್ಬ ಚಿತ್ರಕಾರ, ಸಂಗೀತಗಾರ, ಬರಹಗಾರ, ಆಟಗಾರ, ಹೋಗಲಿ ರಾಜಕಾರಣಿ ಯಾವನೂ ಅಸಾಧಾರಣ ಅನ್ನುವಂತಾವನು ಇಲ್ವಲ್ಲಯ್ಯಾ."

"ಅದಕ್ಕೆ ಹೇಳಿದ್ದು ಚಿಕ್ಕಮಗಳೂರು ಒಂದು ಶಾಪಗ್ರಸ್ತ ಜಿಲ್ಲೇಂತ. ಇಂಥಾದ್ದೊಂದು ಸಾಂಸ್ಕೃತಿಕ ನಿಷ್ಕ್ರಿಯತೆ ಕೇವಲ ಆಕಸ್ಮಿಕ ಅಲ್ಲ ಕಣಯ್ಯ"

ರಾಮಚಂದ್ರ ಮತಾಡುತ್ತಾ ಕುಳಿತಿದ್ದ ಗುಂಪಿನ ನಡುವೆ ನುಂಗಲಾರದ ತುತ್ತಿನಂಥ ಸಮಸ್ಯೆಯೊಂದನ್ನು ಇಟ್ಟ. ಅಲ್ಲಿದ್ದ ಗೆಳೆಯರು ಕೇವಲ ಹವಾಮಾನ, ಹೋಟೆಲಿನ ಕಾಫಿ, ದಿನಚರಿ ಸಮಸ್ಯೆ ಮಾತಾಡಲು ಮಾತ್ರ ತಯ್ಯಾರಿದ್ದರು. ರಾಮಚಂದ್ರ ಇಟ್ಟ ಸಮಸ್ಯೆಯ ತೂಕಕ್ಕೆ ಅವರ ತಲೆ ಕುಸಿಯತೊಡಗಿತು.

ಹೆಗ್ಡೆ ಬೇಸರದಿಂದ "ಹೋಗಯ್ಯ, ಒಂದೊಂದು ಜಿಲ್ಲೆಯಿಂದಾನು ಒಬ್ಬೊಬ್ಬ ಮೇಧಾವಿ ಹುಟ್ಟಿ ಬರಬೇಕೂಂತ ಏನಿದೆ? ಯಾರಾದರೂ ನಿನಗೆ ಬರಕೊಟ್ಟಿದಾರಾ? ಅಥವಾ ಹಂಗಂತ ಕಾನೂನಿದೆಯಾ?" ಎಂದು ಗೊಣಗಿದ.

"ಹಾಗೆನ್ನಬೇಡ ಕಣೊ, ಒಂದು ಸಮುದಾಯದ ಸಾಂಸ್ಕೃತಿಕ ಅಭಿವ್ಯಕ್ತಿ, ಆಗಿಂದಾಗ್ಗೆ ಒಬ್ಬೊಬ್ಬ ಅಸಾಧಾರಣ ವ್ಯಕ್ತಿ ರೂಪುಗೊಳ್ಳುವುದರ ಮುಖಾಂತರ ಆಗುತ್ತಾ ಬಂದಿರೋದನ್ನು ಕಾಣ್ತೇವಿ! ಪಕ್ಕದ ಜಿಲ್ಲೆಯಿಂದ ಎಷ್ಟೊಂದು ಜನ ಬರಹಗಾರರು ಕವಿಗಳು ಬಂದಿದಾರೆ. ಈ ಜಿಲ್ಲೆಗೆ ಹೆಸರಿಗೆ ಒಬ್ಬ ಬೇಡೇನಯ್ಯ. ಇದೊಂದು ಕಚಡಾ ಜಿಲ್ಲೆ ಕಣಯ್ಯ," ಎಂದು ರಾಮಚಂದ್ರ ಇಡೀ ಚಿಕ್ಕಮಗಳೂರು ಜಿಲ್ಲೆಗೆ ಉಗಿದ.

ಕಾಲೇಜಿನ ಸೋಷಿಯಾಲಜಿ ಪ್ರಾಧ್ಯಾಪಕ ಸೋಮಾರಿ ನಾರಾಯಣ

ಕುಳಿತಿದ್ದ. ಅವನು ತನ್ನ ತಲೆಗೆ ಕೆಲಸ ಕೊಡುತ್ತಿದ್ದುದೇ ಅಪರೂಪ. ರಾಮಚಂದ್ರನ ಪ್ರಶ್ನೆಗೆ ಒಂದಿಬ್ಬರು ಅವನ ಕಡೆ ನೋಡಿದ್ದರಿಂದ ಈ ಬಡ್ಡೀಮಕ್ಕಳು ತಾವು ನಂಗಲಾರದ ಕಡಬನ್ನು ನನ್ನ ತಟ್ಟೆಗೆ ತಳ್ಳುತ್ತಿದ್ದಾರೆ ಎಂದು ಬಯ್ದುಕೊಂಡು "ನನಗನ್ನಿಸುತ್ತೆ ಇಲ್ಲಿ ಆ ರೀತಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಬೇಕಾದ ಮಧ್ಯಮ ವರ್ಗ ಇಲ್ಲ, ಆದ್ದರಿಂದ ಅಂತ. ಇಲ್ಲಿನ ಶ್ರೀಮಂತರು, ಎಲ್ಲಾ ಹೋಗಿ ಬೆಂಗಳೂರಿನಲ್ಲಿ ಬಿಡಾರ ಮಾಡಿಕೊಂಡಿರ್ತಾರೆ, ಅವರನ್ನು ಬಿಟ್ಟರೆ ತೋಟದಲ್ಲಿ ಕತ್ತೆ ಕೆಲಸ ಮಾಡುತ್ತಾ ದುಡಿಯೋ ಕೂಲಿಗಳು ಹೊಟ್ಟೆಪಾಡಿನ ಸಮಸ್ಯೆಗಳಲ್ಲೇ ತಮ್ಮ ಬದುಕನ್ನು ಮುಗಿಸುತ್ತಾರೆ. ಇವರಿಂದಲೂ ಕಲಾಭಿವ್ಯಕ್ತಿ ಅಸಾದ್ಯ. ಬೆಂಗ್ಳೂರು, ಊಟಿ, ಕ್ಲಬ್ಬು, ಕುದುರೆ ರೇಸುಗಳ ಶ್ರೀಮಂತರಿಂದಲೂ ಸಾಧ್ಯವಿಲ್ಲ. ಇದೇ ಕಾರಣ ಈ ಜಿಲ್ಲೆ ಹೀಗಾಗಿರೋದಕ್ಕೆ" ಎಂದ.

ಕನ್ನಡ ಲೆಕ್ಚರರ್ ತಿಮ್ಮಪ್ಪ ಅವನನ್ನು ತರಾಟೆಗೆ ತಗೊಂಡ. "ಒಬ್ಬಿಬ್ಬರು ದೊಡ್ಡ ಪ್ಲಾಂಟರುಗಳ ಮನೆಗೆ ನೀನು ಹೋಗಿಬಂದು ಇಲ್ಲಿರೋರೆಲ್ಲಾ ಶ್ರೀಮಂತರು ಕೋಟ್ಯಾಧಿಪತಿಗಳು ಅಂದರೆ ಯಾರು ನಂಬ್ತಾರೆ! ನನ್ನ ದೃಷ್ಟಿಯಲ್ಲಿ ಇಲ್ಲಿ ಒಂದೇ ಭಾಷೆ ಮಾತಾಡೋ ಜನಸಮುದಾಯಾನೇ ಇಲ್ಲ. ನಮ್ಮ ಶ್ರೀಮಂತರು ತಮ್ಮ ಮಕ್ಕಳನ್ನು ಊಟಿ ಕೂನೂರು ಕಾನ್ವೆಂಟುಗಳಿಗೆ ಕಳಿಸುತ್ತಾರೆ. ಅವರಿಗೆ ಚೆನ್ನಾಗಿ ಇಂಗ್ಲಿಷ್ ಬರಲಿ ಅಂತ ತಾವೂ ಮನೇಲಿ ಇಂಗ್ಲಿಷ್ ಮಾತಾಡ್ತಾರೆ. ಆಳುಗಳೆಲ್ಲಾ ಹೆಚ್ಚಾಗಿ ಕನ್ನಡ ಜಿಲ್ಲೆ ತುಳು ಮಾತಾಡುವವರು, ಇಲ್ಲವೇ ತಮಿಳರು. ಇನ್ನು ಕನ್ನಡ ಮಾತಾಡುವ ಮಧ್ಯಮ ವರ್ಗದೋರೆಲ್ಲಾ ಇವತ್ತು ಇಲ್ಲಿದ್ದರೆ ನಾಳೆ ಇನ್ನೊಂದು ಕಡೆಗೆ ವರ್ಗ ಆಗೋ ಸರ್ಕಾರಿ ನೌಕರರು. ತಮ್ಮ ವ್ಯಕ್ತಿತ್ವವನ್ನೆಲ್ಲಾ ಒಂದು ಭಾಷೆಗೆ ಮೀಸಲಿಟ್ಟಿರೋ ವರ್ಗಾನೇ ಇಲ್ಲ ಇಲ್ಲಿ" ಎಂದ.

"ಸರಿಕಣೋ, ಕವಿಗಳು ಕಾದಂಬರಿಕಾರರು ಬರ್ದೇ ಇರೋದಕ್ಕೆ ನೀನು ಕೊಡೋ ಕಾರಣ ಇರಬಹುದು. ಬೇರೆಯೋರಿಗೆ? ಒಳ್ಳೆ ಆಟಗಾರರಿಗೆ ರಾಜಕಾರಣಿಗಳಿಗೆ ಪೈಲ್ವಾನರುಗಳಿಗೂ ನಿನ್ನ ಉದಾರಣೆ ಅನ್ವಯಿಸುತ್ತಾ? ಅವರೂ ಇಲ್ವಲ್ಲಯ್ಯಾ ಇಲ್ಲಿ, ಎಂದು ತಕರಾರು ತೆಗೆಯುತ್ತಾ ಸಿದ್ದಪ್ಪ ಅಖಾಡಕ್ಕೆ ಇಳಿದ.

ಇಡೀ ಜಿಲ್ಲೆಯನ್ನೆ ವಿಮರ್ಶೆಗೆ ಗುರಿಮಾಡಿಕೊಂಡು ಸ್ವಲ್ಪ ಜೋರಾಗೇ ವಾದವಿವಾದಗಳಲ್ಲಿ ತೊಡಗಿದ ಇವರ ಗುಂಪಿನ ಸುತ್ತ ಕುಳಿತಿದ್ದ ನಾಲ್ಕಾರು ಜನ ಇವರ ವಾದವನ್ನು ಆಸಕ್ತಿಯಿಂದ ಕೇಳಿಸಿಕೊಳ್ಳತೊಡಗಿದರು. ಅವರಲ್ಲೊಬ್ಬ ಯುವಕನಿಗೆ ಬರಿಯ ಪ್ರೇಕ್ಷಕನಾಗಿ ತುಂಬ ಹೊತ್ತು ಕುಳಿತುಕೊಳ್ಳಲು ಸಾಧ್ಯವಾಗಲಿಲ್ಲ.



"ಕಾಫಿ! ಈ ಜಿಲ್ಲೆಯನ್ನು ಸಾಂಸ್ಕೃತಿಕವಾಗಿ ನಾಶಮಾಡಿರೋದು ಹಾಗೂ ಆರ್ಥಿಕವಾಗಿ ಉದ್ಧಾರ ಮಾಡಿರೋದು ಕಾಫಿ. ಇಲ್ಲಿಯ ಜನರಿಗೆ ಇರೋದು ಕಾಫಿ ಸಂಸ್ಕೃತಿ" ಎಂದ ಆತ. ಆತ ಸಮಸ್ಯೆಯ ಬಗ್ಗೆ ಇವರಷ್ಟು ವಸ್ತುನಿಷ್ಟವಾಗಿ ಇರಲಿಲ್ಲ. ಏಕೆಂದರೆ ಆತ ಇವರಂತೆ ಹೊರಗಿನಿಂದ ಬಂದವನಲ್ಲ. ಅಲ್ಲೇ ಹುಟ್ಟಿ ಬೆಳೆದಿದ್ದವ. ಈವರೆಗೂ ಇವರ ಮಾತುಗಳನ್ನು ಎಚ್ಚರದಿಂದ ಕೇಳಿದ್ದ.

"ಸುಮ್ಮನೆ ಕಾಫಿ ಮೇಲೆ ಎತ್ತಾಕಿದರೆ ಏನ್ರಿ ಪ್ರಯೋಜನ. ಇವರು ಬೆಳೀತಿರಬಹುದು. ನಾನು ಕುಡೀತಿರಬಹುದು. ಕಾಫಿ ಒಂದು ಸಂಸ್ಕೃತಿಗೆ ಏನು ಮಾಡುತ್ತೆ? ಸುಮ್ನೆ ಕಣ್ಣಿಗೆ ಕಂಡದ್ದನ್ನೆಲ್ಲಾ ನಾವು ಕಾರಣ ಅನ್ನಬಾರದು" ಎಂದು ಸಿದ್ದಪ್ಪ ಅವಜ್ಞೆಯ ಧ್ವನಿಯಲ್ಲಿ ಉತ್ತರಿಸಿ ಈ ಹುಡುನಿಗೆ ರೇಗಿಸಿದ.

ಆ ಯುವಕನಿಗೆ ಅಭಿಮಾನ ಭಂಗವಾದಂತಾಗಿ "ಸುಮ್ಮನೆ ಇರಿ ಸಾರ್. ಅವೆಲ್ಲಾ ಹೇಳಿದರೆ ಕೇಳೋನಲ್ಲ ನಾನು. ಇದರ ಬಗ್ಗೆ ನನಗೆ ಗೊತ್ತಿರೋ ಅಷ್ಟು ನಿಮಗೆ ಗೊತ್ತಿರೊದಿಲ್ಲ ತಿಳ್ಕಳಿ. ನಿನ್ನೆ ಮೊನ್ನೆ ಇಲ್ಲಿಗೆ ವರ್ಗಾ ಆಗಿ ಬಂದಿರೋರು ನೀವು. ತಮ್ಮ ಮಕ್ಕಳಿಗೆ ಸೂಟು ಬೂಟು ಹಾಕೋದನ್ನು ಕಳಿಸೋದಕ್ಕೆ ಸ್ಟೈಲಿಷ್ ಇಂಗ್ಲಿಷ್ ಮಾತಾಡಿಸೊದಕ್ಕೆ ಈ ಪ್ಲಾಂಟರುಗಳು ಎಷ್ಟು ಹಣ ಸುರೀತಾರೆ ನನಗೆ ಗೊತ್ತು. ಫೋರ್ಕು ಚಾಕು ಇಟ್ಟುಕೊಂಡು ಊಟದ ಸರ್ಕಸ್ ಮಾಡೋದಕ್ಕೆ ಎಷ್ಟು ತೊಂದರೆ ತಗೋತಾರೆ ಗೊತ್ತಾ ನಿಮಗೆ? ಇವತ್ತು ಕಾರಿಟ್ಟುಕೊಂಡು ಹ್ಯಾಟ್ ಹಾಕಿಕೊಡು ಅಣ್ಣಾತೆ ತರ ಇರದೇ ಇರೋನು ಮನುಷ್ಯನಲ್ಲಾಂತ, ಅನುಕೂಲಕವಿಲ್ಲದವರು ಇವತ್ತು ತನಗೆ ಕಾರಿಲ್ಲಾಂತ ಕೊರಗುತ್ತಾ ಕೂರಬೇಕಾಗಿದೆ. ಇವೆಲ್ಲ ಗೊತ್ತಾಗುತ್ತ ಸಾರ್! ಕಾಫಿ ಕಲ್ಚರ್ ಅಂದಿದ್ದು ನಾನು ಇದನ್ನೆ. ಯೂರೋಪಿಯನ್ನರಿಂದ ಕಾಫೀನೂ ಕಾಫೀ ತೋಟಾನೂ ಇವರಿಗೆ ಸಿಕ್ಕಿದ್ದು. ಅವರು ಕಟ್ಟಿಸಿದ ಕುರ್ಚಿ ಕಕ್ಕಸ್ಸಿಗೆ ಇವರು ಹೋಗಿ ಅವರ ತರಾನೇ ಇವರೂ ಕಾಗದದ ಸುರುಳೀಲಿ ತಿಕ್ಕಿಕೋತಾರೆ. ಸುಮ್ಮನೆ ಕಾಫಿ ಮೇಲೆ ದೂರು ಹೇಳಿದ್ದೇ ಅಂದ್ರಲ್ಲಾ ಅದಕ್ಕೆ ಹೇಳ್ತಿರೋದು,' ಎಂದ ಆತ. ಅವನ ಉದ್ವೇಗಭರಿತ ಮಾತುಗಳನ್ನು ಎಲ್ಲಾ ಗಮನ ಕೊಟ್ಟು ಕೇಳಿದರು. ಎಲ್ಲರೂ ರಾಮಚಂದ್ರ ಎತ್ತಿದ ಸಮಸ್ಯೆಗೆ ಇಲ್ಲಿ ಉತ್ತರ ಇದೆ ಎನ್ನಿಸುವಂತೆ ಮಾತಾಡಿದ್ದ.

"ಬನ್ನಿ ಇಲ್ಲಿ ಮಿಸ್ಟರ್. ಹಾಗೆಲ್ಲಾ ಉದ್ವೇಗ ಮಾಡ್ಕೋಬೇಡಿ, ಒಂದು ಸಮಸ್ಯೆಯನ್ನು ವಿಶ್ಲೇಷಣೆ ಮಾಡಬೇಕಾದರೆ ಹಾಗೆಲ್ಲಾ ಭಾವುಕವಾಗಿ ಯೋಚನೆ ಮಾಡಬಾರುದು! ಬನ್ನಿ ಇಲ್ಲಿ" ಎಂದು ಪಕ್ಕದ ಕುರ್ಚಿಗೆ ರಾಮಚಂದ್ರ ಕರೆದ; ಅವನ ಹೆಸರು ಇತ್ಯಾದಿಗಳನ್ನು ಕೇಳಿದ.

ಆತನ ಹೆಸರು ಸಮೀರ, ಬೂದಿಕಾನು ಎಸ್ಟೇಟಿನ ಜಾಣೇಗೌಡರ ಮಗ. ಬೆಂಗಳೂರು ವಿಶ್ವವಿದ್ಯಾಲಯದ ಚರಿತ್ರೆ ಎಂ.ಎ. ಪದವೀಧರ. ರಾಮಚಂದ್ರ ಅವನಿಗೆ "ನೋಡಿ ಸಮೀರ, ನೀವು ಹೇಳಿದ್ದರಲ್ಲಿ ಸತ್ಯ ಇಲ್ಲದೆ ಇಲ್ಲ. ನಾನು ಇಡೀ ಪ್ರಪಂಚ ಸುತ್ತಿದೀನಿ. ನೀವು ಹೇಳ್ತಿದೀರಲ್ಲ ಈ ಕಾಫಿ ಕಲ್ಚರ್ ಅಂತ, ಈ ಯೂರೋಪಿಯನ್ನರನ್ನು ಅನುಕರಿಸೋ ಚಾಳಿ! ಇದು ಜಾಗತಿಕ ಸಂಗತಿ. ಆಧುನೀಕರಣ ಅಂದರೆ ಇವತ್ತು ಪಾಶ್ಚಿಮಾತ್ಯರ ಅನುಕರಣೆ. ಇದು ಬರೀ ನಿಮ್ಮ ಕೆಸರೂರಿಗೆ ಸಂಬಂಧಿಸಿದ ಕಾಯಿಲೇ ಅಂತ ಹೇಳಕ್ಕಾಗೋಲ್ಲ. ಬೆಂಗಳೂರಿಗೆ ಹೋದರೆ ಕನ್ನಡ ಮಾತಾಡೋರು ಎಷ್ಟು ಜನ ಕಣ್ಣಿಗೆ ಬೀಳ್ತಾರೆ? ಯೂರೋಪು ಮಾದರಿಯ ಹೋಟೆಲುಗಳು ಎಷ್ಟಿವೆ? ಯೋಚಿಸಿ. ಬರೀ ಭಾರತ ಅಲ್ಲ. ಅಪ್ಪಟ ಏಷ್ಯಾದ ಅಪ್ಪಟ ಕಮ್ಯೂನಿಸ್ಟ್ ದೇಶ ಚೀನಾದಲ್ಲೂ ಇದು ಆರಂಭವಾಗಿದೆ."

"ಸರಿ ಮೇಷ್ಟ್ರೆ, ಚೀನಾದಲ್ಲೂ ಆರಂಭವಾಗಿರಬಹುದು. ಅಂದ ಮಾತ್ರಕ್ಕೆ ದುರ್ದೆಸೆಗೆ ಕಾರಣ ಅಲ್ಲಾಂತ ಹೇಗೆ ಹೇಳ್ತೀರಿ. ನಾವು ನಮ್ಮ ಸಂಸ್ಕೃತಿಯಿಂದ ತುಂಡಾಗಿ ಅಂತರಪಿಶಾಚಿಗಳಾಗಿರೋದಕ್ಕೆ ಇದೇ ಕಾರಣ" ಎಂದು ಸಮೀರ ವಾದಿಸಿದ. ಅಲ್ಲಿದ್ದವರೆಲ್ಲಾ ಕೇಳಿಸಿಕೊಳ್ಳುತ್ತಾ, ಮಾತಾಡುತ್ತಾ ಇದ್ದುದರಿಂದ ಅಷ್ಟು ಹೊತ್ತಿಗಾಗಲೇ ಎಲ್ಲರಿಗೂ ಯಾರು ಬೇಕಾದರೂ ಭಾಗವಹಿಸಬಹುದಾದ ಸಾರ್ವಜನಿಕ ವೇದಿಕೆ ಇದು ಎನ್ನುವ ಭಾವನೆ ಬಂದಿತ್ತು. ಅಡ್ಡಪಂಚೆ ಕರೀಟೋಪಿ ಹಾಕಿಕೊಂಡಿದ್ದ ಮಲೆನಾಡು ಗೌಡರೊಬ್ಬರು "ಆತ ಹೇಳ್ತಿರೋದು ಸರಿ ಮೇಷ್ಟ್ರೆ. ನಮ್ಮ ಸಂಸ್ಕೃತೀನೇ ನಮ್ಮಿಂದ ಹೋಗ್ತಿದೆ ತಂದೆ ತಾಯಿ ಬಂಧು ಬಳಗ ಅಂತ ಭಾವನೇನೇ ಇಲ್ಲ. ಎಲ್ಲ ಚೋಟ್ಟೆಕಾರನ ತರ ಆಡೋರೆ! ಭಯಭಕ್ತಿ, ಧೈಯ್ಯದ್ಯಾವರು ಕೇಳಬೇಡಿ. ಸಂಶೋಧನ ಕೇಂದ್ರದಲ್ಲಿ ಒಂದು ದೇವಸ್ಥಾನ ಜೀರ್ಣೋದ್ಧಾರ ಮಾಡೋದಕ್ಕೆ ಹೋದರೆ ಯಾವ್ಯಾವ ತರ ತೊಂದ್ರೆ ಬರ್ತಿದೆ ನೋಡಿ, ಅದೇನು ಸ್ವಂತ ಕೆಲಸ ಅಲ್ಲ ಏನೂ ಅಲ್ಲ, ದೇವರ ಕೆಲಸ!" ಎಂದು ಸಮೀರನ ಮಾತನ್ನು ಸಮರ್ಥಿಸಿದರು.

ತಮ್ಮ ಜಿಲ್ಲೆಯ ಬಂಜರುತನಕ್ಕೆ ದೆವ್ವದಲ್ಲಿ, ದೇವರಲ್ಲಿ ಸನಾತನ ಧರ್ಮದಲ್ಲಿ ನಂಬಿಕೆ ಇಲ್ಲದುದೇ ಕಾರಣ ಅಂತ ತನ್ನನ್ನು ಸಮರ್ಥಿಸಿ ಆ ಗೌಡರು ಮಾತಾಡಿದ್ದನ್ನು ನೋಡಿ ಸಮೀರ ಗಾಬರಿಯಾದ ತನ್ನನ್ನು ಅವರಂಥ ಸನಾತನ ಗೊಡ್ಡು ಅಂತ ವ್ಯಾಖ್ಯಾನಿಸಲು ಪ್ರಯತ್ನಿಸುತ್ತಿದ್ದಾರೆ ಅನ್ನುವ ಶಂಕೆ ಅವರಿಗೆ ಶುರುವಾಯ್ತು. ಇದನ್ನು ಯಾವ ರೀತಿ ಪ್ರತಿರೋಧಸಬೇಕೆಂದು ಅವನು ಯೋಚಿಸುತ್ತಿರುವುದನ್ನು ರಾಮಚಂದ್ರ ಗ್ರಹಿಸಿದ. "ಸಮೀರ ನಾನು ಹೇಳಿದ್ದು ಇದು ನಮ್ಮ ಜಿಲ್ಲೆಗೇ



ಸಂಬಂಧಿಸಿದ ವಿಶಿಷ್ಟ ಸಮಸ್ಯೆ! ಅಲ್ಲಾಂತ! ಈ ಜಿಲ್ಲೆ ಹೀಗಾಗಿರೋದಕ್ಕೆ ಇದಕ್ಕೆ ಸಂಬಂಧಿಸಿದ ವಿಶಿಷ್ಟ ಕಾರಣಗಳಿರಬೇಕು, ಅದಕ್ಕೆ ಪೂರಕವಾಗಿ ನೀವು ಹೇಳಿದ ಕಾರಣವೂ ಒಂದಾಗಿರಬಹುದು," ಎಂದ.

ಅಷ್ಟರಲ್ಲಿ ಜಯರಾಮ್ ಕಾಫಿಬಾರಿನ ಮೆಟ್ಟಿಲು ಹತ್ತುತ್ತಿರುವುದು ಕಾಣಿಸಿತು. "ನೋಡಿ ಒಬ್ರೂ ಸಾಹಿತಿ ಇಲ್ಲಾಂತ ಹೇಳ್ತಿದ್ರಲ್ಲ, ಜಯರಾಮ್ ವಿಷಯ ಮರ್ತೇಬಿಟ್ಟಿದ್ವಿ" ಎಂದ ಹೆಗ್ಡೆ.

"ನೋ ನೋ ಅವರ ತೋಟ ಇರೋದು ಹಾಸನಜಿಲ್ಲೆ. ಅವರನ್ನು ನಾವು ಲೆಕ್ಕಕ್ಕೆ ತಗೋಳೋ ಹಾಗೇ ಇಲ್ಲ. ಇಂಥ ಸಮಾಧಾನಗಳಿಂದೆಲ್ಲಾ ಏನೂ ಪ್ರಯೋಜನವಿಲ್ಲ. ನಮಗೀಗ ಬೇಕಾಗಿರೋದು ನಮ್ಮ ಜಿಲ್ಲೆಗೆ ಹಿಡಿದಿರೊ ಕಾಯಿಲೆಗೆ ಕಾರಣವೇನೆಂಬ ವಿಶ್ಲೇಷಣೆ ಅಷ್ಟೆ" ಎಂದು ಹೆಗ್ಡೆ ವಾದಿಸಿದ.

"ಏನ್ರಪ್ಪಾ ನನ್ಮೇಲೇ ಏನೋ ಕಿತಾಪತಿ ನಡೀತಾ ಇರೋ ಹಂಗಿದೆಯಲ್ಲಾ" ಎಂದು ನಗುತ್ತಾ ಬಂದ ಜಯರಾಮ್ ರಾಮಚಂದ್ರನ ಕಡೆಗೆ ತಿರುಗಿ ಹುಸಿಕೋಪ ನಟಿಸುತ್ತಾ "ಏನಯ್ಯಾ? ಎಲ್ಲಿ ನೀನು? ವಿಚಾರವಾದಿಗಳ ಸಂಘ ಅಂತ ಹಚ್ಚಾಕಿ ನಮ್ಮನ್ನೆಲ್ಲಾ ಸಿಕ್ಕಿಸಿ, ನೀನಿಲ್ಲಿ ತಣ್ಣಗೆ ಕೂತಿದ್ದೀಯಲ್ಲಾ!" ಎಂದು ಕೇಳಿದ.

"ಬೆಳಗಿನಿಂದ ಸಾಯಂಕಾದವರೆಗೆ ಆ ಹುಡುಗರ ತಲೆ ತಿಂದಿರ್ತೀನಿ. ಇನ್ನೂ, ಯಾಕೆ ಸಾಯಂಕಾಲಾನೂ ಅದೇ ಶುರು ಮಾಡಲಿ ಅಂತ ಬರಲಿಲ್ಲಯ್ಯ. ಹೇಗಾಯ್ತು ಸಭೆ."

"ನಿನ್ನ ಶಿಷ್ಯರ ತರಳೆ ತಾಳಕ್ಕಾಗೋಲ್ಲ ಕಣಯ್ಯ. ಕೊವೂರ್ ದೆವ್ವ ಇದೇ ಅಂತ, ಮಂತ್ರ ಶಕ್ತಿ ಇದೆ ಅಂತ ಸಾಧಿಸಿದರೆ ಒಂದು ಲಕ್ಷ ಕೋಡ್ತಾರಂತೆ ಅಂತ ಒಳ್ಳೆ ಹುಮ್ಮಸ್ಸಿನಲ್ಲಿರೋ ಹಾಗೆ ಕಾಣ್ತದೆ ಕಣೋ!"

"ಏನ್ಮಾಡಿದ್ರೋ ಮಹಾರಾಯ!"

"ಆ ಸಂಶೋಧನ ಕೇಂದ್ರದ ಪಾಟೀಲರು ಮಂತ್ರ ತಂತ್ರ ಮಾಡ್ತಿದಾರೆ. ಸರ್ಕಾರಿ ಸಂಬ್ಳದ ವಿಜ್ಞಾನಿ ಇದನ್ನೆಲ್ಲಾ ಮಾಡೋದು ಅಂದ್ರೇನು!ಇದೇ ಅವರ ತಕ್ರಾರು. ಈ ಹೆಗ್ಡೆ ಸಿದ್ದಪ್ಪ ಇವರೆಲ್ಲಾ ಏನಾದರೂ ಅವರಿಗೆ ಹಚ್ಚಿಕೊಟ್ಟಿದ್ದಾರೋ ಏನೋ!" ಎಂದ ಜಯರಾಮ್.

"ಇಲ್ಲಪ್ಪಾ ನಾವ್ಯಾಕೆ ಅಂಥ ಸಣ್ತನಾ ಮಾಡೋದಕ್ಕೆ ಹೋಗೋಣ. ಮೊದಲೇ ಆ ಮನುಷ್ಯ ಸಿನಿಕ್ಕು. ಕಾರಣ ಇಲ್ದೇ ರೇಗಾಡ್ತಿರ್ತಾನೆ. ಇನ್ನು ನಾವು ಹಚ್ಚಿಕೊಡ್ತೀವಿ ಅಂತಾದರೆ ಆಯ್ತು! ಅಲ್ಲದೆ ಅವರೇನು ಅಂತ ಕೆಲಸ ಮಾಡ್ತಿಲ್ವಲ್ಲಯ್ಯಾ" ಎಂದ ಹೆಗ್ಡೆ.

"ಬೆಳಿಗ್ಗೆ ಇದನ್ನೆ ತನಿಖೆ ಮಾಡೊದಕ್ಕೆ ನಾನು ಅವರ ಹತ್ರ ಹೋಗಿದ್ದೆ ಕಣೊ. ಎಲ್ಲಾ ವಿವರವಾಗಿ ಸ್ಪಷ್ಟಪಡಿಸಿದರು" ಎಂದು ಅವರು ನೀಡಿದ ಸ್ಪಷ್ಟನೆಯನ್ನೆಲ್ಲಾ ರಾಮಚಂದ್ರನಿಗೆ ಸವಿವರವಾಗಿ ತಿಳಿಸಿದ. ಡಾಕ್ಟರ್ ಪಾಟೀಲರು ಚೇಳಿಗೆ ಮಂತ್ರ ಚಿಕಿತ್ಸೆ ಮಾಡ್ತಾರಂತೆ. ಒಂದು ಕಡ್ಡಿ ತಗೊಂಡು ಚೇಳು ಕಚ್ಚಿ ನೋವಾಗುತ್ತಿರೋವರಿಗೆ ಇಲ್ಲಿ ನೋವಾಗುತ್ತೋ ಅಲ್ಲಿ ಹ ಅಕಾರದಲ್ಲಿ ಕಡ್ಡಿಯಿಂದ ಬರೀತಾರಂತೆ. ನೋವು ಅಲ್ಲಿಂದ ಹಾಗೇ ಕಾಲಿನವರೆಗೆ ಇಳಿಯುತ್ತಾ ಇರುತ್ತೆ. ಇವರೂ ಕಡ್ಡಿಯಲ್ಲಿ ಅದು ಇಳಿದಂತೆಲ್ಲಾ ಬರೀತಾ ಬರ್‍ತಾರೆ. ಕೊನೆಗೆ ಅದು ಬೆರಳತುದಿಯಿಂದ ಹೊರಟುಹೋಗ್ತದಂತೆ. ಅದರ ಬಗ್ಗೆ ಅವರಿಗೆ ನಂಬಿಕೇನೂ ಇಲ್ಲ. ಶ್ರದ್ಧೇನೂ ಇಲ್ಲ. ಅವರೂರಿನಲ್ಲಿ ಯಾವನೋ ಮಾಂತ್ರಿಕ ಹೀಗೆ ಮಾಡ್ತಿದ್ದನಂತೆ. ಅದೊಂದು ಮೂಢನಂಬಿಕೆ ಅಂತ ಸಾಧಿಸದಕ್ಕೆ ಇವರೂ ಹಾಗೆ ಮಾಡಿದರಂತೆ. ಅದು ಪರಿಣಾಮಕಾರಿ ಆಗೇಬಿಡ್ತು! ಈ ಚಿಕಿತ್ಸೆಗೆ ಆ ಮಾಂತ್ರಿಕ ಹೇಳೋ ಹಾಗೆ ದೈಯ್ಯ ದೇವರ ಅಗತ್ಯ ಏನೂ ಇಲ್ಲ ಅಂತೇನೋ ಸಾಧಿಸಿದರು. ಆದರೆ ಚೇಳು ಕಚ್ಚಿದವರು ಚಿಕಿತ್ಸೆಗೆ ಇವರ ಹತ್ರ ಬರೋದಕ್ಕೆ ಶುರು ಮಾಡಿದರು. ಇಷ್ಟೇ ಅಲ್ಲ. ಕೆಸರೂರಿನಲ್ಲಿ ಇವರನ್ನೂ ಮಂತ್ರವಾದಿ ಅಂತ ತಿಳುಕೊಂಡು ಹಾವು ಕಚ್ಚಿಸಿಕೊಂಡವರು, ದೆವ್ವ ಮೈಮೇಲೆ ಬರೋವರು, ಮತಭ್ರಾಂತರು ಎಲ್ಲರನ್ನೂ ಕರಕೊಂಡು ಬರೋದಕ್ಕೆ ಶುರುಮಾಡಿದರಂತೆ. ನಾನು ಯಾವ ಶಕ್ತಿ ಆರಾಧಕನೂ ಅಲ್ಲ, ಮಂತ್ರವಾದಿಯೂ ಅಲ್ಲ ಅಂತ ಅವರಿಗೆ ಹೇಳಿಕಳಿಸಬೇಕಾದರೆ ಪಾಟೀಲರಿಗೆ ಸುಸ್ತಾಗಿ ಹೋಗುತ್ತದಂತೆ. ಎಲ್ಲಕ್ಕಿಂತ ಅವರಿಗೆ ದಿಗಿಲು ಅಂದರೆ ಬಂದವರಿಗೆ ಏನಾದರೂ ಚಿಕಿತ್ಸೆ ಅಂತ ಮಾಡಿ ಕೊನೆಗೆ ಅದೂ ಪರಿಣಾಮಕಾರಿ ಆಗೇ ಹೋದರೆ ಏನಪ್ಪ ಗತಿ! ಅಂತ. ತಾನೆಲ್ಲಿ ಈ ರೋಗಿಗಳ ದೆಸೆಯಿಂದಲೇ ಕೊನೆಗೆ ಕಡ್ಡಾಯವಾಗಿ ಮಾಂತ್ರಿಕನಾಗಬೇಕಾಗುತ್ತದೋ ಅಂತ" ಎಂದು ಬೆಳಿಗ್ಗೆ ಪಾಟೀಲರೊಡನೆ ನಡೆಸಿದ ಸಂಬಾಷಣೆಯ ಸಾರಾಂಶ ಹೇಳಿದ. ಅದಕ್ಕೆ ಸಿದ್ದಪ್ಪ ಹೆಗ್ಡೆ ಹೌದೆಂದು ತಲೆಯಾಡಿಸಿದರು.

"ಏನಯ್ಯಾ ಮಾಡೋದು ವಿಚಾರವಾದಿ? ಇಂಥ ಸಂದರ್ಭದಲ್ಲಿ ಯಾವತರ ಧೋರಣೆ ಅನುಸರಿಸಬೇಕು ಅನ್ನೋದು ನನಗೆ ಹೊಳೆಯೋದೇ ಇಲ್ಲ. ಯಾಕೇನ್ನು, ಪಾಟೀಲರಿಗೆ ನಂಬಿಕೆ ಇಲ್ಲದಿರಬಹುದು. ಅವರು ನಾಲ್ಕು ಜನಕ್ಕೆ ಗುಣಾಮಾಡಿದರೆ ಅವರಿಗೆ ಮೂಢನಂಬಿಕೆ ಬರ್ತದೊ ಇಲ್ವೋ. ಸಂಶೋಧನ ಕೇಂದ್ರದ ದೇವಸ್ಥಾನ ಬೇರೆ ಜೀರ್ಣೋದ್ದಾರ ಮಾಡಿ ಗಲಾಟೆ ಶುರು ಮಡಿದಾರಂತೆ! ಈಗ್ತಾನೆ ಒಬ್ರು



ಮುದುಕರು ಆ ವಿಷಯ ಹೇಳ್ತಿದ್ರು" ಎಂದು ರಾಮಚಂದ್ರ ಜಯರಾಮ್‌ಗೆ ಧರ್ಮ ಸೂಕ್ಷ್ಮ ವಿವರಿಸಿದ.

"ಇಲ್ಲಪ್ಪಾ ಪಾಟೀಲರು ದೇವಸ್ಥಾನದ ಜೀರ್ಣೋದ್ದಾರ ಇವಕ್ಕೆಲ್ಲಾ ಬದ್ದ ವಿರೋಧಿಗಳು. ಒಂದೇ ಒಂದು ದಿನ ಅವರು ಆ ದೇವಸ್ಥಾನದ ಹತ್ರ ಸುಳಿದಿಲ್ಲ. ಹಾಗಾಗಿ ಈಗ ಸಂಶೋದನ ಕೇಂದ್ರದ ಸನಾತನಿಗಳೆಲ್ಲಾ ಅವರ ಮೇಲೆ ಕತ್ತಿ ಮಸೀತಿದ್ದಾರೆ." ಹೆಗ್ಡೆ ಬೇಗಬೇಗ ಪಾಟೀಲರ ಮೆಲಿನ ತಪ್ಪು ತಿಳುವಳಿಕೆ ನಿವಾರಿಸಿದೆ.

ಹೊರಗಡೆ ಕತ್ತಲಾಗಿತ್ತು. ವಿಶ್ವಭವನದ ಮುಂದೆ ಒಂದು ಜೀಪು ನಿಂತಿದ್ದನ್ನು ಯಾರೂ ಗಮನಿಸಲಿಲ್ಲ. ಒಬ್ಬ ಆಳು ಜೀಪಿನಿಂದ ಇಳಿದು ಬಂದು ಹೋಟೆಲಿನ ಒಳಗೆ ಅತ್ತಿತ್ತ ನೋಡಿ ಕೌಂಟರಿನಲ್ಲಿದ್ದಾತನನ್ನು ಇಲ್ಲಿ ಡಾಕ್ಟರ್ ರಾಮಚಂದ್ರ ಅಂದರೆ ಯಾರು? ಎಂದು ಕೇಳುತ್ತಿದ್ದುದು ಮಾತಾಡುತ್ತಾ ಕುಳಿತಿದ್ದವರಿಗೆ ಕೇಳಿಸಿತು. ರಾಮಚಂದ್ರ ಆತ ಯಾರೆಂದು ಕತ್ತೆತ್ತಿ ನೋಡಿದಾಗ ಕ್ಯಾಷಿಯರ್ ಅವನಿಗೆ ಇವರತ್ತ ಕೈ ತೋರಿಸಿ ಕಳಿಸುತ್ತಿದ್ದುದು ಕಂಡಿತು. ಆತ ಬಂದು "ನಮ್ಮ ಗೌಡ್ರು ನಿಮ್ಮತ್ರ ಮಾತಾಡಬೇಕಂತೆ, ಕರೀತಿದ್ದಾರೆ" ಎಂದ.

"ಯಾರಪ್ಪ?" ಎಂದ ರಾಮಚಂದ್ರ.

"ಗೌಡ್ರು, ಮಂಡಿಮರ್ಚೆಂಟ್ ಕ್ರಿಷ್ಣೇಗೌಡ್ರು."

ರಾಮಚಂದ್ರ ಎದ್ದು ಅವನೊಡನೆ ಹೊರನಡೆದ.

ಹೊರಗೆ ಕೃಷ್ಣೇಗೌಢ ಜೀಪಿನಲ್ಲಿ ಕಾಯುತ್ತಿದ್ದವ ರಾಮಚಂದ್ರ ಬಂದೊಡನೆ ಇಳಿದು ವಿನಯದಿಂದ.

"ಒಂದು ವಿಷ್ಯಾ ನಿಮ್ಮ ಹತ್ತಿರ ಹೇಳೋದಿತ್ತು ಸಾರ್" ಎಂದು

"ಸೂಕ್ಷ್ಮ ವಿಷಯ, ಒಂದು ನಿಮಿಷ ಜೀಪಿನಲ್ಲಿ ಬಂದರೆ ದೂರದಲ್ಲೆಲ್ಲಾದರೂ ಮಾತಾಡಬಹುದು. ಮತ್ತೆ ತಂದು ಇಲ್ಲೇ ಬಿಡ್ತೀನಿ" ಎಂದು ಕೇಳಿಕೊಂಡ.

ರಾಮಚಂದ್ರನಿಗೆ ಏನೋ ಗಂಭೀರವಾದ ವಿಷಯ ಎನ್ನಿಸಿ ಜೀಪ್ ಹತ್ತಿದ. ಕೃಷ್ಣೇಗೌಡ ಆಳಿಗೆ ನೀನಿಲ್ಲೇ ಇರು, ಈಗ ಬರ್‍ತೀನಿ ಎಂದು ಹೇಳಿ ಜೀಪ್ ಸ್ಟಾರ್ಟ್ ಮಾಡಿದ. ಜೀಪು ಕೆಸರೂರಿನ ಹೊರವಲಯಕ್ಕೆ ಬಂತು. "ನಿಮ್ಮಿಂದ ಒಂದು ಸಹಾಯ ಆಗಬೇಕು ಮೇಷ್ಟ್ರೇ" ಎಂದು ಕೃಷ್ಣೇಗೌಡ ಹೇಳಿದ.

"ಏನದು?" ರಾಮಚಂದ್ರ ಚಕಿತನಾದ.

"ನಮ್ಮ ಮನೇ ಮೇಲೆ ಈಗೊಂದೆರಡು ದಿನದಿಂದ ಕಲ್ಲು ಬೀಳ್ತಿದಾವೆ. ಮೊನ್ನೆ ಒಬ್ಬ ಹುಡುಗನನ್ನು ನಮ್ಮ ತೋಟದ ಆಳುಗಳು ಹಿಡಕೊಂಡಿದ್ದರು.

ಅವನ ಸ್ನೇಹಿತರೆಲ್ಲಾ ಬಂದು ಆಳುಗಳಿಗೆ ಹೊಡೆದರಂತೆ. ನಾನು ಜಗಳ ನಿಲ್ಲಿಸಿ ಕೇಳಿದಾಗ ನಾವೆಲ್ಲ, ನಾವು ಕಾಲೇಜು ವಿದ್ಯಾರ್ಥಿಗಳು ಅಂದರೆ, ಕಾಲೇಜು ಹುಡುಗರು ಅಂತ ತಿಳಿದಮೇಲೆ ನಾನು ಎಲ್ಲರಿಗೂ ಸಮಾಧಾನ ಹೇಳಿ ಕಳಿಸಿದೆ. ಅದರೆ ಕೋಪಕ್ಕೋ ಏನೋ ಈವತ್ತೂ ಕಲ್ಲೆಸೆದಿದ್ದಾರೆ. ನನ್ನ ಮನೇಲಿ ನನ್ನ ಹೆಂಡ್ತಿ ಮಕ್ಕಳೂ ಇಬ್ಬರೇ ಇರ್‍ತಾರೆ."

"ಯಾಕೆ ಕಲ್ಲು ಹೊಡೀತಾರಂತ ನಿಮ್ಮನುಮಾನ ಗೌಡರೆ? ಅವರು ಯಾರಂತ ಏನಾದರೂ ಗೊತ್ತಿದೆಯೇ? ನನ್ನ ವಿದ್ಯಾರ್ಥಿಗಳು ಅಂದರೆ ತುಂಬಾ ಜನ ಇದಾರಲ್ಲ."

"ಯಾಕೆ ಅಂತ ಹೇಗೆ ಹೇಳಲಿ ಸಾರ್. ನನ್ನ ಮಗಳು ಒಂದು ಥರ ಹುಡುಗಿ. ಯಾವ ಹುಡುಗರ ಕಡೆ ನೋಡಿ ಏನು ನಕ್ಕಳೋ ಯಾರಿಗೆ ಕಿಚಾಯಿಸಿದಳೋ. ಆ ವಯಸ್ಸು ಬರೇ ಕೀಟಲೆ ವಯಸ್ಸು, ಹುಡುಗರದ್ದೂ ಹುಡುಗಿಯರದ್ದೂ, ಈ ತರ ಲೇವಡಿ, ಚುಡಾಯಿಸೋದು ಇದ್ದಿದ್ದೇ. ಆದರೆ ಮನೇ ಮೇಲೆ ಕಲ್ಲು ಎಸೆಯೋವರೆಗೆ ಹೋಗಬಾರ್ದು ಸಾರ್?"

"ಯಾರು ನಿಮ್ಮ ಮಗಳು. ನಮ್ಮ ಕಾಲೇಜು ಸ್ಟೂಡೆಂಟಾ?"

"ಜಯಂತಿ ಅಂತ, ನಿಮ್ಮ ವಿದ್ಯಾರ್ಥಿನೀನೇ ಇರಬಹುದು."

"ಓಹೋ ಜಯಂತೀನ! ವಂಡರ್‌ಫುಲ್ ಗರ್ಲ್! ಆಕೆ ಅಂತ ಹುಡುಗಿ ಅಲ್ಲ ಬಿಡಿ."

"ತಾವು ಇಂತಾ ವಿಷ್ಯ ನಿಮ್ಮ ಹತ್ತಿರ ತಂದೆ ಅಂತ ಏನೂ ಬೇಸರ ಪಟ್ಟುಕೋಬಾರ್ದು ಸಾರ್. ಯೌವ್ವನದ ಹುಮ್ಮಸ್ಸಿನಲ್ಲಿ ಇಂತಾ ಕಿಡಿಗೇಡಿತನ ಮಾಡ್ತಾರೆ. ಅದನ್ನೆಲ್ಲಾ ಪೋಲೀಸ್‌ವರೆಗೆ ತಗೊಂಡು ಹೋಗಬಾರ್ದಂತ ನಿಮ್ಮತ್ರ ಹೇಳಿದೆ."

"ಒಳ್ಳೇದು ಮಾಡಿದಿರಿ. ನನ್ನ ಕೈಲೇನಾಗುತ್ತೋ ಅದು ಮಾಡ್ತೀನಿ, ಬಿಡಿ."

ಜೀಪ್ ವಾಪಸ್ಸು ಬಂತು.

ರಾಮಚಂದ್ರ ಒಳಬಂದಾಗ ಹೋಟೆಲಿನ ಒಳಗೆ ಜಯರಾಮ್, ಹೆಗ್ಡೆ ಇಬ್ಬರೇ ಕುಳಿತು ಮಾತಾಡುತ್ತಿದ್ದರು.

"ಅಲ್ಲೋ ಇವತ್ತು ಮೀಟಿಂಗಿನಲ್ಲಿ ನನ್ನ ಶಿಷ್ಯರದೇ ಗಲಾಟೆ ಅಂದ್ಯಲ್ಲಾ ಯಾರ್‍ಯಾರಿದ್ರು?" ಎಂದು ರಾಮಚಂದ್ರ ಜಯರಾಮನನ್ನು ಕೇಳಿದ.

"ಅವರೇ ಇದ್ದಾರಲ್ಲಯ್ಯಾ ರಮೇಶ, ಚಂದ್ರ, ಇಂಗ್ಲಿಷ್‌ಗೌಡ, ವಿಜಯ, ಅಂಗಾರ, ರಾಮಪ್ಪ, ರಫಿ, ವಿಶ್ವವಿಖ್ಯಾತ ತರಳೆಗಳು. ನಾನು ಎಲ್ಲಾ ಹೇಳಿದೆ



ಕಣಯ್ಯ ಪಾಟೀಲರು ಅಂಥದೇನನ್ನೂ ಮಾಡ್ತಿಲ್ಲಾಂತ. ಕೇಳಬೇಕಲ್ಲ! ಅವರಿಗೆ ಒಂದು ಕಡೆ ಬಾವುಟ ಪ್ರದರ್ಶನ ಮಾಡದಿದ್ದರೆ ಆತ್ಮಶಾಂತಿ ಇಲ್ಲಾಂತ ಕಾಣ್ತದೆ."

"ಅವರೆಲ್ಲಾ ನಿನ್ನ ಜೊತೆ ಎಷ್ಟೊತ್ತಿನವರೆಗೆ ಇದ್ರು."

"ನಾ ಇಲ್ಲಿಗೆ ಬರೋವರ್ಗ್ಗೂ ನನ್ನ ಜೊತೆ ಜಗಳ ಆಡ್ತಿದ್ರು. ಮಂತ್ರ ತಂತ್ರ ನಿಜ ಆದರೆ ಒಂದು ಲಕ್ಷ ರೂಪಾಯಿ ಕೊಡಬೇಕಾಗುತ್ತಲ್ಲಾಂತ ನಾನೇ ಪಾಟೀಲರನ್ನ ಎದುರಿಸೋದಕ್ಕೆ ಹಿಂದೇಟು ಹಾಕ್ತಿದ್ದೀನಂತೆ! ಒಳ್ಳೆ ಧರ್ಮಾಂಧರು ಯಾವ ತರ ಮೊಂಡುವಾದ ಮಾಡ್ತರೋ ಹಾಗೇ ಮಾಡ್ತಿದ್ದರು ಈ ವಿಚಾರವಾದಿಗಳೂ."

"ನೀ ಬರಬೇಕಾದರೆ ಕತ್ತಲಾಗಿತ್ತು ಅಲ್ಲವೇ?'

"ಯಾಕೋ ಹೀಗೆ ಕೇಳ್ತಿದ್ದೀ, ಏನು ಹೇಳಿದರಪ್ಪ ಆ ಕೃಷ್ಣೇಗೌಡ್ರು?"

"ನಿಧಾನವಾಗಿ ಹೇಳ್ತೇನೆ ಇನ್ನೂ ಕೊಂಚ ವಿಷಯ ತಿಳಿದ ಮೇಲೆ."



## ಅಧ್ಯಾಯ ೧೨



ಜಯರಾಮ, ರಾಮಚಂದ್ರ, ಹೆಗ್ಡೆ, ಇವರಲ್ಲಾ ಕಾಫಿಬಾರಿನಲ್ಲಿ ಕುಳಿತು ಮಾತಾಡುತ್ತಿರಬೇಕಾದರೆ ಅತ್ತ ಅಂಗಾಡಿ ಪಾಟೀಲರೊಡನೆ ದೀರ್ಘ ಮಾತುಕತೆಯಲ್ಲಿ ತೊಡಗಿದ್ದ. ಪಾಟೀಲರ ಆಫೀಸಿನಲ್ಲಿ ಸಾಯಂಕಾಲ ಸಂಶೋಧನ ಕೇಂದ್ರ್ರದ ಬಾಗಿಲು ಮುಚ್ಚಿದ ಮೇಲೆ ಅಂಗಾಡಿ ಪಾಟೀಲರ ರೂಮಿಗೆ ಮಾತಾಡಲು ಹೋದ. ಅಂಗಾಡಿ ಕಳಿಸುವ ರಿಪೋರ್ಟು ನೇರವಾಗಿ ಕೇಂದ್ರ ಕೃಷಿ ಮಂತ್ರಿಗಳ ಟೇಬಲ್ಲಿಗೆ ಹೋಗುತ್ತದೆಂದು ತಿಳಿದ ಪಾಟೀಲರು ಈಗ ಹೆಚ್ಚಿನ ಅಸ್ಥೆ ವಹಿಸಿದ್ದರು.

"ಮಿಸ್ಟರ್ ಅಂಗಾಡಿ ಏಲಕ್ಕಿಗೆ ಯಾಕೆ ಈವರೆಗೆ ವಿಜ್ಞಾನಿಗಳು ಏನೂ ಸಹಾಯ ಮಾಡಿ ಅಭಿವೃದ್ಧಿಪಡಿಸಲಾಗಲಿಲ್ಲ. ಅಂತ ಕೇಳಿದಿರಲ್ಲ. ಇಷ್ಟೆ ಕಾರಣ. ಇಲ್ಲಿ ಸಂಶೋಧನೆ ಒಂದನ್ನು ಬಿಟ್ಟು ಮಿಕ್ಕಿದ್ದೆಲ್ಲಾ ನಡೀತಾ ಇದೆ. ಒಬ್ಬರ ಮೇಲೊಬ್ಬರು ಕತ್ತಿ ಮಸೆಯೋದು ದೂರು ತಗೊಂಡು ಹೋಗಿ ವರ್ಗ



ಮಾಡಿಸೋದು. ಸಂಶೋದನ ಕೇಂದ್ರ್ರದ ಉತ್ಪತ್ತಿ ಕಳ್ಳತನ ಮಾಡೋದು, ಸಂಶೋಧಕರು ಅಂತ ಸಂಬಳ ತಗೊಳ್ಳೋದು, ಒಬ್ಬ ಪ್ರಾಮಾಣಿಕ ಸಂಶೋಧಕ ಒಂದು ಯೋಜನೆ ಹಾಕಿಕೊಂಡು ಕೆಲಸ ಆರಂಭಿಸೋದರೊಳಗೆ ಅವನಿಗೆ ವರ್ಗ ಮಾಡಿಸಲು ಕುತಂತ್ರ ಆರಂಭ ಆಗಿರ್‍ತದೆ. ಅವನು ಅತ್ತಲಾಗಿ ಹೋದ ಅಂದರೆ ಇತ್ತ ಅವನ ಕೆಲಸ ಅರ್ದಕ್ಕೆ ಮಣ್ಣು ತಿನ್ತದೆ.

"ಇದರ ಜೊತೆಗೆ ಈಗ ಸಂಶೋಧನ ಕೇಂದ್ರ ರಾಜಕಾರಣಕ್ಕೆ ಸ್ಥಳೀಯ ರಾಜಕೀಯಾನು ಮಿಲಾಕತ್ತಾಗಿಹೋಗಿದೆ. ಅದರ ವಿಷ್ಯ ಕೊಂಚ ಹೇಳ್ತೀನಿ ಕೇಳಿ. ಇಲ್ಲೆಲ್ಲಾ ಸುತ್ಮುತ್ತಾ ಕೇರಳದ ಬ್ಯಾರಿಗಳ ವಠಾರ ಬೆಳದಿದೆ. ಎಲ್ಲಾ ಸುಲೇಮಾನ್ ಬ್ಯಾರಿ ಕೈಕೆಳಗೆ ಕೆಲಸ ಮಾಡೋದು. ಆತನೊಬ್ಬ ಪ್ರಖ್ಯಾತ ಕಳ್ಳಸಾಗಾಣಿಕೆದಾರ. ಎಲ್ಲಾ ಕೆಸರೂರಿನ ಮುನಿಸಿಪಾಲಿಟಿ, ಗ್ರಾಮ ಪಂಚಾಯ್ತಿ, ತಾಲ್ಲೂಕು ಬೋರ್ಡು ರಾಜಕಾರಣದ ಪಾತ್ರಧಾರಿಗಳು. ಈಗ ಅವನು ಇವರಿಗೆ ಒಂದು ಮಸೀದಿ ಕಟ್ಟಿಸಿದ್ದಾನೆ. ದಿನಾ ಅಲ್ಲಾ ಹೋ ಅಕ್ಬರ್ ಅಂತ ಕಿವಿಗಡಚಿಕ್ಕುವಂತೆ ಕೂಗ್ತಾರೆ. ಪೈಗಂಬರ ಕಾಲದಲ್ಲಿ ಮೈಕ್ ಇತ್ತೊ ಏನೋ, ಕೇಳಹೋದರೆ ಖುರಾನ್ ಪ್ರಕಾರ ಮಾಡ್ತಿದೀವಿ, ಅಂತಾರೆ. ಅವರ ಹೋರಾಟಕ್ಕೆ, ರಾಜಕಾರಣಕ್ಕೆ ಮಸೀದಿ ಸಂಕೇತ. ರಾಜಕಾರಣಕ್ಕೆ ಮತ ಧರ್ಮ ಹೇಗೆ ಉಪಯೋಗಿಸ್ಕೋಬೇಕಂತ ಆತ ಚೆನ್ನಾಗಿ ಬಲ್ಲ. ಅವನು ಮಸೀದಿ ಕಟ್ಟಿ ಆರ್ಭಟ ಆರಂಭಿಸೋದಕ್ಕೂ ಇಲ್ಲಿನ ಕನ್ನಡಿಗರಿಗೆ, ಹಿಂದೂಗಳಿಗೆ ಎಚ್ಚರ ಆಯ್ತು. ನಮ್ಮ ಸಂಶೋಧನ ಕೇಂದ್ರ್ರದಲ್ಲಿ ಸುಮಾರು ಜನ ಹಾರುವರು, ಲಿಂಗಾಯಿತರು, ಒಕ್ಕಲಿಗರು, ಹಿಂದೂವಾದಿಗಳಿದ್ದಾರೆ. ನಮ್ಮ ಸಂಶೋಧನ ಕೇಂದ್ರ್ರದ ಬೇಲಿಯೊಳಗೊಂದು ಮುರುಕಲು ಗುಡಿ ಇತ್ತು. ಅದನ್ನು ಉದ್ಭವ ವೆಂಕಟೇಶ್ವರ ಸ್ವಾಮಿ ಅಂತ ನಾಮಕರಣ ಮಾಡಿದರು. ಕೇರಳದ ಸಾಬರ ಕೊಬ್ಬು ಅಡಗಿಸ್ತೀವೆ ಅಂತ ಇವರು ಮೈಕ್ ಹಾಕಿಕೊಂಡು ಜಗನ್ನಾಥ ಸ್ತೋತ್ರ, ವೆಂಕಟೇಶ್ವರ ಸ್ತ್ರೋತ್ರ ಎಲ್ಲಾ ಕೂಗಿಸೋದಕ್ಕೆ ಆರಂಭಿಸಿದ್ದಾರೆ. ಡಾ॥ ಜೋಗಿಹಾಳ್ ಇದ್ದಾಗಲೇ ಅವರ ಅಸಮ್ಮತಿ ಪ್ರತಿಭಟನೆ ಎಲ್ಲಾ ಮೀರಿ ಸುತ್ತಮುತ್ತಲ ಪ್ರತಿಷ್ಠಿತ ಗೌಡರ ಸಹಾಯದಿಂದ ಇದನ್ನೆಲ್ಲಾ ಆರಂಭಿಸೇಬಿಟ್ಟರು. ಇದಕ್ಕೆ ತಿರುಪತಿ ಕಡೆಯವರಿಂದಲೂ ಕುಮ್ಮಕ್ಕು ಧನಸಹಾಯ. ಇಲ್ಲಿ ಬೆಳೆಯುತ್ತಿರೋ ಧರ್ಮಸ್ಥಳದ ಪ್ರಭಾವ ಕಡಿಮೆ ಮಾಡಬೇಕು ಅಂತ ಅವರ ಕುತಂತ್ರ. ಜೋಗಿಹಾಳರನ್ನು ಇಲ್ಲಿಂದ ಗುಡಾರ ಎತ್ತಿಸೋದಕ್ಕೆ ಈ ಊರಿನ ಎಂ.ಎಲ್.ಎ., ಎಂ.ಎಲ್.ಸಿ. ಎಲ್ಲ ಶತಪ್ರಯತ್ನ ಮಾಡಿ ವರ್ಗ ಮಾಡಿಸಿದ್ದರು. ಆದರೆ ಇಲ್ಲಿನ ಎಂಪಿ ಶಾಂತಗೌಡರು ಕೇಂದ್ರ್ರದ ಸರ್ಕಾರದ

ಆದೇಶದ ಮೇಲೆ ತನಿಖೆ ಮಾಡಿ ಅವರನ್ನು ಅವರ ಸಂಶೋಧನೆ ಮುಗಿಯೋವರೆಗೂ ತೆಗೆಯಬಾರದು ಅಂತ ಶಿಫಾರಸ್ಸು ಮಾಡಿದ್ದರಿಂದ ಇಲ್ಲೇ ಉಳಿದರು. ಅವರನಂತರ ರೈ ಅನ್ನೋರು ಈ ಸಂಶೋಧನ ಕೇಂದ್ರಕ್ಕೆ ಮುಖ್ಯಸ್ಥರಾಗಿ ಬಂದರು. ಜೋಗಿಹಾಳರ ಸಂಶೋಧನೆ ಯೋಜನೆಗಳನ್ನೆಲ್ಲಾ ತಲೆಕೆಳಗು ಮಾಡಿ ಕಲಸು ಮೋಲೋಗರ ಮಾಡಿಟ್ಟಿದ್ದಾರೆ. ನಾನು ಬಂದು ಹತ್ತಿರ ಹತ್ತಿರ ಒಂದು ವರ್ಷ ಆಯ್ತು. ಸಂಶೋಧನೆ ಮಡೋದಿರಲಿ. ಆರಂಭಿಸೋದಕ್ಕೂ ಆಗಿಲ್ಲ."

ಸಂಶೋಧನ ಕೇಂದ್ರದ ಬಗ್ಗೆ ಬೇಕಿದ್ದು ಬೇಡವಾದದ್ದು ಎಲ್ಲಾ ಸೇರಿಸಿ ಕೊರೆದರು ಡಾ. ಪಾಟೀಲ್. ಅಂಗಾಡಿಗೆ ಹೆಗ್ಡೆ ಹೇಳಿದ ಹಾಗೆ ಪಾಟೀಲ್ ಕೊಂಚ ಸಿನಿಕ್ಕೇ ಇರಬೇಕು ಎಂದೆನ್ನಿಸಿತು. ಆದರೂ ಸುಮ್ಮನೇ ಕುಳಿತು ಆಸಕ್ತಿಯಿಂದ ಅವರ ಪುರಾಣ ಕೇಳಿದ. ಯಾಕೆಂದರೆ ಅವನಿಗೆ ಚೆನ್ನಾಗಿ ಗೊತ್ತಿತ್ತು. ಜನ ಈ ರೀತಿ ಮೈಮರೆತು ಲೋಕಾಭಿರಾಮವಾದ ಹರಟೆ ಒದರುತ್ತಿರಬೇಕಾದರೆ ತನಗೆ ಬೇಕಾದ ಸತ್ಯದ ತುಣುಕುಗಳು ನುಸುಳಿ ಬರುವುದು ಎಂದು.

ಕೆಸರೂರಿನ ಏಲಕ್ಕಿಗೆ ಕೆಸರೂರಿನ ಸಂಸ್ಕೃತಿಗೆ, ಒಟ್ಟಿಗೇ ರೋಗ ತಗುಲಿಕೊಂಡಿದೆ ಎಂದರು ಪಾಟೀಲರು. ಅಂಗಾಡಿ ಅವರ ವಿಶ್ಲೇಷಣೆ ಕಂಡು ಅಚ್ಚರಿಪಟ್ಟ. ಆದರೆ ಜೋಗಿಹಾಳರು ಈ ಬಗ್ಗೆ ಏನು ಯೋಚನೆ ಹಾಕಿದ್ದರು? ಹಾಗಾದರೆ ಅವರ ಸಾವು ಕೇವಲ ಆಕಸ್ಮಿಕವೇ! ಶಾಂತಗೌಡರು ತನಿಖೆ ಮಾಡಿ ಯಾಕೆ ಅವರನ್ನು ವರ್ಗ ಮಾಡಕೂಡದು ಅಂತ ಶಿಫಾರಸ್ ಮಾಡಿದರು. ಇವರೆಲ್ಲರಿಗೆ ಗೊತ್ತಿಲ್ಲದ್ದು ಅವರಿಗೇನು ಗೊತ್ತಾಯ್ತು? ಅಂಗಾಡಿ ತಲೆ ಕೆರೆದುಕೊಂಡು ಪಾಟೀಲರ ವಾಗ್ಝರಿಯ ನಡುವೆಯೇ ಯೋಚಿಸಿದ.

ಕೆಸರೂರಿನ ಏಲಕ್ಕಿ ಸಮಸ್ಯೆಯನ್ನು ಇಡೀ ಕೆಸರೂರಿನ ಸಂಸ್ಕೃತಿಯೊಂದಿಗೆ ಅರ್ಥಮಾಡಿಕೊಳ್ಳಬೇಕೆ? ಈ ಸಾವಿರಾರು ಸಮಸ್ಯೆಗಳ ಶರಧಿಯ ತಳಕ್ಕೆ ಮುಳುಗಿ ಇದರ ಮೂಲ ಸಮಸ್ಯೆ ಏನೆಂದು ನೋಡಲಿಕ್ಕೆ ನಾನೇನು ಅವತಾರ ಪುರುಷನೆ? ನನ್ನನ್ನು ಏನು ಕೆಲಸಕ್ಕೆ ಸಂಬಳ ಕೊಟ್ಟು ಕಳಿಸಿದ್ದಾರೋ ಅಷ್ಟು ಮಾಡಿದರೆ ಸಾಕು! ಆದರೂ ಇವೆಲ್ಲಾ ಸಮಸ್ಯೆಗಳೂ ಒಂದರೊಳಗೊಂದು ಸಂಯೋಜನೆಗೊಂಡಂತೆ ಸೇರಿ ಹೋರಿದ್ದರೇನಪ್ಪಾ ಮಾಡೋದು? ಎಲ್ಲಾ ಸಮಸ್ಯೆಗಳೂ ಒಂದು ಮಾನವೀಯ ಸನ್ನಿವೇಶದ ತುಣುಕುಗಳಲ್ಲವೆ?

"ಅಲ್ಲಾ ಸಾರ್ ಏಲಕ್ಕಿ ಬೆಳೆ ಈ ರೀತಿ ಕಡಿಮೆಯಾಗ್ತಿರೋದಕ್ಕೆ ಏನು ಕಾರಣ ಅಂತ ಏನಾದರೂ ತನಿಖೆ ಮಾಡಿದೀರಾ? ಅಥವಾ ಜೋಗಿಹಾಳರು



ಈ ಬಗ್ಗೆ ಏನಾದರೂ ಸಂಶೋಧನೆ ಮಾಡಿದ್ರೊ?"

"ಕೆಸರೂರಿನ ಮಟ್ಟಿಗೆ ನಾನು ಯಾವದಂತಾ ಹೇಳಲಿ ಅಂಗಾಡಿ? ಕೆಸರೂರಿನ ಜನಾಂತ ಹೇಳಲೋ ಅಥವಾ ಈ ದಂಡದ ಪಿಂಡಗಳಾಗಿರೋ ವಿಜ್ಞಾನಿಗಳೂ ಅಂತ ಹೇಳಲೋ? ಅಥವಾ ಕೆಸರೂರು ವೈರಸ್ ಖಾಯಿಲೆ ಅಂತ ಹೇಳಲೋ? ಜೋಗಿಹಾಳರ ಪ್ರಕೃತಿಯೇ ಬೇರೊಂದು ತರ. ಅವರ ಶೈಲಿ ಭಾಳ ಅಗ್ರೆಸಿವ್ ರೀತಿಯದು. ನ್ಯೂಗಿನಿಗೆ ಅವರು ಒಂದು ಸಮ್ಮೇಳನಕ್ಕೆ ನನ್ನ ಜೊತೆಗೆ ಬಂದಿದ್ದರು. ಆಗ ಅವರು ಇರೋ ಗಿಡಗಳನ್ನು ಉಳಿಸೋದು ಪೋಷಿಸೋದು ಇದಕ್ಕಿಂತ ಹೊಸ ತಳಿಗಳನ್ನು ಉತ್ಪತ್ತಿ ಮಾಡಿ ಬೆಳೆಯನ್ನು ಹೆಚ್ಚಿಸೋದೆ ಮುಖ್ಯ. ಕೃಷಿ ವಿಜ್ಞಾನಿಗಳು ಡಿಫೆನ್ಸಿವ್ ಆಗಿರಬಾರದು. ಅಫೆನ್ಸಿವ್ ಆಗಿರಬೇಕು, ಅಂತ ಭಾಷಣ ಮಾಡಿದರು.

"ಕೆಸರೂರಿನ ವೈರಸ್ ಖಾಯಿಲೆ ಅಂದ್ರಲ್ಲಾ ಅದೇನು ಸಾರ್. ನಾನೂ ಅಗಾಗ್ಗೆ ಕೆಸರೂರು ಖಾಯಿಲೆ ಕೇಳಿರ್ತೀನಿ. ನಮ್ಮೂರಿನ ನೆನಪು ಈ ಪದ ಕೇಳಿದಾಗಲೆಲ್ಲಾ ನನಗೆ ಬರ್ತಿರುತ್ತೆ."

"ಅದೊಂದು ವೈರಸ್ ರೋಗ ಅಂತ ಈವರೆಗಿನ ತಿಳುವಳಿಕೆ. ಆದರೆ ಫಂಗಸ್ ಸ್ಪೋರ್, ಅಥವ ಪರಾಗದಂಥ ಧೂಳಿನ ಬೀಜದಿಂದ್ಲೂ ಹಬ್ಬುತ್ತೆ. ಇದು ಹಬ್ಬಿದ ಗಿಡ ದಿನೇ ದಿನೇ ಕುಗ್ಗಿ ಇದರ ರೋಗ ಲಕ್ಷಣ ಸ್ಪಷ್ಟವಾಗಿ ಗೊತ್ತಾಗುಷ್ಟರಲ್ಲಿ ಕೈಮೀರಿ ಹೋಗಿರುತ್ತೆ. ಈ ಗಿಡಗಳು ಸಾಯದೆಯೂ ಬದುಕದೆಯೂ ಉಳಿದುಕೊಂಡಿರುತ್ತವೆ. ಬೆಳೆಗಾರರು ಗೊಬ್ರಾ ಔಷಧಿ ಅಂತ ಕೈಲಿದ್ದಿದ್ದನ್ನೆಲ್ಲಾ ಕಳಕೊಳ್ಳೊವರೆಗೂ ಇವು ಜೀವಂತವಾಗಿರುತ್ತವೆ. ಕೊನೆಗಾಲದಲ್ಲಿ ಈ ಗಿಡಗಳ ಎಲೆ ಕಿತ್ತು ಮೈಕ್ರಾಸ್ಕೋಪಿನಲ್ಲಿ ನೋಡಿದರೆ ಎಲೆಗಳೊಳಗಡೆ ಬಿಳಿಯ ನರಗಳಂತೆ ವೈರಸ್ ಎಲೆಯಹರಿತ್ತನ್ನೆಲ್ಲಾ ತಿಂದು ಹಾಕಿರೋದು ಕಾಣ್ತದೆ."

"ಜೋಗಿಹಾಳರು ಇದಕ್ಕೇನು ಮದ್ದು ಅಂತ ಸಂಶೋಧನೆ ಮಾಡಿರಲಿಲ್ಲವೆ?"

"ಅವರಿದ್ದಾಗ ಈ ಸಮಸ್ಯೆ ಇರಲಿಲ್ಲ ಅಥವಾ ಇದೊಂದು ಸಮಸ್ಯೆ ಅನ್ನುವಷ್ಟು ಪ್ರಬಲವಾಗಿ ಕಾಣಿಸಿಕೊಂಡಿರಲಿಲ್ಲ!"

"ಇದರ ಪರಿಣಾಮ ಏನಾಗಬಹುದು ಸಾರ್?"

"ಏನಿಲ್ಲಾ ಭಾರತದ ಏಲಕ್ಕಿ ಉತ್ಪಾದನೆ ಕ್ರಮೇಣ ಕಡಿಮೆಯಾಗುತ್ತಾ ಕೊನೆಗೆ ಈ ದೇಶದಲ್ಲಿ ಏಲಕ್ಕಿ ನಾಮಾವಶೇಷವಾಗಿ ಹೋಗುತ್ತೆ."

“ಎನ್ ಸಾರ್ ನೀವು ಹೇಳೋದು. ಲಕ್ಷಾಂತರ ಎಕರೆ ಏಲಕ್ಕಿ ತೋಟಗಳಿರೋ, ಸಾವಿರಾರು ಜನಕ್ಕೆ ಜೀವನೋಪಾಯವಾಗಿರೋ ಭಾರತದಲ್ಲಿ ನಾಮಾವಶೇಷವಾದರೆ ಏನು ಗತಿ!”

“ಅಂಗಾಡಿ, ನಾನು ವಿಜ್ಞಾನಿಯಗಿ ಇರೋ ಸಂಗತಿಯನ್ನು ಎಷ್ಟೇ ಕ್ರೂರವಾದುದಾದರೂ ತಿಳಿಸಬೇಡವೇ. ಒಂದು ಕಾಲದಲ್ಲಿ ಸಿಲೋನಿನಲ್ಲಿ ಟೀ ಗಿಡಗಳೇ ಇರಲಿಲ್ಲ. ಎಲ್ಲಾ ಕಾಫಿ ತೋಟಗಳೇ. ಆದರೆ ಎಲೆ ತುಕ್ಕು ರೋಗ ಅಂತ ಒಂದು ಫಂಗಸ್ ಬಂತು. ಇಡೀ ಸಿಲೋನಿನ ಎಲ್ಲಾ ಕಾಫಿ ತೋಟಗಳನ್ನೂ ಅಕ್ರಮಿಸಿ ಕೊನೆಗೆ ಕಾಫಿ ಸಿಲೋನದಲ್ಲಿ ನಾಮಾವಶೇಷವಾಯ್ತು: ಇದು ಇತಿಹಾಸದ ಸತ್ಯ.”

“ಇದನ್ನು ತಡೆಯೋದು?”

“ಈ ರೋಗದ ಲಕ್ಷಣ ಕಂಡಕೂಡಲೇ ಆ ಗಿಡ ಕಿತ್ತು ಸುಡಬೇಕು.”

“ಏನಾದರೂ ಬೆಳೆಗಾರರಿಗೆ ಆ ಬಗ್ಗೆ ತಿಳುವಳಿಕೆ ಮೂಡಿಸೋ ಪ್ರಯತ್ನ ಆಗಿದೆಯೇ ಸಾರ್?”

“ಏನೇನೂ ಇಲ್ಲ. ಯಂತ್ರ ಕಟ್ಟಿ, ಮಂತ್ರ ಮಾಡಿ ಅಂತಾ ದಿನಾ ಜನ ಬರ್ತಾರೆ. ಕೆಸರೂರಿನ ಕಾಯಿಲೆ ವಿಷ್ಯ ಹೇಳಿದರೆ ಕಿವಿಗೇ ಹಾಕ್ಕೊಳೋಲ್ಲ. ಚೆನ್ನಾಗಿರೋ ಗಿಡ ಕಿತ್ತು ಸುಡಬೇಕಾ! ಎನ್ನುತ್ತಾರೆ. ಏಲಕ್ಕಿ ತೋಟ ಸುಡೋದಕ್ಕೆ ಮೊದಲು ಈ ಸುಡುಗಾಡು ಕೆಸರೂರಿನ ಸಮಾಜ ಸುಡಬೇಕು. ಆ ಅಯೋಗ್ಯ ವಿಜ್ಞಾನಿಗಳನ್ನ, ಮೂರ್ಖ ರಾಜಕಾರಣಿಗಳನ್ನ, ದೇವಸ್ಥಾನ ಮಸೀದಿ ಕಟ್ಟಿಕೊಂಡು ಮೈಕಿನಲ್ಲಿ ಕಿರಚೋ ಧರ್ಮಾಂಧರನ್ನ ಎಲ್ರನ್ನೂ ಸುಡಬೇಕು.” ಪಾಟೀಲರು ಇದ್ದಕ್ಕಿದ್ದಂತೆ ಉದ್ರಿಕ್ತರಾಗಿ ಮಾತಡಿದರು. ಅವರ ಮಾತಿನಲ್ಲಿ ಹತಾಶೆ ಎದ್ದು ಕಾಣುತ್ತಿತ್ತು. ಅಂಗಾಡಿ ಅವರ ಕೋಪ ಶಮನ ಮಾಡಲೋ ಎಂಬಂತೆ.

“ಅಲ್ಲಾ ಸಾರ್ ಇಡೀ ಸಮಾಜಾನ್ನ ಸುಟ್ಟರೆ ಅಮೇಲೆ ಯಾರಿಗಾಗಿ ಏಲಕ್ಕಿ ಬೆಳೆಸಬೇಕು ನಾವು?’ ಎಂದ.

ಅದಕ್ಕೆ ಪಾಟೀಲರು ನಕ್ಕು “ಸ್ಸಾರಿ, ಒಂದೊಂದು ಸಾರಿ ಕೋಪ ಬರುತ್ತೆ ಅಷ್ಟೆ. ಈ ಜಟಿಲ ಸನ್ನಿವೇಶ ಏನಾದರೂ ಪ್ರಾಮಾಣಿಕ ಪ್ರಯತ್ನ ಮಾಡಬೇಕೆಂದಿರೋನಿಗೆ ಮನಃಸ್ಥಿಮಿತ ಕಳಕೊಳ್ಳೋ ಹಾಗೆ ಮಾಡಿಬಿಡ್ತವೆ. ಅಫ್ ಕೋರ್ಸ್ ಇವೆಲ್ಲಾ ಆಫ್ ದಿ ರಿಕಾರ್ಡ್ ಅಂಶಗಳಪ್ಪ. ಇವನ್ನೆಲ್ಲಾ ವರದೀಲಿ ಸೇರಿಸಬೇಡಿ.

“ನೋಡಿ, ನೀವು ಬಂದಿರೋದು ಏಲಕ್ಕಿ ಸಮಸ್ಯ ತನಿಖೆ ಮಾಡೋದಕ್ಕೆ



ತಾನೆ! ಆದರೆ ನಾನು ಹೇಳಿದ್ದರಲ್ಲಿ ಏನೊಂದನ್ನೂ ಬಿಟ್ಟು ನೀವು ತನಿಖೆ ಮಾಡೋದಕ್ಕೆ ಸಾಧ್ಯ ಇಲ್ಲ ಅಂಗಾಡಿ.

ಒಂದು ಸಸ್ಯ ಅವನತಿ ಹಾದಿ ಹಿಡೀತೂ ಅನ್ನಿ. ಅದರಿಂದ ಬದುಕುತ್ತಿದ್ದ ಕೀಟಸ್ತೋಮ, ಅವುಗಳನ್ನೇ ಅಹಾರ ಮಾಡಿಕೊಂಡಿದ್ದ ಪಕ್ಷಿಗಳು, ಅವುಗಳಿಂದಲೇ ಬೀಜ ಪ್ರಸರಣವಾಗುತ್ತಿದ್ದ ವೃಕ್ಷಸಂಕುಲ, ಅದರ ಆಧಾರದ ಮೇಲೆ ಬದುಕೋ ಮನುಷ್ಯ. ಇಡೀ ವಿಶ್ವ, ಈ ತರ ಒಂದಕ್ಕೊಂದಕ್ಕೆ ಬಿಗಿದುಕೊಂಡು ಸಮತೋಲನದಲ್ಲಿ ನಿಂತಿರೋ ಬಲೆ. ಈ ರುದ್ರ ನಾಟಕದ ತೀರ್ಮಾನ ಆಗಿದ್ದು ಎಲ್ಲೋ ಯಾರಿಗೆ ಗೊತ್ತು. ಸುಲೆಮಾನ್ ಬೇರಿ ಕೈಲಿ ಲಂಚ ತಿಂದು ಕಾಡು ಮಾರಿಕೊಂಡ್ರಲ್ಲಾ ಆಗಲೇ ಇದ್ದರೂ ಇರಬಹುದು.

“ಈಗ ತಗೊಳ್ಳಿ ಏಲಕ್ಕಿ ಹೋಯ್ತು ಅಂತ ಏಲಕ್ಕಿ ಹನಾಲಿನ ಮರಗಳನ್ನೆಲ್ಲಾ ಮಾರಿಕೊಳ್ತಾರೆ. ಮಗನ ಮದುವೆಗೆ ವರದಕ್ಷಿಣೆ ತಗೊಳ್ತಾರೆ, ಮಗಳ ಮದುವೆಗೆ ಸಾಲಾ ಮಾಡ್ತಾರೆ, ಹಬ್ಬುತ್ತಾ ಹೋಗುತ್ತೆ ತಾಪತ್ರಯ, ಇನ್ನಷ್ಟು ತೊಂದರೆ ರೇಜಿಗೆ! ಮಧ್ಯ ಇದರ ಉಪಯೋಗ ಪಡಕೊಳ್ಳೋ ಮತಾಂಧರು. ರಾಜಕಾರಣಿಗಳು! ದೇವರು! ಮಸೀದಿ! ಮೈಕು! ಭಜನೆ! ದಳ್ಳುರಿ ಹಬ್ಬುತ್ತಾ ಹೋಗುತ್ತೆ. ಕೆಟ್ಟ ಮೇಲೆ ಬುದ್ದಿ ಬಂತು ಅನ್ನೊ ಗಾದೆಯಿದೆಯಲ್ಲ ತಪ್ಪು. ಕೆಡ್ತಾ ಕೆಡ್ತಾ ಬುದ್ದೀನೂ ಕೆಡ್ತಾ ರೋಗ ಜೋರಾಗ್ತಾ ಹೋಗುತ್ತೆ.”

ತನಿಖೆ ಮಾಡಿ ಗೊತ್ತಾಗುತ್ತೆ! ಪರಿಸ್ಥಿತಿಯ ಲಾಭ ಮಾಡಿಕೊಳ್ಳೋರೂ ಮುಳುಗ್ತಿದಾರೆ!”

ಪಾಟೀಲರು ವ್ಯಂಗ್ಯವಾಗಿ ಮಾತಾಡಿದರು.

ಅಂಗಾಡಿ ಹೊರಬಿದ್ದಾಗ ಇಂಗುತಿಂದ ಮಂಗನ ತರ ಆಗಿದ್ದ. ಪಾಟೀಲರು ಮಾತಾಡುತ್ತಾ ಮಾತಾಡುತ್ತಾ ಅವರ ಅಲೋಚನೆಯ ಭಾವಲಹರಿಯೊಂದಿಗೆ ತೇಲಿ ಹೋಗಿದ್ದವನಿಗೆ ಆಚೆಗೆ ಬರುತ್ತಲೂ ಬೇರೊಂದು ಲೋಕಕ್ಕೆ ಬಂದಂತಾಯ್ತು. ಪಾಟೀಲರೊಡನೆ ಇದ್ದಷ್ಟು ಹೊತ್ತು ಅಂಗಾಡಿಗೆ ವಿಷಾದಯೋಗದಲ್ಲಿ ಮುಳುಗಿದ್ದಂತೆನ್ನಿಸಿತು.

ಯೋವುದೋ ಒಂದು ಗಿಡದ ಖಾಯಿಲೆಗೆ ಜಗತ್ತಿನ ಎಲ್ಲದನ್ನೂ ತಂದು ಗಂಟು ಹಾಕುವುದು ನ್ಯಾಯವೇ? ಹಾಗಾದರೆ ಪಾಟೀಲರು ಇಷ್ಟು ಹೊತ್ತು ಹೇಳುತ್ತಿದ್ದ ವಿಷಯಗಳಲ್ಲಿ ಯಾವುದು ಅಧ್ಯಯನ ಯೋಗ್ಯ? ನಾಳೆ ಹೋಗಿ ಈ ಊರಿನ ಮಾಜಿ ಎಂ.ಪಿ. ಶಾಂತಗೌಡರನ್ನು ಕಾಣಬೇಕು. ಜೋಗಿಹಾಳ್‌ರ ಬಗ್ಗೆ ತನಿಖೆ ಮಾಡಿದಾಗ ಅವರು ಏನೇನು ತಿಳಿದರು ಕೇಳಬೇಕು. ಸದ್ಯಕ್ಕಂತೂ

ಈ ಸಂಶೋಧನ ಕೇಂದ್ರದಲ್ಲಿ ಯಾವುದೇ ಉಪಯುಕ್ತ ಸಂಶೋಧನೇನೂ ನಡೆಯುತ್ತಿರುವಂತೆ ಕಾಣುತ್ತಿಲ್ಲ.

"ಈ ದರಿದ್ರ ಇಂಟೆಲಿಜೆನ್ಸ್ ಕೆಲಸ ಅಂದರೆ ಇದೇ. ತಾಪೇದಾರಿ ಕೆಲಸ" ಎಂದು ಸಂಶೋಧನ ಕೇಂದ್ರದಿಂದ ವಾಪಸ್ ಕೆಸರೂರಿಗೆ ಬರುತ್ತಾ ದಾರಿಯಲ್ಲಿ ಗೊಣಗಿಕೊಂಡ ಅಂಗಾಡಿ.

ಸಿನೆಮಾ ನೋಡಿ ಇಂಟೆಲಿಜೆನ್ಸ್ ಕೆಲಸ ಅಂದರೆ ಒಳ್ಳೆ ರೋಮಾಂಚಕ, ಇಂಗ್ಲಿಷ್ ಕಾದಂಬರಿಗಳಲ್ಲಿರುವಂತೆ ಓವರ್‌ಕೋಟು ಕಪ್ಪು ಕನ್ನಡಕ ಧರಿಸಿ ಕೈಯಲ್ಲಿ ಪಿಸ್ತೂಲು ಹಿಡಿದು ಜೇಮ್ಸ್‌ಬಾಂಡ್ ತರ ಇರಬಹುದು ಎಂದುಕೊಂಡಿದ್ದ ಅಂಗಾಡಿ ಫೈಲುಗಳನ್ನು ನೋಡುತ್ತಾ ರಿಪೋರ್ಟುಗಳನ್ನು ತಯ್ಯಾರು ಮಾಡುತ್ತಾ ಮೂರ್ಖನಾಗಿದ್ದ. ಪಾಟೀಲರು ಮುದಿ ಬೋಳಮ್ಮನ ತರ ಅವನಿಗೆ ಕೊರೆದು ಊರಿನ ರಗಳೆಗಳನ್ನೆಲ್ಲಾ ಅವನ ಕಿವಿಗೆ ಉರುಟಿ ಇನ್ನಷ್ಟು ಅವನಿಗೆ ತನ್ನ ಹುದ್ದೆ ಬಗ್ಗೆ ರೇಜಿಗೆ ಉಂಟುಮಾಡಿದ್ದರು.

ಸಂಶೋಧನ ಕೇಂದ್ರದಿಂದ ಕೆಸರೂರು ಎರಡು ಮೈಲಿಯಾಗುತ್ತದೆ. ಹಾದಿ ಪಕ್ಕದಲ್ಲೆಲ್ಲಾ ಏಲಕ್ಕಿ ತೋಟಗಳೇ ಇರುವುದರಿಂದ ಅದು ಕಾಡಿನ ಹಾದಿಯಂತೆ ಇತ್ತು. ಅಂಗಾಡಿ ಕಲ್ಲುಸೇತುವೆ ದಾಟಿ ಕೊಂಚ ದೂರ ಬರುವಷ್ಟರಲ್ಲಿ ಹಾದಿ ಪಕ್ಕ ಯಾರೋ ಕಂಬಳಿ ಹೊದ್ದು ಮರೆಯಲ್ಲಿ ದೊಣ್ಣೆಯೊಂದಿಗೆ ನಿಂತಿರುವುದು ಕಂಡಿತು. ಇದ್ದಕ್ಕಿದ್ದಂತೆ ಅಂಗಾಡಿಗೆ ಮೈ ಜುಮ್ ಎಂದಿತು. ಆದರೂ ಅದನ್ನು ಅವನು ತೋರಗೊಡದೆ ಅಲಕ್ಷಿಸಿ ಮುನ್ನಡೆದ. ಕೊಂಚ ದೂರ ನಡೆಯುವುದರಲ್ಲೆ ಇನ್ನೊಂದು ಕಂಬಳಿ ಹೊದ್ದ, ದೊಣ್ಣೆ ಹಿಡಿದ ಆಕೃತಿ ಮರೆಯಲ್ಲಿ ಅಡಗಿ ನಿಂತಿರುವುದು ಕಂಡಿತು. ಏನೋ ನಡೆಯುತ್ತಿದೆ ಎಂದು ಅಂಗಾಡಿಗೆ ಗುಮಾನಿ ಶುರುವಾಯ್ತು. ಸರಸರ ಕೆಸರೂರಿನತ್ತ ಕಾಲು ಹಾಕಿದ.

ಕೊಂಚ ದೂರ ದಾರಿ ಕ್ರಮಿಸಿದ ಅನಂತರ ನೋಡುತ್ತಾನೆ! ಆ ಎರಡು ಆಕೃತಿಗಳೂ ಹಿಂಬಾಲಿಸುತ್ತಿವೆ! "ಈಗ ನಾನು ನಿಜವಾದ ಪತ್ತೇದಾರ! ಹಿಂಗಿರಬೇಕು ಡಿಟೆಕ್ಟಿವ್ ಅಂದರೆ" ಎಂದು ಮನದಲ್ಲೆ ಅಂದುಕೊಳ್ಳುತ್ತ ಟಿಬಿಯಲ್ಲಿ ತಾನು ಸೂಟ್ ಕೇಸಿನಲ್ಲೇ ಬಿಸಾಕಿ ಬಂದಿರುವ ರಿವಾಲ್ವರನ್ನು ಜ್ಞಾಪಿಸಿಕೊಳ್ಳುತ್ತಾ ಅಂಗಾಡಿ ಸರಸರ ಹತ್ತಿರಾಗುತ್ತಿದ್ದ ಕೆಸರೂರಿನತ್ತ ಹೆಜ್ಜೆ ಹಾಕಿದ.



## ಅಧ್ಯಾಯ ೧೩



ಅಂಗಾಡಿ ದಾರಿಯಲ್ಲಿ ಬರುತ್ತಾ ದಂಡಧಾರಿಗಳಾಗಿ ನಿಂತಿದ್ದ ಕಂಬಳಿ ಹೊದ್ದ ವ್ಯಕ್ತಿಗಳು ಅಂಗಾಡಿ ಊಹಿಸಿ ರೋಮಾಂಚಿತನಾದಂತೆ ಇನ್ಯಾವುದೋ ಪ್ರತಿವ್ಯೂಹ ಒಂದರ ಏಜಂಟುಗಳಾಗಿರದೆ ಅವರು ಕೃಷ್ಣೇಗೌಡನ ತೋಟದ ಆಳುಗಳಾಗಿದ್ದರು. ಮರುದಿನವೂ ಮನೆಯ ಮೇಲೆ ಕೂಲಿ ಲೈನಿನ ಮೇಲೆ ಕಲ್ಲು ಬಿದ್ದಂತೆ ಸದ್ದಾಗತೊಡಗಿದೊಡನೆ ಮಾಯ್ಲುಮೇಸ್ತ್ರಿಗೆ ರುಮ್ಮನೆ ಕೋಪಬಂತು. ಅರ್ಧ ಬಾಟ್ಲಿ ಷರಾಬು ಹಾಕಿಕೊಂಡು ಬಿಗಿಯಾಗಿದ್ದ ಅವನು ಕಡು ಕೋಪದಿಂದ ಕತ್ತಿ ತೆಗೆದುಕೊಂಡೆದ್ದು ಆಳುಗಳೆಲ್ಲರನ್ನೂ ಕೂಗಿ ಕರೆದ.

"ನೋಡ್ರೋಲೆ, ಆ ಬೇವರಿಸಿ ಸೂಳೇಮಕ್ಕಳಿಗೆ ನಿನ್ನೆ ಗಲಿತ ಬಿದ್ದಿದ್ದು ಸಾಲಲಿಲ್ಲಾಂತ ಕಾಣ್ತದೆ. ಪೋಕ್ರಿ ಹುಡುಗಾಟ ಸುರೂ ಮಾಡಿದಾರೆ. ಇವತ್ತು

ಮಾತ್ರ ಆ ಸೂಳೇಮಕ್ಳು ಸಿಕ್ರೆ ಟೇಸನ್ನಿಗೂ ಇಲ್ಲ ಮನೆಗೂ ಇಲ್ಲ. ಅವರು ಎಲ್ಲಿ ಸಿಕ್ರೋ ಅಲ್ಲೇ ಹೊಡೆದು ಕೈಕಾಲು ಮುರ್ದೇ ಬಿಡ್ರಿ. ಆಮೇಲೆ ಸಾವ್ಕಾರ್ರಿಗೆ ವರ್ತಮಾನ ಕೊಡಾನ. ಅಲ್ಲೇ ತೆವಳಿಕೊಂಡು ರಾತ್ರಿ ಎಲ್ಲಾ ಬಿದ್ದಿರ್ಲಿ. ತಾಕತ್ತಿಲ್ಲದ ಸೂಳೇಮಕ್ಳು ಕತ್ಲಾಗಿ ನಿಂತು ಕಲ್ಲು ಹೋಡೀತಾರಲ್ಲ. ಇವರನ್ವನಾ ಹಡ."

ಆಳುಗಳೆಲ್ಲಾ ಮೇಸ್ತ್ರಿ ಮಾತು ಕೇಳಿದರು. "ನಿನ್ನೆ ಹಿಡುಕೊಂಡಿದ್ದೋರನ್ನ ಸಾವ್ಕಾರ್ರು ಬಿಟ್ಟುಬಿಟ್ರಲ್ಲಾ!" ಎಂದು ಒಂದಿಬ್ಬರು ಗೊಣಗಿಕೊಂಡರು. ಅವರೆಲ್ಲಾ ತೂರಾಡುತ್ತಾ ಎಡುವುತ್ತಾ ಸ್ಟೋರಿಗೆ ನುಗ್ಗಿ ಕೊಡಲಿ ಹಾರೆ ಪಿಕಾಸಿ ಕಾವುಗಳನ್ನೆಲ್ಲಾ ಕಳಚಿಕೊಂಡರು.

ಅವರುಗಳೇ ಅಂಗಾಡಿಗೆ ಕತ್ತಲಲ್ಲಿ ದಂಡಧಾರಿಗಳಾಗಿ ಪ್ರತಿವ್ಯೂಹದ ಏಜೆಂಟರುಗಳಂತೆ ಕಾಣಿಸಿಕೊಂಡವರು. ಅಂಗಾಡಿ ಅನುಮಾನಾಸ್ಪದವಾಗಿ ನಡೆದುಕೊಳ್ಳುದೆ ಸೀದಾ ನಡೆದು ಬಚಾವಾದ. ಎಲ್ಲಿಯಾದರೂ ಬಗ್ಗಿ ಕಲ್ಲು ಗಿಲ್ಲು ತಗೊಂಡಿದ್ದರೆ ಕೆಸರೂರಿನ ಹಾದಿಯಲ್ಲಿ ಮುರಿದ ಕೈಕಾಲುಗಳೊಡನೆ ತೆವಳುತ್ತಾ ನಡೆಯಬೇಕಾಗುತ್ತಿತ್ತು.

ಅಳುಗಳು ಧಡಧಡ ತೋಟದಲ್ಲೆಲ್ಲ ಓಡಾಡಿದರು. ಕಸ ತರಗೆಲೆಗಳ ಮೇಲೆಲ್ಲಾ ಜರ ಬರ ಸದ್ದು ಮಾಡಿಕೊಂಡು ನುಗ್ಗಾಡಿದರು. ಕಲ್ಲು ಹೊಡೆಯುತ್ತಿದ್ದ ಕಳ್ಳರ ಆಪ್ಪ ಅಮ್ಮಂದಿರ ಅಂಗೋಪಾಂಗಗಳ ಮೇಲೆಲ್ಲಾ ಬಯ್ಗಳದ ಮಳೆಗೆರೆದರು.

ಒಂದೆರಡು ಕಂತ್ರಿ ನಾಯಿಗಳು ಕೃಷ್ಣೇಗೌಡನ ಮನೆಯ ಮುಸುರೆಗಾಗಿ ಕಾಯುತ್ತಾ ಕುಳಿತಿದ್ದುವು ಆಳುಗಳ ಗಲಭೆಗೆ ಎದ್ದು ಓಡಿದವು. ತಕ್ಷಣ ಕೆಲವರು "ಅಲಲಲಲ ಇಲ್ಲೆಲ್ಲೋ ಓಡಿದರಲ್ಲೊ ಬೇವರ್ಸಿ ಸೂಳೇಮಕ್ಕಳು" ಎಂದು ಕೂಗಿಕೊಂಡು ಓಡಿ ತೋಟದಗಲಕ್ಕೂ ಚೆದುರಿದ್ದ ಆಳುಗಳೆಲ್ಲಾ ಗಾಬರಿಯಿಂದ ಓಡಿಬರುವಂತೆ ಮಾಡಿದರು. ಆ ನಾಯಿಗಳು ಇವರ ಕೈಗೂ ಸಿಕ್ಕಲಿಲ್ಲ. ಕಣ್ಣಿಗೂ ಕಾಣಿಸಲಿಲ್ಲ.

ಎಲ್ಲಾ ಓಡೋಡಿ ಬಂದು ಏದುಸಿರು ಬಿಡುತ್ತ ನಿಂತರು. ಕೂಗಿದವ "ಬೇವರಸಿಗೋಳು ಓಡೋದ್ರಲ್ಲ" ಎಂದ.

"ಏನ್ಮಾಡೋದೋ ಹಿಂಗೆ ಹಿಡಿಯಾಕೆ ಹೋದರೆ ಓಡೋಗೋ ಹಂಗಿದ್ರೆ ಗೌಡ್ರಿಗೆ ಹೇಳಿ ಒಂದು ಕೋವಿ ಈಡು ಉಡಾಸಿ ಬಿಡಬೇಕಾಗುತ್ತೆ" ಎಂದು ಒಬ್ಬ ಹೇಳಿದ.

"ಏ ಹೋಗೋ ಹೋಗೋ. ಈ ಪೋಲಿ ಮುಂಡೆಗಂಡ್ರು ಶಾಲೆ ಮಕ್ಕಳನ್ನ ಹಿಡಿಯಾಕಾಗ್ದೆ ಈಡು ಉಡಾಸಿ ಬಿಡ್ತಾನಂತೆ? ಹಾದೀ ಬೀದೀಲಿ



ಹೋಗೋರಿಗೆ ಪ್ರಾಣ ತೆಗದು ನಮ್ಮೇಲೆ ಖೂನಿ ಕೇಸು ಎಳಕೊಳ್ಳೋಣಾಂತ ಪಲಾನು ಮಾಡಿದ್ದೀಯಾ?

"ಮತ್ತಿನ್ನೇನು! ಈಗ ಅದೆಲ್ಲಾ ಬ್ಯಾಡ. ಸುಮ್ಮನೆ ತಿಕಮುಚ್ಚಿ ಕೊಂಡು ಹೋಗಿ ಸಾವ್ಕಾರ್ರಿಗೆ ಹೇಳನ. ಪೋಲಿಸ್ನೋರಿಗೆ ಕಂಪ್ಲೆಂಟು ಕೊಡ್ಲಿ. ಅವರು ನಾಕು ದಿನ ಗಸ್ತು ತಿರುಗಿದರೆ ಒಬ್ಬ ಹುಡುಗನೂ ಇತ್ಲಾಗೆ ಸುಳಿಯಾದಿಲ್ಲ."

"ಹೌದು ಕಣ್ರೋ ಯಾರಾರು ಹೋಗಿ ಸಾವ್ಕಾರರಿಗೆ ವರ್ತಮಾನ ಕೊಡ್ರಿ."

ಅಂತೂ ಇಂತೂ ಇದೇತರ ನೂರಾರು ಅಭಿಪ್ರಾಯ ಮಾತಾಡಿ ಕೊನೆಗೆ ಸಾವ್ಕಾರ್ರಿಗೆ ತಿಳಿಸಿ ಬಿಡೋಣವೆಂಬ ಅಭಿಪ್ರಾಯಕ್ಕೆ ಬಂದರು. ಮಾಯ್ಲು ಮೇಸ್ತ್ರೀ. "ಹೋಗಿ ಸಾವ್ಕಾರ್ರಿಗೆ ಹೇಳಿ ಬಾ" ಎಂದು ಪೊಂಕ್ರನಿಗೆ ಹೇಳಿದ.

ಅದಕ್ಕೆ ಅವನು "ನಾನು ಒಬ್ಬನೇ! ಇಷ್ಟೊತ್ನಲ್ಲಿ! ನನ್ನ ಜೊತೆ ಯಾರಾದರೂ ಬರ್ಲಿ ಮಾರಾಯ! ಆ ಸೂಳೇಮಕ್ಕಳು ಎಷ್ಟು ಜನ ಇದ್ದಾರೋ? ಏನೇನು ಹತಾರು ತಂದಿರ್ತಾರೋ!" ಎಂದು ಹೆದರಿಕೆ ವ್ಯಕ್ತಪಡಿಸಿದ.

ಒಬ್ಬ ಒಳ್ಳೆ ಷರಾಬಿನ ಗರಂನಲ್ಲಿದ್ದವನು "ತಥ್ ಹೆದರುಪುಕ್ಲ ಸೂಳೇಮಗನೆ! ಗಂಡ್ಸಂತೆ ಇವ. ನಡೀ ಬರ್ತೀನಿ. ಹೋಗಿ ಹೇಳಿಬರಾನ" ಎಂದು ಅವನೊಡನೆ ಹೊರಡಲು ಸಿದ್ಧನಾದ. ಅವನಿಗೆ ಒಳಗೊಳಗೆ ಈ ಕತ್ತಲಲ್ಲಿ ಗಸ್ತು ತಿರುಗೋದರ ಬದಲು ಅ ಕಡೆ ಪೇಟೆ ತಿರುಗಾಡಿಕೊಂಡು ಬರೋದೆ ಒಳ್ಳೆಯದೆನ್ನಿಸಿತ್ತು.

ಪೋಂಕ್ರನಿಗೆ ತನ್ನನ್ನು ಹೆದರುಪುಕ್ಕಲ ಎಂದು ಎಲ್ಲರೆದುರು ಕರೆದುದಕ್ಕೆ ಕೊಪ ಬಂತು. "ಹೆದರುಪುಕ್ಲಾಂತಿಯಲ್ಲ. ನಿನ್ನೆ ಯಾತರ ಹೊಡ್ತಾ ಕೊಟ್ರು ನೆನಸಿಗಾ! ಹುಡುಗ್ರಂತೆ ಹುಡುಗ್ರು! ಹಾರಿ ಹಾರಿ ಹೊಟ್ಟೆಗೇ ಒದ್ರು! ರಟ್ಟೇ ಮುರಿಯಾ ಹಂಗೆ ಮುಷ್ಟೀಲಿ ಕೊಟ್ರು! ಬೇವರಸಿ ಸೂಳೇಮಕ್ಳು. ನಿನ್ನೆ ಸೌಕಾರ್ರು ಬರದಿದ್ರೆ ಅವ್ರಲ್ಲಿ ಒಬ್ಬನ್ನಾದ್ರು ಕೊಂದೇ ಹಾಕಬೇಕಂತ ನಿಚ್ಚಯಿಸಿದ್ದೆ" ಎಂದ.

"ಮತ್ತೆ ಅಂತವ ಯಾಕೆ ಈಗ ಒಬ್ನೇ ಹೋಗಾಕೆ ಹೆದರಿ ಹೇತುಗತೀಯಾ! ಎಲ್ಲಾ ಬಾಯಲ್ಲಿ ಬಡಾಕಿ ಹೊಡೆಯೋರೇ. ನಡಿ ನಡಿ ಇರ್ಲಿ" ಎಂದು ಚೇಂಕ್ರ ಹೇಳುತ್ತಾ ಪೊಂಕ್ರನೊಡನೆ ಪೇಟೆ ಕಡೆಗೆ ಕಾಲು ಹಾಕಿದ.

ಅಂಗಾಡಿ ಆಗತಾನೇ ಕೆಸರೂರಿನ ಸಂಶೋಧನ ಕೇಂದ್ರದಿಂದ ನಡೆದು ಬರುತ್ತಿದ್ದ. ಅವನನ್ನು ನೋಡಿದ ಚೇಂದ್ರ ಪೊಂಕ್ರ ಇಬ್ಬರೂ ಅವನೇ ಕಲ್ಲು ಹೊಡೆಯುವ ಕಳ್ಳ ಇರಬಹುದೇನೋ ಎಂದು ದೂರದಲ್ಲಿ ಮರೆಯಾಗಿ ನಿಂತರು. ಆತ ಮುಂದೆ ಹೋದನಂತರ ಕೊಂಚ ದೂರದಲ್ಲಿ ಅವನನ್ನೇ ಹಿಂಬಾಲಿಸುತ್ತಾ

ಪರೀಕ್ಷಿಸಿದರು. ಆದರೆ ಅಂಗಾಡಿ ತನ್ನ ಪಾಡಿಗೆ ತಾನು ಸರಸರ ನಡೆಯುತ್ತಾ ಅವರನ್ನು ನಿರಾಶೆಗೊಳಿಸಿದ. ಅವನು ಮುಂದೆ ಹೋದ ಅನಂತರ ಇವರು ಮಾತಿಗೆ ಶುರುಮಾಡಿಕೊಂಡರು.

"ಈ ಕಾಲೇಜು ಹುಡುಗರಿಗೆ ಏನು ಪೊಗರು ಹೇಳೋ. ಸುಮ್ಮನೆ ಸಿನಿಮಾ ನಾಟಕ ನೋಡಿಕೊಂಡು ಹೋಟ್ಲಾಗೆ ಚುರುಮುರಿ ತಿಂಡಿ ತಿಂದುಕೊಂಡು ಇರೋದು ಬಿಟ್ಟು ಈ ಕತ್ಲಾಗೆ ಮನೇ ಮೇಲೆ ಕಲ್ಲು ಎಸೆಯಾಕೆ ಹಿಡಿದಿದಾರಲ್ಲಾ" ಎಂದ ಪೊಂಕ್ರ.

"ಎಲ್ಲಾ ನಮ್ಮ ಗೌಡರ ಮಗಳ ದೆಸೆಯಿಂದ ಕಣೊ. ಅವಳೂ ಆ ಕಾಲೇಜಿನಾಗೇ ಓದುತ್ತಿರೋದು ನೋಡು."

"ಅವಳೇನ್ಮಾಡ್ತಳೋ? ಈ ಹುಡುಗರಿಗೆ ಬಂದು ಕಲ್ಲು ಹೊಡೆಯಾಕೆ ಹೇಳಿಕೊಟ್ಟಿದ್ದಾಳ?"

"ಹಂಗಲ್ಲಾ ಕಣೋ ಅವಳು ಒಂಥರದ ಹುಡುಗಿ, ಅವಳನ್ನು ನೋಡಿದರೆ ಹುಡುಗರಿಗೆ ಹಂಗಾಗ್ತದೆ. ನಾವು ಈ ತೋಟಕ್ಕೆ ಬರ ಮುಂಚೆ ಒಬ್ಬ ರೈಟ್ರ ಹುಡುಗ ಕೊಡಗರೋನು ಇದ್ನಂತೆ, ಇವಳ್ನ ನೋಡಿ ನೋಡಿ ಅವನಿಗೆ ತಲೇ ಕೆಟ್ಟು ಹುಚ್ಚೇ ಹಿಡೀತಂತೆ!"

"ನಾನು ಕೇಳಿದೀನಿ ಇದನ್ನೆಲ್ಲಾ. ಅಷ್ಟೊಂದು ಇಸ್ವಾಸದಲ್ಲಿ ಒಬ್ಬೇ ಮಗಳನ್ನು ಸಾಕಿದಾರೆ. ಅವಳು ಚಾಕ್ರಿಗಿದ್ದೋನ ಜೊತೆ ಚಕ್ಕಂದ ಆಡ್ತಾಳಂತ ಹೇಳ್ತಾರಲ್ಲ!"

"ಯಾಕಾಡಬಾರ್ದು, ಗೌಡ್ರು ಚಾಕ್ರಿಗಿದ್ದೋಳ ಜೊತೇನೆ ಚಕ್ಕಂದ ಆಡ್ತಾರಂತೆ!"

"ದೊಡ್ಡೋರ ವಿಶ್ಯಾ ನಮಗ್ಯಾಕೋ ಮಾರಾಯ? ನಮ್ಮ ಹೆಂಡ್ರ ಸಾವಾಸಕ್ಕೆ ಬರ್ದಿದ್ರೆ ಸಾಕು."

"ಹೋಗೋ ಹೋಗೋ ಈ ಗಬ್ಬು ಮುಂಡೇರ ಹತ್ರ ಯಾರು ಬರ್ತಾರೆ."

ಪೊಂಕ್ರ ತನ್ನ ಹೆಂಡತಿಗೂ ಸೇರಿಸಿ ಬಯ್ದದ್ದರಿಂದ ಚೇಂಕ್ರ ಅದನ್ನು ಅವಮಾನವೆಂದು ತಗೊಳ್ಳದೆ ಸುಮ್ಮನಾದ.

"ಹಂಗಾರೆ ಮತ್ಯಾರು ಕಲ್ಲು ಹೊಡೀರಾರೋ ಮಾರಾಯ?" ಕೊಂಚ ದೂರ ಮಾತಿಲ್ಲದೆ ನಡೆದ ಚೇಂಕ್ರ ಮತ್ತೆ ಅನುಮಾನ ವ್ಯಕ್ತಪಡಿಸಿದ.

"ನೋಡೋ ಚೇಂಕ್ರ ಮತ್ತೆ ನಾನು ಹೀಗೆ ಹೇಳಿದೇಂತ ಹೆದರುಪುಕ್ಲಾ ಅನ್ನಾಕೂಡದು. ನಾನು ಯಾರಿಗೂ ಯಾವುತ್ತಿಗೂ ಹೆದರಿದೋನೇ ಅಲ್ಲಾ, ತಿಳ್ಕಾ! ಕಳ್ಳ ಇರ್ಲಿ, ಕಾಕ ಇರ್ಲಿ, ಡಕಾಯ್ತ ಇರ್ಲಿ. ಅವ ನರ ಮನುಷ್ಯ ಆಗಿರೋವರೆಗೆ ನಾನು ಹೆದರೋನೇ ಅಲ್ಲ. ಇದು ಎಲ್ಲಾರೂ ದೆಯ್ಯದ ಕಾಟ ಆಗಿಲ್ದೆ ಇದ್ರೆ



ಸಾಕು!" ಎಂದ ಪೋಂಕ್ರ.

ಚೇಂಕ್ರನಿಗೆ ಹಠತ್ತಾಗಿ ಪೊಂಕ್ರ ಸೃಷ್ಟಿಸಿದ ಹೊಸ ಆಯಾಮ ಗಾಬರಿ ತಂದಿತು.

"ಏನ್ಮಾತಾಡ್ತಿಯೋ! ಕಾಲೇಜು ಹುಡುಗರಲ್ಲೇನೋ? ನಿನ್ನೆ ತಾನೆ ಹಿಡ್ದಿದೀವಿ? ಅಂತಾದರಲ್ಲಿ ದೈಯ್ಯಾಂತೀಯಲ್ಲ, ಹೆಂಗಸರು ಮಕ್ಳೂ ಇರಾ ಜಾಗ. ನೀ ಹಿಂಗೆ ಹೇಳಿದರೆ ಎಲ್ಲಾ ಮನೇ ಬಿಟ್ಟು ಓಡೋಗ್ತಾರೆ."

"ಮತ್ತೆ ಕಲ್ಲು ಸೇತುವೆ ಹತ್ರ ಪಿಶಾಚಿ ಓಡಾಡ್ತದಂತಲ್ಲಾ!"

"ತುತ್. ಸೂಳೇಮಕ್ಳು ಆ ಸುಲೇಮಾನ್ ಬ್ಯಾರಿ ಕಡೆಯೋರದ್ದೇ ಅದೆಲ್ಲಾ ಕಿತಾಪತಿ. ಗಂಧ ಕದ್ದು ಸಾಗಿಸೋಕಂತ ಅವರೇ ಸುದ್ದಿ ಹಬ್ಬಿಸಿದ್ದು. ಸೇತುವೇ ಕೆಳಗೆ ಮರಳು ಲೋಡು ಮಾಡಸ್ತೀವಿಂತ ಲಾರಿ ನಿಲ್ಲಿಸಿ ಗಂಧ ತುಂಬ್ತಿದ್ರಂತೆ. ಯಾರೂ ಅತ್ಲಾಗೇ ಬರದೆ ಇರ್ಲೀಂತ ಹಂಗೆ ಸುದ್ದಿ ಹಬ್ಬಿಸಿದ್ರಂತೆ!"

"ದೆಯ್ಯ ಗಿಯ್ಯಾಂತ ಕತೆ ಕಟ್ಟೋರೆಲ್ಲಾ ಇಂತಾ ಕಳ್ಳಸೂಳೇ ಮಕ್ಳೇ!"

"ಮತ್ತಿನ್ನೇನು ದೆಯ್ಯಾ ಗಿಯ್ಯಾ ಎಲ್ಲಾ ನಾ ಕಂಡಹಾಗೆ ಬರೇ ಢೋಂಗಿ ಅಲ್ಲೇನೋ!"

ಇಬ್ಬರೂ ತಮ್ಮ ಧೈರ್ಯಕ್ಕೇ ಎಂಬಂತೆ ಗಟ್ಟಿಯಾಗಿ ಹೇಳಿ ಕೊಂಡರು.

"ಅರೇ! ರಸ್ತೇಲಿ ಯಾರೂ ಕಾಣೋದೇ ಇಲ್ವಲ್ಲೋ!" ಎಂದ ಪೊಂಕ್ರ. ಚೇಂಕ್ರ ಮಬ್ಬು ಬೆಳಕಿನಲ್ಲಿ ಬೆಳ್ಳಗೆ ಕಾಣುತ್ತಿದ್ದ ರಸ್ತೆಯುದ್ದಕ್ಕೂ ನೋಡಿದ. ಯಾವೊಂದು ವ್ಯಕ್ತಿಯೂ ಕಾಣಲಿಲ್ಲ. ಚೇಂದ್ರ ವ್ಯಾಕುಲಗೊಂಡಂತೆ ಪೋಂಕ್ರನ ಕಡಗೆ ನೋಡಿದ.

"ನೋಡೋ ಚೇಂಕ್ರ ಅದಕ್ಕೇ ಹೇಳಿದ್ದು ನೋಡು, ಯಾವ ನರಮನ್ಸ್ ಇಷ್ಟು ಬೇಗ ನಡೆದು ಕಣ್ಣಿಗೆ ಕಾಣದಂತೆ ಹೋಗಿಬಿಡ್ತಾನೆ?"

"ಮತ್ತೇನದು ನಮ್ಮೆದುರು ಆವಾಗ ಹೋಗಿದ್ದು."

"ಅಂತರಪಿಶಾಚಿ ಇರಬೇಕು."

"ಆದರೆ ಅಂತರ್‌ಪಿಶಾಚಿಗೆ ಕಾಲು ತಿರ್ಗಾಮುರ್ಗಾ ಇರ್ತವಂತೆ ಕಣೋ. ನಾವು ಅತ್ಲಾಕಡೆ ನೋಡಲೇ ಇಲ್ಲ. ಅದು ಬಂದ್ರ ಒಂದೇ ಉಪಾಯ. ಸುತ್ತಾ ಉಚ್ಚೆ ಹುಯ್ದು ಮಧ್ಯ ನಿಂತು ಬಿಡಬೇಕಂತೆ. ನರಮನ್ಸರ ಉಚ್ಚೆ ದಾಟದಿಲ್ಲವಂತೆ ಅಂತರ ಪಿಶಾಚಿ."

"ಉಚ್ಚೇ ಹುಯ್ಯಾದು ಹ್ಯಾಂಗೋ ಮಾರಾಯ? ನಮಗೆ ಚಡ್ಡಿಲೆ ಎಲ್ಲಾ ಕಾಲಿಯಾಗಿರ್ತದಲ್ಲಾ! ಅದೂ ಅಲ್ದೆ ಹೆಣ್ಣೆಂಗಸರ ಎದುರೂ ಬಂದರೆ ಅವರೇನು

ಮಾಡಬೇಕು ಹೇಳು"ಎಂದು ಪೊಂಕ್ರ ಪಿಶಾಚಿ ಪ್ರತಿಬಂಧಕೋಪಾಯದ ತಾಂತ್ರಿಕ ತೊಂದರೆಗಳನ್ನೆಲ್ಲಾ ಪರ್ಯಾಲೋಚಿಸತೊಡಗಿದ. ಇಬ್ಬರೂ ಕೆಲವು ಕ್ಷಣಗಳ ಹಿಂದೆ ದೆವ್ವ ಇಲ್ಲವೇ ಇಲ್ಲ ಎಂದು ಹೇಳಕೊಂಡವರು ಇದ್ದಕ್ಕಿದ್ದಂತೆ ದೆವ್ವದ ಭಯಪೀಡಿತರಾಗಿ ಸರಸರ ಕೆಸರೂರಿನತ್ತ ಕಾಲು ಹಾಕತೊಡಗಿದರು.





## ಅಧ್ಯಾಯ ೧೪

ಸಂಶೋಧನ ಕೇಂದ್ರದ ಕೀಟಶಾಸ್ತ್ರಜ್ಞ ಸಿದ್ದಪ್ಪ, ಪ್ಲಾಂಟ್ ಪೆಥಾಲಜಿಸ್ಟ್ ಹೆಗ್ಡೆ ಇಬ್ಬರಿಗೂ ಡಾ॥ ಜೋಗಿಹಾಳರ ಬಗ್ಗೆ ಅಗಾಧವಾದ ಗೌರವ ಅಭಿಮಾನ ಇತ್ತು. ಆದರೆ ಈಗೀಗ ಜೋಗಿಹಾಳರ ಹೆಸರು ಕೇಳಿದರೆ ಸಾಕು ಕಿರಿಕಿರಿ ಆರಂಭವಾಗುತ್ತಿತ್ತು. ಪೋಲೀಸರು ಅವರ ಮರಣಾನಂತರ ಇವರನ್ನು ಪದೇ ಪದೇ ಕರೆಸಿ ತೊಂದರೆ ಕೊಟ್ಟಿದ್ದೇ ಇದಕ್ಕೆ ಕಾರಣ.

ಮಾರನೇ ದಿನ ಪಾಟೀಲರು ಇವರನ್ನು ಕರೆಸಿ ಜೋಗಿಹಾಳರ ಸಂಶೋಧನೆಯ ನೋಟ್ಸುಗಳೆಲ್ಲಾ ಎಲ್ಲಿ ಎಂದು ಸಂಶೋಧನ ಕೇಂದ್ರದ ಅಲಮಾರುಗಳನ್ನೆಲ್ಲಾ ತಪಾಸಣೆ ಮಾಡತೊಡಗಿದಾಗ ಇಬ್ಬರೂ ಒಳಗೊಳಗೆ "ಈಗ ಇವನಿಗೆ ಜೋಗಿಹಾಳ್ ಜ್ಞಾಪಕ ಬಂದನೋ!" ಎಂದು ಗೊಣಗಿಕೊಂಡರು. ಆದರೂ ಅವರೆಲ್ಲಾ ಸೇರಿ ತಾವು ಜೋಗಿಹಾಳರೊಡನೆ ನಡೆಸಿದ್ದ ಸಂಶೋಧನೆಯ ನೋಟ್ಸುಗಳು, ಗ್ರಾಫ್‌ಗಳು, ಸ್ಕೆಚ್‌ಗಳು, ಸ್ಲೈಡ್‌ಗಳು, ಫೋಟೋಗಳು ಎಲ್ಲವನ್ನೂ ರಾಶಿರಾಶಿಯಾಗಿ ಹೊರತೆಗೆದುರು. ಎಲ್ಲಾ ಸಿಕ್ಕಾಪಟ್ಟೆ ಕಲಸುಮೇಲೋಗರವಾಗಿ ಕುಳಿತಿದ್ದವು.

"ಏನ್ರಿ ಈ ನೋಟ್ಸುಗಳಲ್ಲಿರೋ ವಿಷಯಗಳಿಗೆ ಕಡಿಮೆ ಅಂದರೆ ಎರಡು ಮೂರು ಕೋಟಿ ರೂಪಾಯಿ ಸರ್ಕಾರದ ಹಣ ಖರ್ಚಾಗಿದೆ ಗೊತ್ತೋ, ಇವನ್ನೆಲ್ಲಾ ತೆಗೆದು ಇಲ್ಲಿ ತುರುಕಿ ಹಾಳು ಮಾಡಿದೀರಲ್ಲಾ! ಏನ್ರಿ ಹೇಳೋದು ನಿಮಗೆ" ಎಂದು ಪಾಟೀಲರು ರೇಗಾಡಿದರು.

"ಇವರು ಬಂದು ಇಷ್ಟು ದಿನ ಆದರೂ ಇತ್ತ ಕಣ್ಣು ಹಾಯಿಸದೆ ನಮಗೆ ಬಯ್ತಾರಲ್ಲ" ಎಂದು ಹೆಗ್ಡೆ ಗೊಣಗಿಕೊಂಡ. ಜೋಗಿಹಾಳರೊಡನೆ ಕೆಲಸ ಮಾಡಿದ್ದ ಅವನಿಗೆ ಇದರಲ್ಲೇನೂ ಅಂಥ ಉಪಯುಕ್ತ ಮಾಹಿತಿ ಸಿಗಲಾರದೆಂದೇ ನಂಬಿಕೆ. ಅದನ್ನು ಪಾಟೀಲರಿಗೆ ಹೇಳಿದ್ದಕ್ಕೆ ಅವರು ರೇಗಿ "ಅಲ್ರೀ ಕೊನೇಪಕ್ಷ ಅದೇ ಪ್ರಯೋಗಗಳನ್ನು ಮುಂದೆ ಬರೋರು ಮತ್ತೆ ಮತ್ತೆ ಪುರನರಾವರ್ತನೆ ಮಾಡದೆ ಇರೋದಕ್ಕಾದರೂ ಅದರಿಂದ ಉಪಯೋಗ ಆಗೋದಿಲ್ಲೇನ್ರಿ" ಎಂದು ದಬಾಯಿಸಿದರು.

ಅವರೆಲ್ಲಾ ಅದನ್ನು ಗುಡ್ಡೆ ಮಾಡಿಕೊಂಡು ಸರಿಯಾದ ಅನುಕ್ರಮದಲ್ಲಿ ಜೋಡಿಸಲು ಯತ್ನಿಸುತ್ತಿರಬೇಕಾದರೆ ಅಂಗಾಡಿಯಿಂದ ಫೋನ್ ಬಂತು. ಪಾಟೀಲರು ಫೋನ್ ತಗೊಂಡು "ಹಲೋ" ಎಂದರು. ಅಂಗಾಡಿ ಫೋನ್‌ನಲ್ಲಿ ತಾನು ಆ ಕ್ಷೇತ್ರದ ಮಾಜಿ ಎಂ.ಪಿ. ಶಾಂತಗೌಡರನ್ನು ಕಂಡುದಾಗಿಯೂ ಅವರಿಂದ ಹಲವಾರು ಉಪಯಕ್ತ ಮಾಹಿತಿಗಳನ್ನು ತಂದಿರುವುದಾಗಿಯೂ ಅದನ್ನು ಚರ್ಚಿಸಲು ಕೇಂದ್ರಕ್ಕೆ ಬರುವುದಾಗಿ ಹೇಳಿದ.

ಹೆಗ್ಡೆ ಸಿದ್ದಪ್ಪ ಇಬ್ಬರೂ ಅಂಗಾಡಿ ಹೆಸರು ಕೇಳಿದೊಡನೆ ಪಾಟೀಲರು ಈಗೇಕೆ ಜೋಗಿಹಾಳರ ನೋಟ್ಸುಗಳನ್ನು ಹುಡುಕಿಕೊಂಡು ಲಾಟರಿ ಹೊಡೆಯುತ್ತಿದ್ದಾರೆಂದು ಅರ್ಥವಾಯಿತು.

"ಹೆಗ್ಡೆ, ಏಲಕ್ಕಿ ಬೋರ್ಡ್ ಇಂಟೆಲಿಜೆನ್ಸ್ ಆಫೀಸರ್ ಕಣಯ್ಯ ಆತ. ಅವನು ಕಳಿಸೋ ರಿಪೋರ್ಟು ನೇರವಾಗಿ ಕೇಂದ್ರ ಕೃಷಿ ಮಂತ್ರಿಗಳ ಟೇಬಲ್ಲಿಗೇ ಹೋಗ್ತದಂತೆ. ಯಾಕೆ ಹೇಳಿದೇ ಅಂದರೆ ಅವನು ಹೇಳೋದನ್ನ ಕೇಳೋದನ್ನ ನಾವು ಗಂಭೀರವಾಗಿ ಪರಿಗಣಿಸಬೇಕು ಅಂತ" ಎಂದು ಪಾಟೀಲರು ಹೇಳಿದರು.

"ಮೊನ್ನೆ ಕಾಫಿಬಾರಿನಲ್ಲಿ ಕೂತುಕೊಂಡು ನಾನು ಸಿದ್ದಪ್ಪಾ ಹರಟೆ ಕೊಚ್ಚುತ್ತಿರಬೇಕಾದರೆ ಆತ ಬಂದಿದ್ದಾ ಸಾರ್. ನಮ್ಮ ಜೊತೆ ಕೂತುಗೊಂಡು ಹರಟೆ ಹೊಡೆದ, ಕೇಂದ್ರ ಕೃಷಿ ಮಂತ್ರಿಗಳ ವಿಷ್ಯ ಬಾಯಿ ಬಿಡಲಿಲ್ಲವಲ್ಲಾ" ಎಂದ ಹೆಗ್ಡೆ.

"ನಿಮಗ್ಯಾಕೆ ತಿಳಿಸ್ತಾನೆ! ಅದೆಲ್ಲಾ ಕಾನ್‌ಫಿಡೆನ್ಷಿಯಲ್ ವಿಷ್ಯಾ ಅಲ್ವೇನ್ರಿ. ನಿನ್ನೆ ಸಾಯಂಕಾಲ ನನ್ನತ್ರ ಬಂದಿದ್ದ. ನಾನಂತೂ ಎಲ್ಲಾ ಹೇಳಿದೆ. ಈ ದೇವಸ್ಥಾನ ಮಸೀದಿ ಗಲಾಟೆ, ಲೋಕಲ್ ಪಾಲಿಟಿಕ್ಸು, ನಮ್ಮ ವಿಜ್ಞಾನಿಗಳ ರಾಜಕೀಯ ಎಲ್ಲಾ. ಅವಗ ಬಾಯಿಬಿಟ್ಟ, ಮಿನಿಸ್ಟ್ರಿಯಿಂದಾನೆ ತನಿಖೆ ಮಾಡೋದಕ್ಕೆ ಬಂದಿರೋದು ಅಂತ. ಅದಕ್ಕೇ ಕೊಂಚ ಹುಷಾರಾಗಿರಿ. ಹರಟೆ ಕೊಚ್ಚುತ್ತಾ ಏನೇನೋ ಮಾತಾಡಿ ತೊಂದರೆಗೆ ಸಿಕ್ಕಾಕಿಕೋ ಬೇಡ್ರಿ" ಎಂದು ಯಾವುದೋ ಗೋಪ್ಯ ಸಂಗತಿ ಹೇಳುವವರಂತೆ ಅವರಿಬ್ಬರಿಗೂ ಹುಷಾರಿ ಹೇಳಿದರು.

ಅಂಗಾಡಿ ಬರೋ ವೇಳೆಗೆ ಸಂಶೋಧನ ಕೇಂದ್ರ ತಳಿಶಾಸ್ತ್ರಜ್ಞ, ಬ್ರೀಡರ್ ಮಹಮದ್ ಕೂಡ ಅಲ್ಲಿದ್ದ.

ಅಂಗಾಡಿ ಬಂದಾಗ ಸ್ವಾಗತಿಸಿದ ಪಾಟೀಲರು "ನೋಡಿ ಜೋಗಿಹಾಳರ ನೋಟ್ಸುಗಳನ್ನೆಲ್ಲಾ ಈಗ ತಿರುವಿ ಹಾಕ್ತ ಇದ್ದೀವಿ. ನೀವು ಮೊನ್ನೆ ಇದನ್ನು ಜ್ಞಾಪಿಸದೆ ಇದ್ದರೆ ಇದೆಲ್ಲಾ ಕಸದಬುಟ್ಟೀಗೇ ಹೋಗ್ತಿತ್ತೋ ಏನೋ" ಎಂದರು.



"ಶಾಂತಗೌಡರು ಜೋಗಿಹಾಳರನ್ನು ವರ್ಗ ಮಾಡಕೂಡದಂತೆ ಶಿಫಾರ್ಸು ಮಾಡಿದರು ಅಂತ ನೀವು ಹೇಳಿದ್ರಲ್ಲಾ ಸಾರ್. ಅದಕ್ಕೇ ಇವತ್ತು ಬೆಳಿಗ್ಗೆ ಎದ್ದಕೂಡ್ಲೆ ಟಿಬಿಯಿಂದಾನೆ ಸೀದ ಅವರ ಮನೆಗೆ ಹೋದೆ. ಇಷ್ಟೊತ್ತೂ ಅಲ್ಲೆ ಇದ್ದೆ. ಏನ್ಮಾಡೋದು ಹೇಳಿ! ನನ್ನ ಗ್ರಾಚಾರ ಸರಿ ಇಲ್ಲ. ಅವರಿಗೆ ಉಬ್ಬಸ ವಿಪರೀತ. ಮಾತಾಡೋದಕ್ಕೆ ಕಷ್ಟ."

"ಏನಾದ್ರು ಉಪಯುಕ್ತ ಮಾಹಿತಿ ಸಿಗ್ತೇ ಅಂಗಾಡಿ. ಜೋಗಿಹಾಳರ ಕೈಕೆಳಗೆ ಕೆಲಸ ಮಾಡಿರೋರೇ ಇಲ್ಲಿರಬೇಕಾದ್ರೆ ಇನ್ನು ಹೊಸ ವಿಷ್ಯ ಏನು ತಿಳಿಸಿಯಾರು ಅನ್ನಿಸುತ್ತೆ ನನಗೆ."

"ಇಲ್ಲಾ ಸಾರ್, ಜೋಗಿಹಾಳರು ಅದೇನೋ ಹೆಚ್ಚಿಗೆ ಇಳುವರಿ ಕೊಡೋ ತಳಿ ರೂಪಿಸ್ತಾ ಇದ್ರೂ ಅಂತ ಹೇಳಿದರು ಅವರು" ಎಂದ ಅಂಗಾಡಿ. ಬ್ರೀಡರ್ ಮಹಮದ್ ಹೇಳಿದ "ನೋಡಿ ಮಿಸ್ಟರ್ ಅಂಗಾಡಿ ಈ ಸಂಶೋಧನ ಕೇಂದ್ರದ ತಳಿಶಾಸ್ತ್ರಜ್ಞ ನಾನು. ಅದಕ್ಕೆಲ್ಲಾ ನೀವು ನಮಗೆ ಕೇಳಿ ಸಾರ್. ಪಾಪ ಆ ರಾಜಕಾರಣಿಗಳನ್ನು ನೀವು ವಿಚಾರಿಸಿದರೆ ಏನು ಪ್ರಯೋಜನ. ಜೋಗಿಹಾಳರ ಜೊತೆ ಆರೇಳು ವರ್ಷ ಸತತ ಸಂಶೋಧನೆ ಮಾಡಿದೋನು ನಾನು. ಈ ಫೈಲುಗಳಿವೆಯಲ್ಲಾ ಅವೆಲ್ಲಾ ಅದೇ ರಿಕಾರ್ಡುಗಳು. ಸ್ವಲ್ಪ ಈ ವಿಷ್ಯ ವಿವರವಾಗಿ ತಿಳಿಸ್ತೇನೆ. ಕೂತ್ಕೋಳಿ."

"ಏಲಕ್ಕಿಯಲ್ಲಿ ಹೆಚ್ಚು ಇಳುವರಿ ಕೊಡೋ ಗಿಡ, ರೋಗನಿರೋಧಕ ಶಕ್ತಿ ಇರೋ ಗಿಡ. ಪ್ರತೀವರ್ಷ ಒಂದೇರೀತಿ, ಏರಿಳಿತ ಇಲ್ಲದೆ ಫಸಲು ಕೋಡೋ ಗಿಡ ಎಲ್ಲವನ್ನೂ ತಂದು ಇವೆಲ್ಲಾ ಗುಣಗಳೂ ಒಂದೆ ಗಿಡದಲ್ಲಿರೋ ತಳಿಯನ್ನು ಉತ್ಪತ್ತಿ ಮಾಡೋದಕ್ಕೆ ತುಂಬಾ ಪ್ರಯತ್ನ ಮಾಡಿದೆವು. ಏಲಕ್ಕಿ ಪರಕೀಯ ಪರಾಗಸ್ಪರ್ಶದಿಂದ ಮಾತ್ರವೇ ಕಾಯಿ ಆಗೋ ಗಿಡ. ಹಾಗಾಗಿ ತಯ್ಯಾರು ಮಾಡಿದ ಸಸಿಗಳಿಗೆ ಇಂಥದೇ ಗುಣ ಇರುತ್ತೆ ಅಂತ ಹೇಳಲು ಸಾಧ್ಯವಾಗದೇ ಹೋಯ್ತು. ಮತ್ತೆ ಹಳೇ ತೊಂದರೆ ಅವಗುಣಗಳೆ ಇರೋ ಸಸ್ಯ ಸಮುದಾಯ ಬಂತು. ಇದರಿಂದ ಜೋಗಿಹಾಳರು ಈ ದಿಕ್ಕಿನಲ್ಲಿ ಸಂಶೋಧಿಸೋದು ನಿರುಪಯುಕ್ತ ಅನ್ನೋ ತೀರ್ಮಾನಕ್ಕೆ ಬಂದರು.

"ಚೆನ್ನಾಗಿ ಫಸಲು ಕೊಡೋ ಗಿಡಗಳಿಂದಲೇ ಬೀಜ ತೆಗೆದು ಸಸಿ ಮಾಡಿ ಪರೀಕ್ಷೆ ಮಾಡಿದೆವು. ಅವುಗಳ ಬೀಜದಿಂದ ಬರೋ ಸಸಿಗಳ ನಡವಳಿಕೇನೂ ಯಥಾಪ್ರಕಾರವೇ ಇರುತ್ತೆ. ಎಲ್ಲೋ ಸಾವಿರಕ್ಕೆ ಒಂದು ನಾಲ್ಕಾರು ಗಿಡಗಳು ಪ್ರತಿ ವರ್ಷವೂ ಚೆನ್ನಾಗಿ ಫಸಲು ಕೊಡುತ್ತವೆ. ಮಿಕ್ಕವು ಪ್ರಯೋಜನವಿಲ್ಲ. ಆ

ಒಳ್ಳೇ ಗಿಡಗಳನ್ನೇ ಆರಿಸಿ ಅವುಗಳ ಬೀಜದಿಂದಲೇ ಸಸಿ ಮಾಡಿದೆವು. ಅವುಗಳ ಹಣೆ ಬರಹಾನೂ ಯಥಾಪ್ರಕಾರವೇ." ಬ್ರೀಡರ್ ಮಹಮದ್ ಜೋಗಿಹಾಳರ ಜೊತೆ ನಡೆಸಿದ ಸಂಶೋದನೆಯ ಸಾರವನ್ನು ಅವರಿಗೆ ನಿವೇದಿಸಿದ. ಅಂಗಾಡಿ ಮಿನಿಸ್ಟ್ರಿಗೆ ರಿಪೋರ್ಟ್ ಮಾಡುತ್ತಾನೆಂದೊ ಏನೋ ಏಲಕ್ಕಿಯ ಎದುರು ತಮ್ಮ ಸಂಶೋಧನೆಯ ಪ್ರಗತಿ ಕುಂಠಿತವಾಗಿ ಹೋಗಿದೆ ಎಂದು ಅಸಹಾಯಕರಾಗಿ ನಿವೇದಿಸಿಕೊಂಡರು. "ನೋಡಿ ಏಲಕ್ಕಿಯಲ್ಲಿರೋದು ಇದೇ ತೊಂದರೆ. ಪರಕೀಯ ಪರಾಗಸ್ಪರ್ಶದಿಂದ ಆಗೋ ಬೀಜ ಹೊಸ ತಳಿ ಮಾಡೋಕ್ಕೆ ಆಗೋಲ್ಲ. ಬಾಳೆ ಮರದ ಜಾತಿಗೆ ಸೇರಿದ ಗಿಡವಾದುದರಿಂದ ಕಸಿ ಕಟ್ಟೊದಕ್ಕೆ ಆಗೊಲ್ಲ. ಎಕರೆಗೆ ಹೆಚ್ಚು ಸಸಿ ನೆಟ್ಟು ಇಳುವರಿ ಹೆಚ್ಚಿಸೋಣೆಂದರೆ ಅವು ನೆಟ್ಟ ಮೂರು ವರ್ಷಕ್ಕೆ ಗರಿಷ್ಟ ಪ್ರಮಾಣ ಮುಟ್ಟಿದನಂತರ ಒಂದೇಸಮ ಗಿಡಗಳು ಒತ್ತೊತ್ತಾಗಿ ಬೆಳದು ಉತ್ಪತ್ತಿ ಇಳಿಮುಖವಾಗುತ್ತೆ. ಏಲಕ್ಕಿ ಸಂಶೋಧನೆ ಅಂದರೆ ಈಗ ದಾರಿ ಇಲ್ಲದ ಚಕ್ರವ್ಯೂಹದೊಳಗೆ ಸಿಕ್ಕಿಕೊಂಡ ಹಾಗಾಗಿದೆ" ಎಂದರು ಪಾಟೀಲರು.

ಅಂಗಾಡಿ ಅವರ ವಿವರಣೆಗಳನ್ನೆಲ್ಲಾ ಸಾವಕಾಶವಾಗಿ ಕೇಳಿಕೊಂಡು ನಿಟ್ಟಿಸಿರು ಬಿಟ್ಟು ಅನಂತರ ನಿಧಾನವಾಗಿ "ನೀವೆಲ್ಲಾ ನನ್ನಿಂದ ಒಂದು ತೀರಾ ಮುಖ್ಯ ವಿಷಯ ಮುಚ್ಚಿಡುತ್ತಾ ಇದ್ದೀರ. ಕೆಸರೂರಿನ ಹೈಬ್ರೀಡ್ ಬಗ್ಗೆ ನಿಮಗೇನೂ ಗೊತ್ತಿಲ್ಲವೆ? ಅದರ ಬಗ್ಗೆ ಏನು ಸಂಶೋಧನೆ ಮಾಡಿದ್ದೀರಾ? ಏಕೆ ಯಾರೂ ಅದರ ಬಗ್ಗೆ ಒಂದು ಚಕಾರವನ್ನೂ ಎತ್ತುತ್ತಿಲ್ಲ. ಜೋಗಿಹಾಳರು ಇದರ ಮೂಲಕ ಎಕರೆಗೆ ಒಂದು ಟನ್ ಉತ್ಪಾದನೆ ಯೋಜನೆ ಹಾಕಿಕೊಂಡಿದ್ರಂತಲ್ಲಾ ನಿಮಗೆ ಯಾರಿಗೂ ಆ ವಿಷ್ಯ ಗೊತ್ತೇ ಇಲ್ಲವೆ? ಎಕರೆಗೆ ಒಂದು ಟನ್ ಅಂದರೆ ಈಗಿನ ದರದಲ್ಲಿ ಮೂರು ಲಕ್ಷ ಆಯ್ತಲ್ಲಾ. ನಿಮಗೆ ಯಾರಿಗೂ ಇದರ ಬಗ್ಗೆ ಏನೂ ಗೊತ್ತಿಲ್ಲವೆ?" ಎಂದ.

"ಏನಂದ್ರಿ ಎಕರೆಗೆ ಒಂದು ಟನ್! ಕೆಸರೂರು ಹೈಬ್ರೀಡ್? ಇವತ್ತೇ ಮೊದಲು ನಾನು ಅದರ ಸಮಾಚಾರ ಕೇಳ್ತಿರೋದು. ಏನ್ರೀ ಮಹಮದ್" ಅಪ್ರತಿಭರಾದ ಪಾಟೀಲರು ಮಹಮದ್ ಕಡೆ ತಿರುಗಿ ಕೇಳಿದರು.

ಅಂಗಾಡಿ ಹೇಳಿದ "ಇದರ ಬಗ್ಗೆ ಶಾಂತಗೌಡರಿಂದ ಹೆಚ್ಚಿಗೆ ಮಾಹಿತಿ ತಗೊಳ್ಳೋದಕ್ಕೆ ಆಗಲಿಲ್ಲ, ಸಾರ್. ಆ ಮನುಷ್ಯನಿಗೆ ಆಸ್ತಮಾದ ದಮ್ಮು ವಿಪರೀತ ಆಗಿ ಒಂದು ಗಂಟೆ ದಮ್ಮು ಎಳೆದುಕೊಂಡು ಒಂದು ಪದ ಉಚ್ಚಾರಣೆ ಮಾಡ್ತಾ ಇದ್ರು. ಅವರನ್ನು ಮಾತಾಡಿಸೋದೆ ಒಂದು ಚಿತ್ರ ಹಿಂಸೆ. ಅವರನ್ನು ನೋಡ್ತನೋಡ್ತ ನನಗೇ ಉಬ್ಬಸ ಶುರುವಾದಂತಾಗಿ ಬರ್ತೀನಿ ಅಂತ ಹೇಳಿ ಈ ಕಡೆ ಬಂದೆ.



ಅವರೇ ಹೇಳಿದ್ದು ಕೆಸರೂರು ಹೈಬ್ರೀಡ್ ಸಮಾಚಾರ."

"ಇಂಥಾ ವಿಷಯದಲ್ಲೆಲ್ಲಾ ನಾವು ನಿಜಾ ಹೇಳೋದು ಒಳ್ಳೇದು. ನನಗಂತೂ ಸರಿಯಾಗಿ ಆ ವಿಷಯ ಗೊತ್ತಿಲ್ಲ. ಜೋಗಿಹಾಳರು ಕೆಸರೂರು ಹೈಬ್ರೀಡ್ ಅಂತ ಒಂದಷ್ಟು ದಪ್ಪ ಏಲಕ್ಕಿಕಾಯಿ ತಂದು ಬೀಜ ಮಾಡಿ ಅದರಿಂದ ಒಂದು ಎಕರೆಗೆ ಏಲಕ್ಕಿ ಸಸಿ ಹಾಕಿಸಿದರು. ಈಗಲೂ ಆ ಪ್ಲಾಟು ಇದೆ. ಅದರ ಹಣೇಬರಾನು ಮಿಕ್ಕ ಏಲಕ್ಕಿ ಹಾಗೇ ಆಯ್ತು. ಅದಕ್ಕೆ ಜೋಗಿಹಾಳರು ಆಮೇಲೆ ಈ ಕ್ರಮವೇ ಸರಿ ಇಲ್ಲ ಅಂತ ಉಪೇಕ್ಷೆ ಮಾಡಿದರು. ಆ ಕೆಸರೂರು ಹೈಬ್ರೀಡ್ ಪ್ಲಾಟು ಇನ್ನೂ ಇದೆ. ಇದಕ್ಕಿಂತ ಹೆಚ್ಚಿಗೆ ನನಗೇನೂ ಗೊತ್ತಿಲ್ಲ. ಎಕರೆಗೆ ಒಂದು ಟನ್ ಇರಲಿ ಒಂದು ಕ್ವಿಂಟಾಲ್ ಸಹ ಅದರಿಂದ ಬರಲಿಲ್ಲ" ಎಂದು ಮಹಮದ್ ಒಂದು ಬಗೆಯ ನಮ್ರತೆಯಿಂದ ಎಲ್ಲರಿಗೂ ಕಸರೂರು ಹೈಬ್ರೀಡ್ ಬಗ್ಗೆ ತನಗೆ ಗೊತ್ತಿದ್ದಷ್ಟನ್ನು ವಿವರಸಿದ.

"ಹೌದಾ? ಅಷ್ಟೇನೆ?" ಎಂದು ನಿರಾಸೆಯ ದನಿಯಲ್ಲಿ ಅಂಗಾಡಿ ಉದ್ಗರಿಸುತ್ತಾ ನಿಟ್ಟುಸಿರು ಬಿಟ್ಟು ಎದ್ದ.

"ಮತ್ತೆ ನೋಡ್ತೀರಲ್ಲ" ಎಂದರು ಪಾಟೀಲ್.

"ಹೌದು ಫೋನ್ ಮಾಡುತ್ತೇನೆ" ಎಂದ ಅಂಗಾಡಿ

ಅಂಗಾಡಿ ಅತ್ತ ಹೋದ ಕೂಡಲೆ ಪಾಟೀಲರು ಇತ್ತ ತಿರುಗಿದರು. "ಇದೇನ್ರೀ ಇದು, ಹೀಗಂತಾನೆ ಇವನು! ಆ ಮುದುಕ ಶಾಂತಗೌಡ ಉಬ್ಬಸದಲ್ಲಿ ಏನು ಹೇಳಿದನೋ, ಇವರು ಏನು ತಿಳುಕೊಂಡನೋ, ನಾವೇ ಯಾರಾದರೂ ಶಾಂತಗೌಡರನ್ನ ಕೇಳಿದರೆ ಆಗ್ತಿತ್ತು. ಆತನಿಗೆ ಬೇರೆ ಆರೋಗ್ಯ ಸರಿ ಇಲ್ಲಂತೆ. ಈ ದರಿದ್ರ ಊರಿಗೆ ಬಂದಾಗಿನಿಂದ ಒಂದು ಕೆಲಸ ಸಹ ಸುಸೂತ್ರ ಆಗ್ತಿಲ್ಲ" ಎಂದರು.

"ಕೆಸರೂರು ಹೈಬ್ರೀಡರ್ ಅಂತ ಜೋಗಿಹಾಳರ ಬಾಯಲ್ಲಿ ಹಲವಾರು ಬಾರಿ ಕೇಳಿದ್ದೆ ಸಾರ್. ಆದರೆ ಏನಂತ ಸರಿಯಾಗಿ ಕೇಳಲಿಲ್ಲ. ನಾವು ಜೋಗಿಹಾಳರ ಆಫೀಸ್ ನೋಟ್ಸ್ ಜೊತೆಗೆ ಅವರ ಪರ್ಸನಲ್ ನೋಟ್ಸನ್ನೂ ಕೊಂಚ ಹುಡುಕೋದು ವಾಸಿ" ಎಂದ ಹೆಗ್ಡೆ.

ಅಷ್ಟು ಹೊತ್ತಿಗೆ ಸರಿಯಾಗಿ ಸಂಶೋಧನ ಕೇಂದ್ರದ ಸಮೀಪದ ಮಸೀದಿಯಿಂದ ಅಲ್ಲಾ ಹೋ ಅಕ್ಬರಲ್ಲಾ ಎಂದು ಮುಸ್ಲಿಮರ ಪ್ರಾರ್ಥನೆ ಮೊಳಗತೊಡಗಿತು. ಅದಕ್ಕೆ ಹೊಂದಿಕೊಂಡಂತೆ ಉತ್ತಿಷ್ಠೋ ಉತ್ತಿಷ್ಠ ಅಂತ ಸಂಶೋಧನ ಕೇಂದ್ರದ ದೇವಸ್ಥಾನದಿಂದ ಒಂದು ಮೈಕು ಅಬ್ಬರಿಸಿ ಕೂಗುತ್ತ

ತಿರುಪತಿ ವೆಂಕಟೇಶ್ವರನನ್ನು ಏಳಿಸತೊಡಗಿತು. ತಮ್ಮ ತಮ್ಮ ಧರ್ಮಗಳು ಜಾಗೃತವಾಗಿರುವದನ್ನು ಕಂಡು ಹಿಂದೂಗಳೂ ಸಾಬರೂ ನೆಮ್ಮದಿಯ ನಿಟ್ಟುಸಿರು ಬಿಡುತ್ತಾ ವಿರೋಧಿ ಮೈಕುಗಳ ಕಡೆಗೆ ಹಲ್ಲುಕಡಿದರು.

"ನೋಡ್ರಿ ಶುರುವಾಯ್ತು ಇವರಿಬ್ಬರ್ದೂನು! ಈ ತರ ಮೈಕು ಹಾಕಿ ಕೂಗೋದನ್ನು ಮುಸ್ಲಿಂ ದೇಶಗಳಲ್ಲೆ ಕೈ ಬಿಟ್ಟಿದ್ದಾರಂತೆ. ಇಲ್ಲಿ ಇವರು ಪ್ರಾಣ ತಿನ್ತಾರೆ. ನಮ್ಮ ವಿಜ್ಞಾನಿಗಳು ಮಧ್ಯಾಹ್ನದ ಹೊತ್ತಿನಲ್ಲಿ ಉತ್ತಿಷ್ಠೋ ಉತ್ತಿಷ್ಠ ಅಂತ ತಿರುಪತಿ ವೆಂಕಟರಮಣನ್ನ ಎಬ್ಬಿಸ್ತಿದಾರೆ. ಏನಯ್ಯಾ ಹೆಗ್ಡೆ. ಮಹಮದ್ ನೀವಿಬ್ರೂ ನಿಮ್ಮ ನಿಮ್ಮೋರಿಗೆ ಕೊಂಚ ಹೇಳಬಾರ್ದೇನಯ್ಯಾ?" ಎಂದು ಗಲಭೆ ತಾಳಲಾರದೆ ಪಾಟೀಲರು ತಲೆ ಮೇಲೆ ಕೈ ಹೊತ್ತು ಕುಳಿತರು.

ಹೆಗ್ಡೆ "ಮಹಮದ್ ನೀನೇನು ನಮಾಜಿಗೆ ಹೋಗದೆ ಇಲ್ಲೇ ಇದೀಯಲ್ಲಾ" ಎಂದ.

"ನಾನು ಶುಕ್ರವಾರ ಮಾತ್ರ ಹೋಗೋದು. ಆಫೀಸ್ ಅವರ್ಸ್‌ನಲ್ಲಿ ಹೇಗೆ ಹೋಗೋದಪ್ಪಾ. ಕುರಾನ್‌ನಲ್ಲಿ ಹೇಳಿದ್ನೆಲ್ಲಾ ಈಗಿನ ಕಾಲದಲ್ಲಿ ಮಾಡೋಕೆ ಹೋದರೆ ಆಗುತ್ತೇನಯ್ಯಾ" ಎಂದ ಮಹಮದ್.

"ಈ ವಿಷ್ಯ ಯಾರಿಗೂ ತಿಳುವಳಿಕೆ ಹೇಳೋ ಹಾಗಿಲ್ಲ ಸಾರ್. ನಮ್ಮ ಕೇಂದ್ರದ ಹಿಂದು ಪರಿಷತ್ ಬೆಂಬಲಿಗರಿಗೆ ಹೇಳಿದರೆ ಸಾಬರ ಸೊಕ್ಕು ಮುರೀತೀವಿ ಅನ್ತಾರೆ. ಸಾಬರಿಗೆ ಹೇಳಿದರೆ ಹಿಂದೂಗಳ ಗಾಂಚಾಲಿಗೆ ಹೆದರೋದಿಲ್ಲ ಅಂತಾರೆ. ಇಬ್ರೂ ನಮ್ಮನ್ನ ಇದುರು ಪಾರ್ಟಿ ಏಜಂಟ್ ಅಂತ ತಿಳುಕೊಂಡು ಕೆಂಗಣ್ಣು ಬಿಡ್ತಾರೆ. ಇವರಿಬ್ಬರಿಗೂ ದೊಡ್ಡ ದೊಡ್ಡೋರ ಸಪೋರ್ಟ್ ಬೇರೆ ಇದೆ" ಎಂದು ಹೆಗ್ಡೆ ಪಾಟೀಲರಿಗೆ ವಿವರಿಸಿದ.

"ಇವರ ಗಲಾಟೆ ಎಲ್ಲಾ ಮುಗೀಲಿ ಬನ್ನಿ, ಆಮೇಲೆ ಕೆಸರೂರು ಹೈಬ್ರೀಡು ವಿಷಯ ಯೋಚನೆ ಮಾಡೋಣ. ಈಗ ಊಟಕ್ಕೆ ಹೋಗೋಣ"ಎಂದರು ಖಿನ್ನರಾಗಿ ಪಾಟೀಲರು.

"ಅದೇ ನಾನು ಅಗಲೇ ಹೇಳಿದನಲ್ಲಾ ಸಾರ್. ಕೆಸರೂರು ಹೈಬ್ರೀಡ್ ಬೀಜ ಅಂತ ಒಂದು ಪ್ಲಾಟು ಮಾಡಿದೀವಲ್ಲ ಅಷ್ಟೇ. ಅದರಲ್ಲಿ ಹೆಚ್ಚಿಗೇ ಏನೂ ರಹಸ್ಯ ಇದೇಂತ ನಾನು ತಿಳಿದಿಲ್ಲ" ಎಂದ ಮಹಮದ್.

ಅವನ ಮಾತು ಕೇಳಿ ಮೊದಲೇ ರೇಜಿಗೆಯಲ್ಲಿದ್ದ ಪಾಟೀಲರಿಗೆ ಕಡು ಕೋಪ ಬಂತು. "ಹೌದೌದು ನೀನು ತಿಳಿದಲ್ಲ. ಅದಕ್ಕೇ ಮತ್ತೆ ಅದು ರಹಸ್ಯವಾಗಿರೋದು. ಫೂಲಿಷ್ ಫೆಲೊ. ಆ ಪ್ಲಾಟಿಗೆ ಬೀಜ ಎಲ್ಲಿಂದ ತಂದ್ರಯ್ಯ. ವೇರ್ ಈಸ್ ದಿ ಮದರ್ ಪ್ಲಾಂಟ್? ಯಾವ ಗಿಡದಿಂದ ಆ ಬೀಜ ತಂದಿದ್ರು. ಯಾಕೆ ಅದನ್ನ ಕೆಸರೂರಿನ ಹೈಬ್ರೀಡ್ ಅಂತ ಕರದ್ರು. ರಹಸ್ಯ ಇಲ್ಲದಿದ್ರೆ ಹೇಳು ಈಗ, ಬಿಡು ಬಾಯಿ" ಎಂದು ಮಹಮದ್ ಮೇಲೆ ರೇಗಿ ಕೂಗಿದರು. ಮೈಕುಗಳ ಸ್ವರ ಏರುತ್ತಿದ್ದಂತೆ ಪಾಟೀಲರ ಕೋಪ ರೇಜಿಗೆಗಳೂ ಏರತೊಡಗಿದ್ದವು. "ಎಲ್ಲಾ ಸೇರಿ ಜೋಗಿಹಾಳರನ್ನ ಖೂನಿ ಮಾಡಿದೀರಾ ಅಂತ ಹೇಳ್ತೀನಿ ತಾಳು. ಮಿನಿಸ್ಟ್ರಿಗೆ ಹಂಗೇ ರಿಪೋರ್ಟು ಮಾಡಲಿ" ಎಂದರು.

# ಅಧ್ಯಾಯ ೧೫

ಶಾಮನಂದನ ಅಂಗಾಡಿ ಟಿ.ಬಿ.ಗೆ ಬಂದು ಸುಮ್ಮನೆ ಕುಳಿತ. ಇಲ್ಲಿಯವರೆಗೂ ರಿಪೋರ್ಟಿನ ಕೊಂಚ ಭಾಗವನ್ನೂ ಬರೆದಿರಲಿಲ್ಲ. ಸುಮ್ಮನೆ ಒಂದಿಷ್ಟು ಕಾಟಾಚಾರದ ನೋಟ್ಸ್ ಮಾಡಿಟ್ಟಿದ್ದ. ಜೇಬಿನಿಂದ ರಿವಾಲ್ವರ್ ಒಂದನ್ನು ತೆಗೆದು ಬಾಯಿ ಕಳೆದುಕೊಂಡಿದ್ದ ಸೂಟ್‌ಕೇಸಿನ ಒಳಗೆ ಎಸೆದ. ರಿವಾಲ್ವರ್ ಜೇಬೊಳಗೆ ಇಟ್ಟುಕೊಂಡು ಶಾಂತಗೌಡರನ್ನೂ ಪಾಟೀಲರನ್ನೂ ನೋಡ ಹೋಗಿದ್ದಕ್ಕೆ ಅವನಿಗೆ ನಗುಬಂತು. ನಿನ್ನೆ ಇಬ್ಬರು ದೊಣ್ಣೆ ಹಿಡಿದು ಕೊಂಡು ಸಂಶೋಧನ ಕೇಂದ್ರದ ಹಾದಿಯಲ್ಲಿ ಇವನನ್ನು ಹಿಂಬಾಲಿಸಿದನಂತರ ಅಂಗಾಡಿ ತಗೊಂಡ ಎಚ್ಚರಿಕೆ ಕ್ರಮ ಇದು.

ಅದೊಂದು ಕೋಲ್ಟ್ ಕಂಪನಿಯ ೧೯೧೧ನೆ ಇಸ್ವಿ ಮಾಡೆಲ್ ರಿವಾಲ್ವರ್. ಅದರ ಮ್ಯಾಗಝಿನ್ ಗಲಗಲ ಅಲುಗುತ್ತಿತ್ತು. ತಿರುಗುವಾಗ ಅದು ತೋಟಾಗಳನ್ನು ಸರಿಯಾಗಿ ಕೋವಿಯ ಕುದುರೆ ನೇರಕ್ಕೆ ತಂದು ನಿಲ್ಲಿಸುತ್ತಲೇ ಇರಲಿಲ್ಲ. ಆದ್ದರಿಂದ ಅದರ ಬಿಲ್ಲನ್ನು ಒತ್ತುತ್ತಲೇ ಇದ್ದರೆ ಯಾವಾಗಾದರೊಮ್ಮೆ ಗುಂಡು ಹಾರುತ್ತಿತ್ತು. ಅದು ಕಳ್ಳರಿಗೆ ಹೆಸರಿಸಲು ಮಾತ್ರ ಲಾಯಖ್ಖಾಗಿತ್ತೇ ವಿನಃ ಆತ್ಮಹತ್ಯೆ ಮಾಡಿಕೊಳ್ಳಲೂ ಸಮರ್ಪಕವಾದ ಆಯುಧವಾಗಿರಲಿಲ್ಲ. ಅದು ಲೈಸನ್ಸ್ ಇಲ್ಲದ ರಿವಾಲರ್ವರೆಂದು ಪೋಲೀಸರು ಮುಟ್ಟುಗೋಲು ಹಾಕಿಕೊಂಡಿದ್ದನ್ನು ಅಂಗಾಡಿ ಇಂಟಲಿಜೆನ್ಸ್ ಡಿಪಾರ್ಟ್ಮೆಂಟಿ ನವನಾದ್ದರಿಂದ ಲೈಸನ್ಸ್ ಮಾಡಿಸಿ ತೆಗೆದುಕೊಂಡಿದ್ದ. ಅದನ್ನು ಜೇಬಿನಲ್ಲಿಟ್ಟುಕೊಂಡಿದ್ದರೆ ತಾನೊಬ್ಬ ಜೇಮ್ಸ್‌ಬಾಂಡ್ ಥರ ಎಂದೆನ್ನಿಸುತ್ತಿತ್ತು ಅಂಗಾಡಿಗೆ. ಅದಕ್ಕಾಗಿ ಅದನ್ನು ಹೊತ್ತು ತಿರುಗುತ್ತಿದ್ದನೇ ವಿನಃ ಅದರಿಂದ ಹೆಚ್ಚಿನ ಉಪಯೋಗವಿಲ್ಲವೆಂದು ಅಂಗಾಡಿಗೆ ಚೆನ್ನಾಗಿ ಗೊತ್ತಿತ್ತು.

ಅಂಗಾಡಿ ಚಿಕ್ಕಂದಿನಿಂದ ತಾನೊಬ್ಬ ರೈಲ್ವೆ ಎಂಜಿನ್ ಡ್ರೈವರ್ ಆಗಬೇಕು ಅಥವಾ ಶೆರ್‌ಲಾಕ್‌ಹೋಮ್ಸ್ ಥರದ ಪತ್ತೇದಾರ ಆಗಬೇಕು ಎಂದು ಕನಸು ಕಂಡಿದ್ದ. ಆದರೆ ಮೊದಲಿನದು ಸಾಧ್ಯವಾಗದೆ ಎರಡನೆಯದು ಕೈಗೂಡಿತ್ತು. ಅವನು ಪತ್ತೇದಾರ ಆದುದಕ್ಕೆ ಚಿಕ್ಕಂದಿನಿಂದ ಅವನ ತಾಯಿ ಹೇಳುತ್ತಿದ್ದ ಕಳ್ಳರ ಕತೆಗಳೇ ಸ್ಫೂರ್ತಿ ಎಂದು ಅಂಗಾಡಿ ತಿಳಿದುಕೊಂಡಿದ್ದ.



ಒಮ್ಮೆ ಅಂಗಾಡಿ ಇನ್ನೂ ಮಗುವಾಗಿದ್ದಾಗ ಇಬ್ಬರು ಏಲಕ್ಕಿ ವ್ಯಾಪಾರಿ ಬೇರಿಗಳು ಅಂಗಾಡಿಯ ಏಕಾಂಗಿ ಮನೆಯನ್ನು ಆ ದಿನ ದರೋಡೆ ಮಾಡಬೇಕೆಂದು ಬಂದರಂತೆ. ಈ ಇಬ್ಬರಲ್ಲಿ ಒಬ್ಬ ಬೇರಿ ಇನ್ನೊಬ್ಬನನ್ನು ಏಲಕ್ಕಿ ಗೋಣಿಯೊಳಗೆ ಹಾಕಿ ಮೂಟೆಕಟ್ಟಿ "ಇದನ್ನು ಕೊಂಚ ಇಟ್ಟಿರಿ. ನಾನು ಇಲ್ಲಿಂದ ಎರಡು ಮೈಲಿ ದೂರದಲ್ಲಿರೋ ಲಕ್ಷ್ಮಣಗೌಡರ ಮನೆಗೆ ಹೋಗಿ ಬರುತ್ತೇನೆ" ಎಂದು ಹೇಳಿ ಚೀಲ ಮನೆಯೊಳಗಿಟ್ಟು ಮನೆ ಹಿಂದೆ ಅಡಗಿಕೊಂಡನಂತೆ. ಅಂಗಾಡಿ ತಂದೆ ಹೊರಗೆ ಕುಳಿತಿರಬೇಕಾದರೆ ಅಡುಗೆ ಮಾಡುತ್ತಿದ್ದ ಅಂಗಾಡಿಯ ತಾಯಿ ಚೀಲದತ್ತ ಕಣ್ಣು ಹರಿಸಿದಾಗ ನೋಡುತ್ತಾಳೆ ಚೀಲ ಮೆಲ್ಲಗೆ ಮಿಸುಕಾಡುತ್ತಿದೆ. ಆಕೆಗೆ ತಕ್ಷಣ ಎಲ್ಲ ಅರ್ಥವಾಯ್ತು. ಇನ್ನೊಬ್ಬ ಇಲ್ಲೇ ಎಲ್ಲೋ ಮನೆಯ ಬಳಿ ಅಡಗಿದ್ದಾನೆ.! ಗಂಡನಿಗೆ ಗಟ್ಟಿಯಾಗಿ ಕೂಗಿ ಹೇಳಿದರೆ ಹೊರಗಿರುವ ಕಳ್ಳ ಅಷ್ಟರೊಳಗೇ ನುಗ್ಗಿ ಬಂದು ಗಂಡನ ಮೇಲೆ ಹಲ್ಲೆ ಮಾಡಬಹುದು! ಏನು ಮಾಡುವುದೆಂದು ಯೋಚಿಸಿ ಕೊನೆಗೆ ತೊಟ್ಟಿಲಲ್ಲಿ ಇನ್ನೂ ಮಗುವಾಗಿ ಮಲಗಿದ್ದ ಅಂಗಾಡಿಗೆ ಚೆನ್ನಾಗಿ ಒಳಶುಂಠಿ ಚಿಗುಟಿ ಅಳಿಸಿದಳಂತೆ. ಆಕೆ ಗಂಡ ಹಲವಾರು ಸಾರಿ "ಲೇ ಯಾಕೆ ಮಗು ಅಳ್ತಿದೆಯಲ್ಲಾ" ಎಂದು ಕೂಗಿದರೂ ಹೆಂಡತಿ ಉತ್ತರಿಸದಿದ್ದುದನ್ನು ಕಂಡು ಬಯ್ಯುತ್ತಾ ಒಳಬಂದ. ಕೂಡಲೆ ಹೆಂಡತಿ ಬಾಗಿಲು ಮುಚ್ಚುವಂತೆ ಸನ್ನೆ ಮಾಡಿ ಆಮೇಲೆ ಒನಕೆ ತಗೊಂಡು ಚೀಲದೊಳಗಿನ ಕಳ್ಳನಿಗೆ ಸರಿಯಾದ ಶಾಸ್ತಿ ಮಾಡಿದರಂತೆ. ತನ್ನ ಸಂಗಾತಿಗಾದ ಗತಿ ನೋಡಿ ಇನ್ನೊಬ್ಬ ಬೇರಿ ಹೇಳದೆ ಕೇಳದೆ ಓಡಿದ.

ತಾಯಿಂದ ಮಗುವಾಗಿದ್ದಾಗ ಕೇಳಿದ ಚಿಕ್ಕಂದಿನ ಈ ಕತೆ, ಇದರ ರಮ್ಯತೆ, ತಮ್ಮ ಏಕಾಂಗಿ ಮನೆ, ಅಲ್ಲಿ ಮನೆ ನುಗ್ಗಲು ಬೇರಿಗಳು ಮಾಡಿದ ತಂತ್ರ, ಅಸಹಾಯಕಳಾದ ತನ್ನ ತಾಯಿಗೆ ಮಿಂಚಿದ ಪ್ರತಿತಂತ್ರ, ಇಬ್ಬರೂ ಸೇರಿ ಕಳ್ಳರಿಗೆ ತದುಕಿದ್ದು, ಇವೆಲ್ಲಾ ಅಂಗಾಡಿಗೆ ತಾನೊಬ್ಬ ಪತ್ತೇದಾರ ಮನೆತನಕ್ಕೆ ಸೇರಿದವನೆಂಬ ಅಭಿಮಾನ ಬೆಳೆಸಿತ್ತು. ಅವನು ಪೋಲೀಸ್ ಡಿಪಾರ್ಟ್‌ಮೆಂಟು ಸೇರಿ ಅಲ್ಲಿಂದ ಐಪಿಎಸ್ ಪಾಸ್ ಮಾಡಿ ಇಂಟೆಲಿಜೆನ್ಸ್ ಡಿಪಾರ್ಟ್‌ಮೆಂಟು ಸೇರಲು ಈ ಕತೆಯೇ ಕಾರಣವೆಂದು ಅಂಗಾಡಿ ನಂಬಿದ್ದ.

ಆದರೆ ಅಂಗಾಡಿಯ ಅತ್ಯುತ್ಸಾಹ, ಅಪರಾಧದ ಬಗ್ಗೆ ಇದ್ದ ಕಾಲ್ಪನಿಕತೆ, ಪ್ರತಿಯೊಂದೂ ನಿಗೂಢ ರಹಸ್ಯಮಯ ಎಂದು ನೋಡುವ ಉತ್ಪ್ರೇಕ್ಷಿತ ದೃಷ್ಟಿ, ಅಂಗಾಡಿಯನ್ನು ಅವನ ಇಲಾಖೆಯಲ್ಲಿ ಬೇಡದ ವ್ಯಕ್ತಿಯನ್ನಾಗಿ ಮಾಡಿತ್ತು. ಅಂಗಾಡಿಯ ಊಹೆ ಮತ್ತು ತೀರ್ಮಾನಗಳು ತಪ್ಪು ಮತ್ತು ಅತಿರೇಕ ಎಂದು

ತೋರಿಸಿಕೊಡಲು ಮೇಲಾಧಿಕಾರಿಗಳ ತಾಳ್ಮೆ ಸಾಕಷ್ಟು ಖರ್ಚಾಗುತ್ತಿತ್ತು. ಪ್ರತಿಸಾರಿಯೂ ಅಂಗಾಡಿ ತನ್ನ ಪ್ರತಿಭೆಯನ್ನು ಗುರುತಿಸುವವರಿಲ್ಲವಲ್ಲಾ ಎಂದು ಖಿನ್ನನಾಗುತ್ತಿದ್ದ. ಅಪರಾಧಿಗಳೆಂದು ಗುಮಾನಿ ಬಂದವರನ್ನು ಹಿಡಿದು ತದುಕಿ ಬಾಯಿ ಬಿಡಿಸುವವರನ್ನು ಕಂಡರೆ ಅಂಗಾಡಿಗೆ ತೀವ್ರ ತಿರಸ್ಕಾರ. ಅವೆಲ್ಲಾ ಪ್ರತಿಭೆ ಇಲ್ಲದೆ, ಕಷ್ಟಪಟ್ಟು ತನಿಖೆ ಮಾಡಲು ತಾಳ್ಮೆ ಇಲ್ಲದೆ ಇರುವ ಸೋಮಾರಿಗಳ ಕೆಲಸ ಎಂದು ಅಂಗಾಡಿ ದೃಢವಾಗಿ ನಂಬಿದ್ದ.

ಈ ಎಲ್ಲಾ ತಿಕ್ಕಾಟಗಳ ನಡುವೆ ಇವುಗಳ ಸಲುವಾಗಿಯೇ ಅಂಗಾಡಿ ಏಲಕ್ಕಿ ಬೋರ್ಡ್ ಇಂಟೆಲಿಜೆನ್ಸ್ ಆಫೀಸರಾಗಿ ಅಲೆಪ್ಪಿಗೆ ವರ್ಗಾಯಿಸಲ್ಪಟ್ಟಿದ್ದು.

ಏಲಕ್ಕಿ ಬೋರ್ಡೆನ್ನುವುದೊಂದು ದಂಡದ ಪಿಂಡ. ಕೆಲವು ನಿರುದ್ಯೋಗಿ ರಾಜಕಾರಣಿಗಳು ಹಲವು ನಿದ್ರಾಲೋಲ ಮುದುಕರು, ಖದೀಮ ರಫ್ತು ವ್ಯಾಪಾರಿಗಳು ಇವರೆಲ್ಲರ ವಿರಾಮಧಾಮ ಅದು. ಏಲಕ್ಕಿ ಉತ್ಪಾದನೆ ಕುಸಿಯುತ್ತಾ ಬೆಲೆ ಏರುತ್ತಾ ಭಾರತ ಸರ್ಕಾರಕ್ಕೆ ಬರುವ ಕೋಟ್ಯಾಂತರ ರೂಪಾಯಿ ವಿದೇಶೀ ವಿನಿಮಯ ಕುಗ್ಗುತ್ತಿದ್ದಂತೆ ಸರ್ಕಾರ ಎಚ್ಚೆತ್ತುಕೊಳ್ಳತೊಡಗಿತು. ಹಳೇ ಮುದಿ ಛೇರ್ಮನ್ನರನ್ನು ಒದ್ದೋಡಿಸಿ ಹೊಸಬರೊಬ್ಬರನ್ನು ನಿಯಮಿಸಿತು. ಅದೇ ಸಂದರ್ಭದಲ್ಲಿ ಅಂಗಾಡಿ ಚೀಫ್ ಇಂಟೆಲಿಜೆನ್ಸ್ ಆಫೀಸರಾಗಿ ಅಧಿಕಾರ ವಹಿಸಿಕೊಂಡದ್ದು.

ಅಂಗಾಡಿಯ ಸಮೃದ್ಧ ಕಲ್ಪನಾಶಕ್ತಿಯೂ ಕೂಡ ಈ ಹೊಸ ಕೆಲಸದಲ್ಲಿ ಬೇಸರಿಸಿ ಹೋಯ್ತು. ಅದಕ್ಕೇ ಈತ ಆ ದಿನ ಬೆಳಿಗ್ಗೆ ಎದ್ದು ಮರಣಶಯ್ಯೆಯಲ್ಲಿದ್ದ ಶಾಂತಗೌಡರನ್ನು ಕಮಡು ಅವರಿಂದ ಹೇಗೋ ಕೆಸರೂರಿನ ಹೈಬ್ರೀಡ್ ತಳಿಯ ಬಗ್ಗೆ ತಿಳಿದುಕೊಂಡು, ದೊಡ್ಡ ಪತ್ತೇದಾರನಂತೆ ಹೋಗಿ ಅದನ್ನು ಪಾಟೀಲರೆದುರು ಬಹಿರಂಗಪಡಿಸಿದಾಗ ಅದರಲ್ಲಿ ಯಾವ ರಹಸ್ಯವೂ ಇಲ್ಲೆಂದು ಬ್ರೀಡರ್ ಮಹಮದ್ ಆ ಸಂಗತಿಯ ಮೇಲೆ ತಣ್ಣೀರು ಎರಚಿದನಷ್ಟೆ. ಅಂಗಾಡಿಗೆ ಮೊದಲೇ ಇದ್ದ ಬೇಸರ ಇನ್ನಷ್ಟು ಇಮ್ಮಡಿಸಿತು. ಭಾರತದಲ್ಲಿ ಎಲ್ಲ ರಂಗದಲ್ಲೂ ಸ್ಟಾಂಡರ್ಡ್ ಇಳಿಮುಖವಾಗಿರುವಂತೆ ಅಪರಾಧ ರಂಗದಲ್ಲೂ ತನ್ನಂಥ ಪತ್ತೇದಾರನಿಗೆ ಅಗತ್ಯವಾದ ಸ್ಟಾಂಡರ್ಡ್ ಇಲ್ಲವೆಂದು ಅಂಗಾಡಿ ಅಂದುಕೊಂಡ.

ಪಾಟೀಲರು ಹೇಳಿದ್ದನ್ನೆ ಕೊಂಚ ಒಪ್ಪ ಓರಣ ಮಾಡಿ ರಿಪೋರ್ಟು ಬರೆದು ಬಸ್ಸು ಹತ್ತಿದರಾಯ್ತು ಎಂದು ನಿರ್ಧರಿಸಿದ್ದ. ಅಷ್ಟರಲ್ಲಿ ಟಿಬಿಯ ಫೋನ್ ಗಂಟೆ ಬಾರಿಸಿತು. ಮೇಟಿ ಎತ್ತುತ್ತಾನೆಂದು ಫೋನ್ ಎತ್ತದೆ ಅಂಗಾಡಿ ಕಾದ. "ಆದರೆ ಮೇಟಿ ಬರಲಿಲ್ಲ. ಅಂಗಾಡಿಯೇ ಫೋನ್ ಎತ್ತಿ "ಹಲ್ಲೋ" ಎಂದ.



ಯಾವುದೋ ಗುರುತಿನ ದನಿಯೊಂದು "ಮಿನಿಸ್ಟರು ಬಂದಿದ್ದಾರೆಯೇ?" ಎಂದು ಕೇಳಿತು.

"ಇಲ್ಲವಲ್ಲಾ"

"ನೀವು ಯಾರು?"

"ಓ! ನಾನು ಅಂಗಾಡಿ ಮಿಸ್ಟರ್ ಜಯರಾಂ, ಗೊತ್ತಾಗಲಿಲ್ಲವೆ?"

"ಗುರ್ತಿನ ಧ್ವನಿ ಅನ್ನಿಸಿತು, ಆದರೆ ಯಾರಂತ ಗೊತ್ತಾಗ್ಲಿಲ್ಲ."

"ಮತ್ತೇನು ಸಮಾಚಾರ?"

"ಏನಿಲ್ಲಾ, ಸಾಯಂಕಾಲ ಕಾಫಿಬಾರಿಗೆ ಬರ್‍ತೀರಾ ಮಾತಾಡೋಣ. ಈ ಊರು ಯಾಕೋ ತುಂಬಾ ಬೇಸರವಾಗಿದೆ."

"ಓಯಸ್, ಸಿಗ್ತೀನಿ."

## ಅಧ್ಯಾಯ ೧೬

ಕೃಷ್ಣೇಗೌಡ ಕಲ್ಲೆಸೆಯುವ ಪುಂಡರ ಕಿರಿಕಿರಿಗೆ ಬೇಸತ್ತು ಕೊನೆಗೆ ಆಳುಗಳ ಸಲಹೆಯಂತೆ ಪೋಲೀಸರಿಗೆ ತಿಳಿಸಿದ. ಕಂಪ್ಲೇಂಟು ಬರಕೊಂಡ ಪೋಲೀಸ್ ದಫೇದಾರ್ ಜೋಗಪ್ಪ.

"ನೋಡಿ ಸಾರ್. ಈ ಊರ್ನಲ್ಲಿ ಕಳ್ತನ ಮಾಡೋ ಕದೀಮರೆಲ್ಲಾ ಇಂತಿಂತಾ ಕೆಲಸ ಮಾಡೋರು ಇಂತಿಂತಾವರೇ ಅಂತ ನಮಗೆ ಗೊತ್ತು. ದೀಪ ಕದೀಲಿ, ನಲ್ಲಿ ಕದೀಲಿ, ಕನ್ನ ಹೊಡೀಲಿ, ಬಟ್ಟೆ ಕದೀಲಿ, ಇಂತೋನೆ ಅಂತ ಕುಂತಲ್ಲಿಂದ ಹೇಳಿಬಿಡ್ತೀನಿ. ಆದರೆ ಈತರ ಕಲ್ಲು ಹೊಡೆಯೋರು ಯಾರಂತ ಗೊತ್ತಿಲ್ಲ. ನಿಮಗೆ ಯಾರ ಮೇಲಾರ ಗುಮಾನಿ ಇದ್ರೆ ಹೇಳಿ, ನಿಗಾ ಮಡುಗುತ್ತೀವಿ" ಎಂದ.

"ಯಾವ ಮೇಲೇಂತ ಹೇಳಲಿ ದಫೇದಾರ್ರೆ. ಆ ಕಾಲೇಜು ಹುಡುಗರು ಅಂತ ತಿಳ್ಕೊಂಡಿದ್ದೆ. ಅದಕ್ಕೇ ಅವರ ಮೇಷ್ಟ್ರಿಗೂ ಹೇಳ್ದೆ. ಈಗಿನ ಕಾಲದ ಹುಡುಗ್ರೇನು ಯಾರ್ಮಾತನ್ನೂ ಕೇಳೋರಲ್ಲ."

"ನೋಡಿ ಗೌಡ್ರೆ. ಆ ಕಾಲೇಜು ಹುಡುಗ್ರು ಯಾರೂ ಅಂತ ಗ್ಯಾರಂಟಿ ಆದ ಹೊರ್ತು ಅವರ ಮೇಲೆ ಕ್ರಮ ತಗೊಳ್ಳೊಕೆ ಆಗೋಲ್ಲ. ಆ ಕಳ್ಮುಂಡೆ ಮಕ್ಳು ಪೋಲೀಸ್ನೋರು ಅಂದಕೂಡ್ಲೆ ಒಗ್ಗಟ್ಟಾಗಿ ಬಿಡ್ತಾರೆ. ಹರತಾಳ, ಅಂಗಡಿ ಬಂದು, ಗಾಜು ಒಡೆಯೋದು ಎಲ್ಲಾ ಶುರುಮಾಡಿಕೊಂಡು ಬಿಡ್ತಾರೆ. ಅದಕ್ಕೇ ಸುಮ್ನೆ ನಿಗಾ ಇಟ್ಟಿರಿ ಅಷ್ಟೇ. ಈಗ ಬರೀ ಕಲ್ಲು ಬಿಳ್ತಿರೋದುತಾನೆ. ಹೆಚ್ಚಿನ ತೊಂದ್ರೆ ಏನಿಲ್ವಲ್ಲ" ಎಂದ ದಫೇದಾರ್ ಜೋಗಪ್ಪ.

ಜೋಗಪ್ಪನಿಗೆ ಕೆಸರೂರು ಕಾಲೇಜು ಹುಡುಗರು ತರಲೆ ತೆಗೆದರೆ ಚಿಕ್ಕಮಗಳೂರಿನಿಂದ ರಿಜರ್ವ್ ಕರೆಸದೆ ಅವರನ್ನು ಹತೋಟಿಗೆ ತರೋದು ಸಾಧ್ಯ ಇಲ್ಲ ಅಂತ ಚೆನ್ನಾಗಿ ಗೊತ್ತಿತ್ತು.

"ಸರಿ ಜೋಗಪ್ಪಾ, ಇದೇ ತರ ದಿನಾ ನಾಕು ನಾಕು ಕಲ್ಲು ಬೀಳ್ತಾ ಇದ್ರೆ ಮನೆಯೊಳಗಿರೋರ ಚಿಂತೆ! ಮೂರು ದಿನದಿಂದ ಆಳುಗಳಿಗೆ ನಿದ್ದೆ ಇಲ್ಲ. ಪಹರೆ ಕಾಯೋದು, ಅಲ್ಲಿ ಓಡಿದರು, ಇಲ್ಲಿ ಓಡಿದರು ಅಂತ ಗಲಾಟೆ, ಗಸ್ತು ತಿರುಗೋದು. ಇದೇ ಆಗೋಗಿದೆ."



"ಒಂದು ಕೆಲಸ ಮಾಡಿ ಗೌಡರೆ! ನಿಮ್ಮತ್ರ ಎಂತಿದ್ರೂ ತೋಟಾ ಕೋವಿ ಇದೆಯಲ್ಲಾ. ಕಲ್ಲು ಬೀಳೋ ಟೈಮಿಗೆ ಗಾಳಿಗೆ ಒಂದು ಗುಂಡು ಹಾರಿಸಿಬಿಡಿ. ನೋಡಿ ಆಮೇಲೆ ಕಲ್ಲು ಬೀಳ್ತದ ಅಂತ. ಯಾರೋ ನಿಮ್ಮೋರ್ದೆ ಆಳುಗಳದ್ದು ಈ ಕೆಲಸ".



"ನಿಮಗೆ ಆ ಕಡೆ ಕೊಂಚ ಬೀಟ್ ಹಾಕೋದಕ್ಕೆ ಆಗುತ್ತ ಜೋಗಪ್ಪ?" ಪೋಲೀಸ್ನೋರು ಅಂದ್ರೆ ಜನ ಕೊಂಚ ಹೆದರ್ತಾರೆ. ನಮಗೆಲ್ಲಾ ಹೆದರೋಲ್ಲ. ಗುಂಡು ಹಾರಿಸಿ ಯಾರಿಗಾದರೂ ಗುಂಡು ತಗುಲಿದರೆ ಏನಪ್ಪಾ ಮಾಡೋದು."

"ನಾನೇನು ಜನಕ್ಕೆ ಗುಂಡು ಹೊಡೀರಿ ಅಂತ ಹೇಳ್ತಿಲ್ಲವಲ್ಲ ಸ್ವಾಮಿ, ಆಕಾಶಕ್ಕೆ ಗಾಳೀಗೆ ಹಾರ್ಸಿ ಅಂತ. ಅಷ್ಟರ ಮೇಲೆ ಯಾರಿಗಾದರೂ ತಗುಲಿದರೆ ಏನು ಮಾಡೋಕಾಗ್ತದೆ! ಕಾನೂನುಪ್ರಕಾರ ನಿಮಗೆ ಕೋವಿ ಲೈಸನ್ಸ್ ಕೊಟ್ಟಿರೋದೆ ಆತ್ಮರಕ್ಷಣೆಗೆ, ಆಸ್ತಿಪಾಸ್ತಿ ರಕ್ಷಣೆಗೆ. ಆಳುಗಳಿಗೆಲ್ಲಾ ಮನೇ ಒಳಗಿರಿ ಅಂತ ಹೇಳಿ ಆಕಾಶಕ್ಕೆ ಒಂದು ಗುಂಡು ಉಡಾಯಿಸಿ ಬಿಡಿ. ಅಷ್ಟೇ" ಅಂದ ದಫೇದಾರ್ ಜೋಗಪ್ಪ. ಅವನಿಗೆ ರಾತ್ರೋರಾತ್ರಿ ಬೀಟು ತಿರುಗುವುದು ಅಷ್ಟೊಂದು ಅಪ್ಯಾಯಮಾನ ಕೆಲಸವಾಗಿ ಕಾಣಲಿಲ್ಲ. ಜೊತೆಗೆ ಆವತ್ತು ಕಾಲೇಜಿನ ಸಮಾರಂಭಕ್ಕೆ ಪ್ರಿನ್ಸಿಪಾಲರು ಪೋಲೀಸ್ ರಕ್ಷಣೆ ಕೇಳಿದ್ದರು.

ಕೃಷ್ಣೇಗೌಡನಿಗೂ ತಮ್ಮ ಆಳುಗಳೇ ಈ ಕೆಲಸ ಮಾಡುತ್ತಿದ್ದಾರೋ ಎಂಬ ಅನುಮಾನ ಶುರುವಾಯ್ತು. ಕೆಲಸ ದಾಳುಗಳ ಹೆಂಡಿರುಗಳಲ್ಲಿ ಒಂದಿಬ್ಬರು ಈತನ ಹಂಗಾಮಿ ಪ್ರೇಯಸಿಯರಿದ್ದರು. ಆ ಕಾರಣದಿಂದ ಅವರ ಗಂಡಂದಿರೇನಾದರೂ ಮುನಿದೆದ್ದರೋ! ಜೋಗಪ್ಪನ ದೇಶಾವರಿ ಮಾತು ಕೃಷ್ಣೇಗೌಡನಲ್ಲಿ ತೀವ್ರ ಅನುಮಾನವನ್ನು ಪ್ರಚೋದಿಸಿತು.

ತೋಟಕ್ಕೆ ಬಂದವನೇ ಮಾಯ್ಲ ಮೇಸ್ತ್ರೀ ಕರೆದು "ಇವತ್ತು ಗೋಲಿ ಉಡಾಸಿ ಬಿಡೋದೆ ಸೈ. ಸೂಳೇಮಕ್ಕಳು ಅವರು ಯಾರಾದರೂ ಆಗಿರ್ಲಿ. ನೀನು ಮಾತ್ರ ನಮ್ಮ ಆಳುಗಳೆಲ್ಲರಿಗೂ ಹೇಳಿರು, ಎಲ್ಲಾ ಮನೆ ಒಳಗಿರಬೇಕು ಅಂತ. ಅದೂ ಇದೂ ಅಂತ ಹಲ್ಲಂಡೆ ಕೆಲಸಕ್ಕೆ ಹೊರಗಡೆ ತಿರುಗ್ತಾ ಯಾರಿಗಾದರೂ ಗುಂಡು ತಾಗಿದ್ರೆ ನನ್ನ ಜವಾಬ್ದಾರಿ ಅಲ್ಲ" ಎಂದು ಗಟ್ಟಿಯಾಗಿ ಕೂಗಿದ. ಆಮೇಲೆ ಮಾಯ್ಲನನ್ನು ಮೆಲ್ಲಗೆ ಹತ್ತಿರ ಕರೆದು 'ಅಲ್ಲೋ ಮೇಸ್ತ್ರಿ, ನಮ್ಮೋರೆ ಯಾರಾದ್ರೂ ಈ ಚಾಷ್ಟೆ ಮಾಡ್ತಿದಾರೇನೋ, ದಫೇದಾರ ಹೇಳ್ತಾನೆ ಇದು ನಿಮ್ಮೋರ್ದೆ ಕೆಲಸ ಸ್ವಾಮಿ ಅಂತ!" ಎಂದ.

ಮಾಯ್ಲ ಚಿಂತಾಕ್ರಾಂತನಾದ. "ನೋಡಿ ಅಯ್ಯ, ನೀವತ್ಲಾಗಿ ಹೋದ್ಮೇಲೆ ನಾವೂ ಇದನ್ನೇ ಗ್ಯಾನ ಮಾಡಿದ್ವಿ. ಕೊನೆಗೂ ಇದು ನಮ್ಮ ತಲೇ ಮೇಲೆ ಬರ್ತದೆ ಅಂತ. ಯಾರೋ ಪೋಕ್ರಿ ಸೂಳೇಮಕ್ಳು ಮಾಡಿದ ತಪ್ಪಿಗೆ ನಮಗೆ ಟೇಸನ್ನಿಗೆ ತಗೊಂಡು ಹೋಗಿ ಕೋದಂಡ ಹಾಕ್ತಾರೆ ಅಂತ. ಹೋದ ವರ್ಸ ಏಲಕ್ಕಿ ಕದ್ದೋರು ಯಾರೋ! ಪೋಲೀಸ್ನೋರು ಟೇಸನ್ನಿಗೆ ಕರೆಸಿ ಆಳುಗಳಿಗೆಲ್ಲಾ ಒದ್ದರು. ಅವರಿಗೆ ಪತ್ತೆ ಮಾಡೋಕೆ ಆಗದೆ ಹೋದರೆ ಕಣ್ಣಿಗೆ ಕಂಡೋರಿಗೆ ಹೊಡ್ತ ಹೊಡೀತಾರಂತೆ. ಈವತ್ತು ಒಂದೇ ಒಂದು ನರಪಿಳ್ಳೆ ಬಿಡದಂತೆ ಒಳಗೆ ಹಾಕಿ ಬೀಗ ಹಾಕಿ ಬಿಡ್ತೀನಿ. ನಮ್ಮೋರಾದ್ರೆ ಗೊತ್ತಾಗ್ತದಲ್ಲ" ಎಂದು ಮಾಯ್ಲ ಬೇಸರದಿಂದ ಹೇಳಿದ. ಮಾಯ್ಲ ಹಾಗೆಂದರೂ ಅವನಲ್ಲಿ ಒಂದು ಅನುಮಾನದ ರೇಖೆ ಸುಳಿಯಿತು. "ನಮ್ಮೋರು ಹೌದೋ ಅಲ್ವೋ ಇವತ್ತು ನೋಡೇ ಬಿಡ್ತೀನಿ" ಎಂದು ಗೊಣಗಿಕೊಂಡ.

ಕೃಷ್ಣೇಗೌಡ ತನ್ನ ನೆಚ್ಚಿನ ಶಿಕಾರಿದಾರ ಚೀಂಕ್ರನಿಗೆ ಈವತ್ತು ಸಾಯಂಕಾಲ ರೆಡಿಯಾಗಿರು, ಕಳ್ಳರನ್ನು ಕಾಯಲು ತಾನೇ ಖುದ್ದಾಗಿ ಬರುವುದಾಗಿ ಹೇಳಿದ. ಚೀಂಕ್ರನ ಕುತ್ತಿಗೆ ಹೆಮ್ಮೆಯಿಂದ ಉಬ್ಬಿತು, ತಾನು ಗೌಡರ ಆಪತ್‌ಸಮಯದ ಸೇನಾನಿ ಎಂದು. "ಇವತ್ತು ಆ ಕಲ್ಲು ಹೊಡೆಯೋ ಕಳ್ಳ ನನಮಕ್ಕಳ ಮುಕ್ಕಿ ಹುಡಿ ಮಾಡಿದಿದ್ದರೆ ಯಾರೆ" ಎಂದು ಮೀಸೆ ತಿರುವಿದ.



# ಅಧ್ಯಾಯ ೧೭



ಕ್ಲಾಸು ಬಿಟ್ಟ ಕೂಡಲೇ ಬೇಗಬೇಗ ತಂತಮ್ಮ ಪ್ರಾಣಮಿತ್ರರು ಎಲ್ಲೆಲ್ಲಿದ್ದಾರೆ ಎಂದು ಹುಡುಕಿಕೊಂಡು ಹುಡುಗರೆಲ್ಲಾ ಹರಟಲು ನಾಲಿಗೆ ಸಾಣೆ ಹಿಡಿಯುತ್ತಾ ಇದ್ದರು. ರಮೇಶನಿಗೆ ಅಡ್ಡಾಡುವ ತಲೆಗಳ ನಡುವೆ ರಫಿಯ ಕ್ರಾಪು ಕಂಡಿತು.

"ಏನೋಮ್ಮ ರಫಿ. ಇದ್ಯಾಕೋ ಹರಳೆಣ್ಣೆ ಮುಖ ಮಾಡಿಕೊಂಡಿದೀಯಾ?" ಎಂದ.

"ಹುಶಾರಿಲ್ಲಾ ಕಣೋ, ಭೇದಿ ಹತ್ತಿಕೊಂಡು ಔಷಧಿ ತಗೊಂಡು ಬಂದಿದ್ದೇನೆ. ಈಗ ಸ್ವಲ್ಪ ವಾಸಿ" ಎಂದ ರಫಿ. 'ಅದಿರ್ಲಿ. ಮೊನ್ನೆ ರಾತ್ರಿ ವಿಷ್ಯ ಯಾರಿಗೂ ಗೊತ್ತಾಗದಂತೆ ಕಾಣ್ಲಿಲ್ಲ ಕಣೋ. ಗೂಗ್ಲಿ ಹೇಳಿದ್ದು ಒಳ್ಳೇ ಐಡಿಯಾ' ಎಂದು ಸಮಾಧಾನ ವ್ಯಕ್ತಪಡಿಸಿದ.

"ರಫಿ ಸೀಕ್ರೆಟ್ ಅಂದರೆ ಸೀಕ್ರಟ್. ಅದರ ವಿಷಯ ನನ್ನತ್ರಾನೂ ಎತ್ತಕೂಡದು, ನೀನು ಕೂಡ ಮರ್‍ತೇ ಬಿಡಬೇಕು. ಹಿಂಗೆಲ್ಲಾ ನಾಕು ಸಾರಿ ಮಾತಾಡಿದರೆ ಔಟಾಗಿ ಬಿಡುತ್ತೆ ಗೊತ್ತ" ಎಂದು ರಮೇಶ ರಫಿಯನ್ನು ಎಚ್ಚರಿಸಿದ. ಅಷ್ಟರಲ್ಲಿ ಚಂದ್ರ, ಗೂಗ್ಲಿ ಇವರೆಲ್ಲಾ ಇವರಿಬ್ಬರನ್ನು ನೋಡಿ ಇವರ ಬಳಿಗೆ ಬಂದರು. ವಿಷಯ ಬದಲಾಯಿಸಲು ರಮೇಶ "ಏನೋ ರಫಿ ಹೋಗಿ ಹೋಗಿ ಎಂಥಾ ರೋಗ ಹತ್ತಿಸಿಕೊಂಡು ಬಂದಿದೀಯೋ" ಎಂದ.

"ನಾನೇನು ಮಾಡ್ಲೋ, ನಾವೇನು ಬೇಕಂತ ರೋಗ ಹತ್ತಿಸಿಕೋತಿವಾ?" ಎಂದ ರಫಿ.

"ಹಂಗಲ್ಲೋ ಕೊಂಚ ನೋಡಿ ಮಾಡಿ ಹೋಗೋದು ಬಿಟ್ಟು ಗಲ್ಲೀ ಪಲ್ಲಿಗೆಲ್ಲಾ ನುಗ್ಗಿದರೆ ಇನ್ನೇನಾಗುತ್ತದೆ" ಎಂದ ರಮೇಶ.

ಹತ್ತಿಸಿಕೊಂಡು ಬರೋ ರೋಗ! ಹಾಗಾದರೆ ಮೇಹರೋಗವೆ ಇರಬೇಕು ಎಂದು ಆಗತಾನೆ ಬಂದ ಗೆಳೆಯರು ಗ್ರಹಿಸಿ ಉತ್ಸಾಹ ಕುತೂಹಲಗಳಿಂದ ರಫಿಯ ಅನುಭವಾಮೃತವನ್ನು ಸವಿಯಲು ಮುಂದಾದರು. ಚಂದ್ರ, "ಏನೋಮ್ಮ ಎಲ್ಲೋಗಿದ್ಯೋ?"

"ಅದೇ ಇದೆಯಲ್ಲಾ ಮಲಬಾರು ಹೋಟೆಲು ಗಲ್ಲಿ!" ಎಂದ ರಮೇಶ

"ಅರೆತ್ತೇರಿ! ಅಲ್ಯಾವಳು ಸಿಕ್ಕಿದಳಯ್ಯಾ ನಿನಗೆ" ಎಂದ ಗೂಗ್ಲಿ.

ತಕ್ಷಣ ರಫಿಗೆ ಅರ್ಥವಾಯ್ತು. ಇವರು ಯಾ ಅರ್ಥದಲ್ಲಿ ನನ್ನ ರೋಗವನ್ನು ಗ್ರಹಿಸಿದ್ದಾರೆ ಎಂದು.

"ಥೂ ಬಡ್ಡೀ ಮಕ್ಳ, ನಿಮ್ಮ ತಲೇ ಒಳಗೆ ಯಾವಾಗ್ಲೂ ಇದೇ ಕಣ್ರೋ."

"ಇರ್ಲಿ ಕಣೋಮ್ಮಾ ಫ್ರೆಂಡ್ಸ್ ಹತ್ರಾ ಎಲ್ಲಾ ಏನೋ ಗುಟ್ಟು. ನಮಗೂ ಒಂಚೂರು ಹೇಳು. ನಾವೂ ಎಂಜಾಯ್ ಮಾಡೋಣ" ಎಂದ ಗೂಗ್ಲಿ.

"ಕಚಡಾ ರ್‍ಯಾಸ್ಕಲ್, ನೀನಿರಬಹುದು ಅಂಥೋನು. ಊಟ ಸರಿ ಇಲ್ದೇ ಭೇದಿ ಹಿಡಿದುಕೊಂಡಿದೆ ಅಂದರೆ ನೀನು ನಿನ್ನ ಬುದ್ಧಿ ತೆಗೆದೆಯಲ್ಲಾ ಪೋಲಿ ರ್‍ಯಾಸ್ಕಲ್" ಎಂದು ರಫಿ ಈವರೆಗೂ ತಿಳಿಯದೆ ಸಂಭಾಷಣೆ ಮುಂದುವರೆಸಿದ್ದಕ್ಕೆ ನಾಚಿಕೊಂಡ.

ಅಷ್ಟರಲ್ಲಿ ಅಂಗಾರ ಬರುತ್ತಿರುವುದು ಕಂಡಿತು. ಅಂಗಾರ ಬಂದು ರಮೇಶನನ್ನು "ಮೇಷ್ಟ್ರು ಕರೀತಿದ್ದಾರೆ ಕಣೋ ನಿನ್ನ" ಎಂದು ರಮೇಶನಿಗೆ ಹೇಳಿದ.

"ಯಾವ ಮೇಷ್ಟ್ರೋ?"



"ನಂ ಮೇಷ್ಟ್ರು, ರಾಮಚಂದ್ರ!"

ಇಬ್ಬರೂ ಟೀಚರ್ಸ್ ರೂಮಿನ ಕಡೆಗೆ ಹೋದರು. ರಾಮಚಂದ್ರ ಗಂಭೀರವಾಗಿ ಕುಳಿತದ್ದ.

"ರಮೇಶ್ ನಮ್ ಸ್ಟೂಡೆಂಟ್ಸ್ ಯಾರಯ್ಯ, ಮನೆ ಮೇಲೆ ಕಲ್ಲೆಸೆಯೋದು ಇವೆಲ್ಲ ಕಿತಾಪತಿ ಮಾಡ್ತಾರಂತಲ್ಲ" ಎಂದು ರಾಮಚಂದ್ರ ಕೇಳಿದ.

ಅಂಗಾರನಿಗೂ ರಮೇಶನಿಗೂ ರಕ್ತ ತಣ್ಣಗಾಗತೊಡಗಿತು.

ನಮ್ಮ ಸೀಕ್ರೆಟ್ ಔಟಾಗಿದೆ!

ಕೊಟ್ಟ ಕೈ ಗೂಗ್ಲಿ ಸೂಳೇಮಗ!

ಅವನದ್ದೇ ಇರಬೇಕು ಈ ಕೆಲಸ!

ಇವರ ಮುಖ ಪೆಚ್ಚಾಗಿ ಧರೆಗಿಳಿದುದನ್ನು ಕಂಡು ರಾಮಚಂದ್ರನಿಗೆ ಗುಮಾನಿ ಬಲವಾಯ್ತು.

"ಯಾರ್ ಸಾರ್ ನಿಮಗೆ ಇದನ್ನ ಹೇಳಿದ್ದು?" ಒಣಗಿದ ನಾಲಿಗೆ ಒದ್ದೆ ಮಾಡಿಕೊಂಡು ಅಂಗಾರ ಕೇಳಿದ. ಬೆಳಿಗ್ಗೆ ಹುಡುಗಿಯರು ತಮ್ಮ ತಮ್ಮಲ್ಲೇ ಮಾತಾಡುತ್ತಾ ಹೋಗಿದ್ದು ಈಗ ರಮೇಶನಿಗೆ ಅನೇಕ ಅರ್ಥಗಳನ್ನು ಹೊಮ್ಮಿಸತೊಡಗಿತು. ಅಂಗಾರನಂತೂ ಈ ವಿಷ್ಯ ಗುಟ್ಟಾಗಿದೆಯೋ ಇಲ್ಲವೋ ತಿಳಿಯದೆ ಕಾಲೇಜಿಗೆ ಮುಖ ಹಾಕಿದ್ದೇ ತಪ್ಪಾಯ್ತೆಂದು ಕೊರಗಿದ.

"ಯಾರಾದರೂ ಇರ್ಲಿ ರಮೇಶ. ಈ ವಿಷಯ ಏನೂಂತ ಕೇಳಿದೆ ಅಷ್ಟೇ."

"ಗೂಗ್ಲಿ ಅಲ್ಲವಾ ಸಾರ್."

"ಛೇ ಛೇ ಅವನಲ್ಲ. ಯಾಕೆ ಯಾರೂಂತ ಕೇಳ್ತಿದ್ದಿ?"

"ನೋಡಿ ಸಾರ್, ಸ್ನೇಹಿತ ಅಂದರೆ ನಾನು ಬೇಕಾದರೆ ಪ್ರಾಣಕ್ಕೆ ಪ್ರಾಣ ಕೊಡ್ತೀನಿ. ಆದರೆ ಈ ತರ ಬೆನ್ನಿಗೆ ಚೂರಿ ಹಾಕೋದಾದರೆ ಅಲ್ಲಿಗೆ ಅವನ್ನ ಫಿನ್ನಿಷ್."

ಫಿನ್ನಿಷ್ ಅಂದುದನ್ನು ಕಂಡು ರಾಮಚಂದ್ರನಿಗೆ ಗಾಬರಿಯಾಯ್ತು. ಯಾರು ಹೇಳಿದರೆಂದು ನಿಜವನ್ನು ಹೇಳಿದರೂ ಆಗಲೂ ಇವರು ಫಿನ್ನಿಷ್ ಮಾಡೋದಕ್ಕೆ ಹೋದರೆ!

"ಇಲ್ಲಪ್ಪಾ ನಿಮ್ಮ ಸ್ನೇಹಿತರು ಯಾರೋ ಹೇಳಲಿಲ್ಲ. ಆದರೆ ನೀವು ಯಾಕೆ ಇಂಥಾ ಕೆಲಸಕ್ಕೆ ಹೋದಿರಿ. ಕ್ರಾಂತಿಗೂ ಇದಕ್ಕೂ ಯಾವ ಸಂಬಂಧವೂ ನನಗೆ ಕಾಣ್ತಿಲ್ವಲ್ಲ."

"ಯಾವ ಕೆಲಸ ಸಾರ್?"

"ಕಲ್ಲು ಎಸೆಯೋದು."

"ಥತ್, ಯಾವ ಬೇವರಸಿ ಸಾರ್ ಕಲ್ಲೆಸೆದೋನು? ಅದಕ್ಕೇ ಕೇಳಿದ್ದು ನಿಮ್ಮ ಹತ್ರ ಹೇಳ್ದೋನು ಯಾರು ಹೇಳಿ ಅಂತ."

"ಹೇಳ್ತೇನೆ. ನೀವು ಫಿನಿಷ್ ಮಾಡ್ತೀವಿ ಅಂತ ಹೊರಟರೆ ಮತ್ತೆ ಇದಕ್ಕೆಲ್ಲಾ ನಾನೇ ಕಾರಣ ಅಂತ ವರ್ಗ ಮಾಡ್ತಾರೆ."

"ಇಲ್ಲ ಸಾರ್, ನಿಮಗೆ ತೊಂದರೆ ಆಗೋ ಅಂತ ಕೆಲಸಕ್ಕೆ ನಾವು ಹೋಗೋದಿಲ್ಲ ಸಾರ್."

"ನಮ್ಮ ಕಾಲೇಜಿನ ಜಯಂತಿ ಇದ್ದಾರಲ್ಲ" ಎಂದ ರಾಮಚಂದ್ರ.

ಅವಳ ಹೆಸರು ಕೇಳಿಯೇ ಇಬ್ಬರಿಗೂ ಮೂರ್ಛೆ ಬರುವಂತಾಯ್ತು. "ಅವರ ತಂದೆ ಅಂತೆ ಕೃಷ್ಣೇಗೌಡರು. ನಿನ್ನೆ ಜೀಪಿಲ್ಲಿ ಬಂದು ನನ್ನನ್ನು ಕರಕೊಂಡು ಹೋಗಿ ಹೇಳಿದರು. ಯಾರೋ ಕಾಲೇಜ್ ಹುಡುಗರಂತೆ ಸಾರ್ ನಮ್ಮ ಆಳುಗಳ ಜೊತೆ ಜಗಳ ಆಡಿದರು. ಆ ಕೋಪದಲ್ಲಿ ಇನ್ನೂ ಮನೆ ಮೇಲೆ ಕಲ್ಲೆಸೀತಿದ್ದಾರೆ. ನೀವು ಕೊಂಚ ಹೇಳಬೇಕು ಎಂದರು. ಅದಕ್ಕೇ ನಿಮ್ಮನ್ನು ವಿಚಾರಿಸಿದೆ. ನೀವ್ಯಾಕೆ ಆಳುಗಳ ಜೊತೆ ಹೊಡೆದಾಟಕ್ಕೆ ಹೋದಿರಿ. ಕಲ್ಲು ಹೊಡೆದಿಲ್ಲಾಂತೀರ?"

ಅಂಗಾರ ಹೇಳಿದ "ನೋಡಿ ಸಾರ್ ನಿಮ್ಮ ಮೇಲೆ ನಮಗೆ ನಂಬಿಕೆ ಇದೆ. ನೀವೂ ನಮ್ಮ ಮಾತಲ್ಲಿ ನಂಬಿಕೆ ಇಡಿ, ಕಲ್ಲು ಹೊಡೆದಿದ್ದೆಲ್ಲಾ ಬರೀ ಢೋಂಗಿ. ಆಳುಗಳ ಜೊತೆ ಹೊಡೆದಾಟ ಆಡಿದ್ದು ನಿಜ. ಇಂಗ್ಲಿಷ್‌ಗೌಡನ್ನ ಅವರ ಕಡೆಯೋರು ಕಲ್ಲು ಹೊಡೆದಾಂತ ಸುಳ್ಳೇ ಹಿಡಿದು ಕೊಂಡು ಹೊಡೆಯುತ್ತಿದ್ದಾಗ ನಮ್ಮ ಕೈಗೆ ಸಿಕ್ಕಾಕಿಕೊಂಡರು. ಹಿಡುಕೊಂಡು ಸರ್‍ಯಾಗಿ ಕೊಟ್ಟೆವು. ಸ್ನೇಹಿತನಿಗೆ ಹೊಡೆದರೆ ನೋಡಿಕೊಂಡಿರೋದು ಕ್ರಾಂತೀನ ಸಾರ್?"

ಅಂಗಾರ ರಮೇಶ ಇಬ್ಬರೂ ತಮ್ಮ ನೆಚ್ಚಿನ ಮಾಸ್ತರಿಗೆ ಮೊನ್ನೆ ಸಾಯಂಕಾಲ ನಡೆದುದನ್ನೆಲ್ಲಾ ಸವಿವರವಾಗಿ ವರದಿ ಮಾಡಿದರು.

ಅಂಗಾರ ಕೊನೆಗೆ ಹೇಳಿದ "ಇದನ್ನ ಗುಟ್ಟಾಗಿಟ್ಟಿದ್ದು ಯಾಕಂದ್ರೆ ಸಾರ್, ಲೇಡೀಸಿಗೆ ಈ ವಿಷ್ಯ ಗೊತ್ತಾಗಬಾರದು ಅಂತ. ಈಗ ನಿಮಗೆ ಈ ವಿಸ್ಯ ಹೇಳಿದ ಹಾಗೆ ಅವರಿಗೆ ಯಾರಾದ್ರೂ ಹೇಳಿದರೆ ನಾವೇ ಮನೆ ಮೇಲೆ ಕಲ್ಲೆಸೆಯೋರೂ ಅಂತ ಅವರು ತಿಳಿದರೆ! ಅವರಿಗೆ ನಿಜವಾಗಿ ನಡೆದದ್ದೇನೂಂತ ಸತ್ಯ ತಿಳಿಸೋ ಹಂಗೂ ಇಲ್ಲವಲ್ಲ ಸಾರ್. ನಿಮ್ಮಂಗೆ ಅವರು ನಮ್ಮನ್ನ ಕರೆಸಿ ಕೇಳ್ತಾರಾ! ನಿಮ್ಮ ಬಾಯಲ್ಲಿ ಈ ಸುದ್ದಿ ಬಂದಿದ್ದೇ ನಮಗೆ ಪ್ರಾಣ ಹೋದ ಹಾಗೆ ಆಗಿದೆ!"



"ಮತ್ತಾರು ಅಂಗಾರ ಈ ಕೆಲಸ ಮಾಡೋರು!"

"ಯಾರಿಗೆ ಗೊತ್ತೂ ಸಾರ್! ಅವನ್ಯಾವನು ಅಂತ ಪತ್ತೆ ಮಾಡಿ ನಾಲ್ಕು ಒಡೆಯೋದು ಬಿಟ್ಟು ಸುಮ್ಮನೆ ದಾರೀಲಿ ಹೋಗೋ ನಮ್ಮಂತೋರಿಗೆ ಹೋಡೀತಾರಲ್ಲ ಸಾರ್! ನಮ್ಮ ಕಾಲೇಜು ಹುಡುಗೀರ ಮನೇ ಮೇಲೆ ನಾವೇ ಎಲ್ಲಾರೂ ಕಲ್ಲೆಸೆಯೋದಕ್ಕಾಗುತ್ತಾ ಸಾರ್. ನಿಜ ಹೇಳಬೇಕೆಂದರೆ ನಾವೇ ಹೋಗಿ ಅವನ್ಯಾವನೂಂತ ಪತ್ತೇಮಾಡಿ ಒದೀಬೇಕಂತ ಅನ್ನಿಸ್ತಿದೆ. ಅಂತಾದರಲ್ಲಿ ಹುಡುಗಿಯರು ನಾವೇ ಕಲ್ಲೆಸೀತಿದ್ದೀವಂತೆ ತಿಳ್ಕೋಂಡರೆ ನಮಗೆಷ್ಟು ದುಃಖ ಆಗಬಹುದು ಯೋಚಿಸಿ ಸಾರ್" ಅಂಗಾರ ತನ್ನ ಹೃದಯದ ಆಳಲನ್ನು ತೋಡಿಕೊಂಡ.

"ನೀವು ಪತ್ತೆಗಿತ್ತೆ ಮಾಡೊದಕ್ಕೆ ಹೋಗಬೇಡ್ರಪ್ಪಾ, ಮತ್ತೆ ಅವರ ಆಳುಗಳ ಜೊತೆ ಜಟಾಪಟಿ ಶುರುವಾಗುತ್ತೆ."

"ನಾವ್ಯಾಕೆ ಹೋಗೋಣ ಸಾರ್, ಏನೊ ನಮ್ಮ ಕಾಲೇಜು ಸ್ಟೂಡೆಂಟ್ಸಿಗೆ ತೊಂದರೆ ಆದ್ರೆ ನಮಗೇ ಆದ ಹಾಗೆ ಅಂತ ಹಾಗೆ ಹೇಳಿದೆವು ಅಷ್ಟೇ. ನಾವು ಆ ಕಡೆ ಮುಖ ಹಾಕೋದಿಲ್ಲ" ಎಂದ ರಮೇಶ.

# ಅಧ್ಯಾಯ ೧೮



ಚೇಂಕ್ರ ನಸುಕಾಗುವ ವೇಳೆಗೆ ಸರಿಯಾಗಿ ಕೇಪಿನ ಕೋಪಿ ಹಿಡಿದು ಗೌಡರ ಮನೆ ಹತ್ತಿರ ಹೋದ. ಗೌಡರು ಬಲಗೈಯಲ್ಲಿ ತೋಟಾ ಕೋವಿಯನ್ನು ಎಡಗೈಯಲ್ಲಿ ಐದು ಸೆಲ್ಲಿನ ಟಾರ್ಚನ್ನೂ ಹಿಡಿದು ಮನೆಯಿಂದಿಳಿದರು. ಆಗಲೇ ಮನೆಯೊಳಗೆ ಸೇರಿದ್ದ ತೋಟದಾಳುಗಳೆಲ್ಲ ಕಿಟಕಿಯೊಳಗಿನಿಂದಲೇ ಇಣುಕಿ ಇಬ್ಬರು ಶಿಕಾರಿದಾರ ವೀರಾಗ್ರಣಿಗಳು ಹೋಗುತ್ತಿರುವುದನ್ನು ನೋಡಿದರು. ಮೇಸ್ತ್ರಿ ಇಲ್ಲೇ ತೋಟದ ಬೇಲಿ ಹಿಂದೆ ಇರ್ತೀವಿ. ಆ ಕಡೆ ಬಯಲು, ಯಾರು ಓಡಾಡಿದರೂ ಕಾಣ್ತದೆ. ನೀವು ಮಾತ್ರ ಯಾರೂ ಹೊರಗಡೆ ಬರಬೇಡಿ,



ಅಪ್ಪಿತಪ್ಪಿ ಏನಾದರೂ ಗುಂಡು ತಾಗಿದರೆ ನನ್ನ ಜವಾಬ್ದಾರಿ ಅಲ್ಲ. ಈಗ್ಲೇ ಹೇಳಿದೀನಿ. ಈವತ್ತು ಕಲ್ಲು ಬಂದ ಕಡೆಗೆಲ್ಲಾ ಒಂದೊಂದು ಈಡು ಲಗಾಸಿ ಬಿಡ್ತೀನಿ. ನಾನಂತೂ ನಿಶ್ಚೈಸಿದೀನಿ' ಎಂದು ಕೃಷ್ಣೇಗೌಡ ಕೂಗಿ ಎಚ್ಚರಿಕೆ ಕೊಟ್ಟ. ಗೌಡರ ಮನೆಗೆ ಸನಿಹದಲ್ಲೇ ಬೇಲಿ ಇತ್ತು. ಆದರಾಚೆಗೆ ಒಂದು ವಿಶಾಲವಾದ ಬಯಲು. ಅದನ್ನು ದಾಟಿದರೇ ಕೆಸರೂರಿನ ಹರಿಜನರ ಕೇರಿ.

ಇಬ್ಬರೂ ಹೋಗಿ ಬೇಲಿ ಆಚೆ ಬಯಲಿನ ಅಂಚಿನಲ್ಲಿ ಮಳೆಯ ನೀರು ಹರಿದು ಹೋಗಲು ಮಾಡಿದ್ದ ಚರಂಡಿಯೊಳಗೆ ಅವಿತುಕೊಂಡು ಕುಳಿತರು. ನೀರು ಹರಿದು ಹರಿದು ಚರಂಡಿ ಸುಮಾರು ನಾಲ್ಕಾರು ಅಡಿ ಆಳವಾಗಿತ್ತು. ಕತ್ತಲು ಕತ್ತಲಾಗತೊಡಗಿತ್ತು. ಗೌಡರು ಕೋವಿಗೆ ತೋಟಾ ತುಂಬಿಕೊಂಡರು. ಆ ಚರಂಡಿ ತೋಟದ ಆಳುಗಳಿಗೆ ಹಾದಿಹೋಕರಿಗೆ ಎಲ್ಲ ಪಾಯಿಖಾನೆ ಮಾಡಲು ಪ್ರಶಸ್ತವಾದ ಸ್ಥಳವಾಗಿತ್ತು. ಹಾಗಾಗಿ ಇಬ್ಬರಿಗೂ ಕೊಂಚ ಹೊತ್ತ ಕುಳಿತುಕೊಳ್ಳುವುದರೊಳಗೇ ದುರ್ವಾಸನೆ ತಾಳಲಸದಳವಾಯ್ತು.

"ಚೇಂಕ್ರ ಈ ಹೇಲು ನಾತದಲ್ಲಿ ನನಗೆ ಮೂರ್ಛೆ ಬರ್ತಿದೆ ಕಣೋ. ಬೇರೆಲ್ಲಾದರೂ ಜಾಗ ನೋಡು" ಎಂದ ಕೃಷ್ಣೇಗೌಡ.

"ಸೂಳೇಮಕ್ಳು, ಹೋಗಿ ತೋಟದಾಗಾದರೂ ಹೇಲ್ರೋ, ಗೋಬ್ರನಾರೂ ಆಗ್ತದೆ ಅಂದ್ರೆ ಕೇಳೋಲ್ಲ. ಇಲ್ಲೇ ಬಂದು ಸಾಯ್ತಾರೆ" ಎಂದು ಚೇಂಕ್ರ ಗೊಣಗಿದ.

ಕೃಷ್ಣೇಗೌಡ ಪಕ್ಕಕ್ಕೆ ತಿರುಗಿ 'ಅಯ್ಯಯ್ಯೋ ಯಾವನೋ ಒಂದು ಹಡಿಗೆ ಪಾಯ್ಖ್ಯಾನೆ ಮಾಡಿದಾನೆ ಮಾರಾಯ. ನನ್ನಿಂದ ಸಾಧ್ಯಾನೇ ಇಲ್ಲ' ಎಂದು ಚರಂಡಿಯಿಂದ ಚಿಮ್ಮಿ ಹೊರ ನೆಗೆದು ನಿಂತ. ಇಬ್ಬರೂ ಪಾಯಿಖಾನೆ ಇಲ್ಲದ ಜಾಗ ಒಂದನ್ನು ಚರಂಡಿಯುದ್ದಕ್ಕೂ ತಲಾಷು ಮಾಡುತ್ತಿರಬೇಕಾದರೆ ಠಾಪ್ ಎಂದು ಮನೆಯ ಮೇಲೊಂದು ಕಲ್ಲು ಬಿದ್ದಂತೆ ಸದ್ದು ಕೇಳಿತು!

ಚೇಂಕ್ರನೂ ಕೃಷ್ಣೇಗೌಡನೂ ಪಿಸುಮಾತಿನಲ್ಲೇ ಓಡಾಟ ನಿಲ್ಲಿಸಿ ಮತ್ತೆ ದುಬುಕ್ಕನೆ ಚರಂಡಿಯೊಳಗೆ ಹುದುಗಿ ಕುಳಿತರು. ಕತ್ತಲಾಗತೊಡಗಿತ್ತು. ಮರಗಿಡಗಳೆಲ್ಲ ಛಾಯಾ ಮಾತ್ರವಾಗಿ ಮನಸ್ಸಿನ ಊಹೆಯ ಎರಕಕ್ಕೆ ತಕ್ಕ ರೂಪ ಪಡೆಯತೊಡಗಿದ್ದವು.

ಇನ್ನೇನೋ ಹೆಂಚಿನ ಮೇಲೆ ಉರುಳಿದ ಸದ್ದು!

"ಸೂಳೇಮಕ್ಕಳು ಸುರೂ ಮಾಡಿದ್ರಂತ ಕಾಣ್ತದೆ!' ಎಂದ ಚೇಂಕ್ರ. ಕತ್ತಲಿಗೆ ಆಗಲೇ ಹೊಂದಿಕೊಂಡಿದ್ದ ಕಣ್ಣುಗಳಿಂದ ಬಯಲಿನತ್ತ ದೃಷ್ಟಿ ಹಾಯಿಸಿ 'ಯಾವನೂ ಕಾಣ್ತಿಲ್ವಲ್ರಯ್ಯ!" ಎಂದ.

ಇಬ್ಬರೂ ಸುಮ್ಮನೆ ಕುಳಿತರು. ಹೆಮ್ಮರಗಳ ಬೃಹದಾಕಾರದ ಕರಿಯ ಛಾಯೆಯಲ್ಲಿ ಗಿರಿಕಂದರಗಳನ್ನು ಕವಿದಿದ್ದ ಮಹಾಮೌನದಲ್ಲಿ ಇಬ್ಬರಿಗೂ ತಾವು ಹಿಡಿದಿದ್ದ ಬಂದೂಕು ಒಂದು ಕ್ಷುದ್ರ ಆಯುಧದಂತೆ ಕಂಡಿತು.

ಹಾಗೇ ಇಬ್ಬರೂ ಕಳ್ಳರ ನಿರೀಕ್ಷೆಯಲ್ಲಿ ತವಕದಿಂದ ಕಾಯುತ್ತಾ ಇರಬೇಕಾದರೆ ಚರಕ್ ಎಂದಿತು ಒಂದು ಹೆಜ್ಜೆ ಸದ್ದು. ಇಬ್ಬರೂ ಕಳವಳದಿಂದ ಅತ್ತ ತಿರುಗಿದರು. ನಸುಗತ್ತಲಲ್ಲಿ ಏನೂ ಕಾಣಲಿಲ್ಲ. 'ಚರಕ್ ಚರಕ್' ಮತ್ತೆರಡು ಹೆಜ್ಜೆ ಸದ್ದುಗಳು ಕೃಷ್ಣೇಗೌಡ ಕೋವಿ ಎತ್ತಿದ. ಆದರೆ ಬರಿಯ ಸದ್ದು! ಚರಕ್ ಚರಕ್ ಚರಕ್ ಚರಕ್ ಹೆಜ್ಜೆ ಸದ್ದು ಅವರತ್ತಲೇ ಬರಲಾರಂಭಿಸಿತು. ಬರಿಯ ಸದ್ದನ್ನಾಧರಿಸಿಯೇ ಅವರ ಕಲ್ಪನೆ ಅಗೋಚರ ಶೂನ್ಯದಲ್ಲಿ ಭೂಮ್ಯಂತ ರಿಕ್ಷಗಳನ್ನು ವ್ಯಾಪಿಸಿದ ಭಯಂಕರ ರೂಪಗಳನ್ನೂ ವಿಕಾರಾಕೃತಿಗಳನ್ನೂ ಸೃಜಿಸತೊಡಗಿತು. ಇಬ್ಬರಿಗೂ ಏನು ಮಾಡಬೇಕೆಂದು ತೋಚಲಿಲ್ಲ. ಹೆಜ್ಜೆ ಸದ್ದು ವೇಗವಾಗಿ ಹತ್ತಿರಾಗಿ ಇವರ ಸಮೀಪಕ್ಕೆ ಬಂದು ತಟಕ್ಕನೆ ನಿಂತಿತು. ಇಬ್ಬರಿಗೂ ಎದೆ ಜಂ ಎಂದಿತು. ಯಾವುದೋ ಒಂದು ಅದೃಶ್ಯ ವ್ಯಕ್ತಿತ್ವದ ಸಾನ್ನಿಧ್ಯ ಇಬ್ಬರಿಗೂ ಅನುಭವಗಮ್ಯವಾಗತೊಡಗಿತು. ಅಷ್ಟರಲ್ಲಿ ಹೆಜ್ಜೆ ಸದ್ದು ಸರಸರ ಅದೇ ವೇಗದಲ್ಲಿ ದೂರಾಯ್ತು. ಹಲವು ಕ್ಷಣಗಳೊಳಗೇ ಹೆಜ್ಜೆ ಸದ್ದು ಮೌನದಲ್ಲಿ ಲೀನವಾಯ್ತು.

ನೂರಾರು ರಾತ್ರಿಗಳನ್ನು ಕಾಡಿನಲ್ಲಿ ಕಳೆದಿದ್ದ ಚೀಂಕ್ರನಿಗೆ ಕೊಂಚವಾದರೂ ಬುದ್ಧಿ ಸ್ಥಿಮಿತದಲ್ಲಿದ್ದಿದ್ದರೆ ತರಗೆಲೆಗಳಡಿ ಚರ ಚರ ಎಂದು ಛಂದೋಬದ್ಧವಾಗಿ ಹರಿದುಬಂದ ಚಿಕ್ಕ ಹಾವುರಾಣಿಯನ್ನು ಗಮನಿಸುತ್ತಿದ್ದ. ಆದರೆ ಎಲ್ಲಿಂದಲೋ ರಹಸ್ಯದಿಂದ ಬಂದು ಬೀಳುವ ಕಲ್ಲು, ಕತ್ತಲು, ಮರಗಳ ಛಾಯಾಕೃತಿಗಳು, ಎಲ್ಲ ಸೇರಿ ಇಬ್ಬರ ತಲೆಯನ್ನೂ ಸಂಪೂರ್ಣವಾಗಿ ಕೆಡಿಸಿದ್ದವು.

ಇಬ್ಬರೂ ತಮಗಾದ ದುಃಸ್ವಪ್ನದ ಬಗ್ಗೆ ಒಂದು ಚಕಾರವನ್ನೂ ಎತ್ತದೆ, ಕೋವಿ ಬಿಗಿಯಾಗಿ ಹಿಡಿದುಕೊಂಡು ಕುಳಿತರು. ಮತ್ತೆ ಎಂಥದೋ ಬಿದ್ದಸದ್ದು.

"ಇದೇನೋ ಚೀಂಕ್ರ? ಎಲ್ಲಿ ಕದ್ದು ಕೂತು ಕಲ್ಲು ಎಸೀತಾರೋ?" ಎಂದ ಕೃಷ್ಣೇಗೌಡ.

"ಮಾತಾಡಬೇಡಿ ಅಯ್ಯ, ಸದ್ದು ಮಾಡಿದರೆ ಅವರಿಗೆ ನಮ್ಮ ಸುಳಿವು ಗೊತ್ತಾಗ್ತದೆ" ಎಂದ ಚೀಂಕ್ರ. ಅವರು ಅನಂತರ ಸುಮ್ಮನೆ ಮಾತಾಡದೆ ದಿಗಂತಗಳನ್ನು ನಿರುಕಿಸುತ್ತಲೇ ಇದ್ದರು. ದಿಗಂತ ಮೆಲ್ಲಗೆ ಚಂದ್ರೋದಯದ ಮುನ್ಸೂಚನೆಯೋ ಎಂಬಂತೆ ಪ್ರಕಾಶಮಾನವಾಯ್ತು. ತಮ್ಮ ಸಮೀಪದಲ್ಲೇ ಕಲ್ಲುಬಿದ್ದ ಸದ್ದಾಯ್ತು. ಕೃಷ್ಣಪ್ಪ ಚೀಂಕ್ರ ಇಬ್ಬರೂ ಕಣ್ಣಲ್ಲಿ ಕಣ್ಣಿಟ್ಟು ಬಯಲನ್ನು



ನಿರುಕಿಸಿದರು. ದಿಗಂತದಂಚಿನಲ್ಲಿ ಏನೋ ಚಲನೆ ಕಂಡಂತಾಯ್ತು. ಕೃಷ್ಣಪ್ಪ ಚಕ್ಕನೆ ಟಾರ್ಚು ಬಿಟ್ಟ ರೀತಿಯಲ್ಲಿ ಎರಡು ಕೆಂಡದಂಥ ಕಣ್ಣುಗಳು ಹೊಳೆಯಲಾರಂಭಿಸಿದವು. ರಾತ್ರಿ ಟಾರ್ಚ್ ಶಿಕಾರಿಯ ಅನುಭವವಿದ್ದ ಇಬ್ಬರಿಗೂ ಇದು ಯಾವುದೋ ಪ್ರಾಣಿಯ ಕಣ್ಣುಗಳೆಂಬುದಂತು ಸ್ಪಷ್ಟವಾಯಿತು. ಆದರೂ ಒಂದು ಬಗೆಯ ಅಸಾಮಾನ್ಯತೆಯ ವಾತಾವರಣದ ದೆಸೆಯಿಂದ ಇಬ್ಬರಿಗೂ ಗಾಬರಿ. ಮೆಲ್ಲಗೆ ಕಣ್ಣುಗಳು ಸಮೀಪವಾಗುತ್ತಾ ಸಮೀಪವಾಗುತ್ತಾ ಬರತೊಡಗಿತು. ಪಕ್ಕದಲ್ಲೇ ಮೂರ್ನಾಲ್ಕು ಕಲ್ಲು ಬಿದ್ದಂತೆನ್ನಿಸಿತು. ಕಣ್ಣುಗಳು ಇವರತ್ತಲೇ ಬರುತ್ತಲೂ ಹೆದರಿದ ಕೃಷ್ಣೇಗೌಡ ಒಕ್ಕೈಯಿಂದಲೇ ಹೇಗೋ ಗುರಿಹಿಡಿದು ತೋಟಾ ಕೋವಿಯ ಬಿಲ್ಲು ಎಳೆದ. ಗುರಿ ಸರಿಯಿರದೆ ಈಡು ಢಮಾರೆಂದು ಗಿರಿಕಂದರಗಳೆಲ್ಲ ಮೊಳಗುವಂತೆ ಘರ್ಜಿಸಿತು.

ಇವರತ್ತ ಬರುತ್ತಿದ್ದುದು ಕಿವಿ ಕೆಪ್ಪಾಗೆ ಹೋಗಿತ್ತು. ದವಡೆಯ ಗಾಯದಲ್ಲಿ ಹುಳುಗಳಾಗಿ ಅಸಾಧ್ಯ ಯಾತನೆಯಲ್ಲಿ ಅದಕ್ಕೆ ತಲೆಕೆಟ್ಟಂತಾಗಿ ಹುಚ್ಚು ಹಿಡಿದಂತೆ ಬೆಳಕಿನತ್ತ ಬರಲಾರಂಭಿಸಿತು. ಅದಕ್ಕೆ ಕೋವಿ ಈಡಿನ ಶಬ್ದ ಕೇಳಿಯೇ ಇರಲಿಲ್ಲ. ನರಿ ಸಾಕಷ್ಟು ಸನಿಹಕ್ಕೆ ಬಂದು ಮನುಷ್ಯರ ವಾಸನೆ ಸಿಕ್ಕೊಡನೆಯೇ ನಿಂತುಬಿಟ್ಟಿತು. "ಚೀಂಕ್ರ ಹೊಡಿ ಅದಕ್ಕೆ ಒಂದು ಈಡು" ಎಂದು ಕೃಷ್ಣಪ್ಪಗೌಡ ಪಿಸುಮಾತಿನಲ್ಲಿ ಚೀಂಕ್ರನಿಗೆ ಗದರಿದ. ಕೋವಿ ಈಡಿಗೂ ಹೆದರದೆ ದುರುಗುಟ್ಟಿಕೊಂಡು ನೋಡುವ ನರಿಯನ್ನು ಕಂಡು ಚೀಂಕ್ರನಿಗೆ ದಿಗಿಲಾಯ್ತು. ಅಷ್ಟರಲ್ಲೇ ನರಿ ಮತ್ತೆ ವೇಗವಾಗಿ ಹೋಗತೊಡಗಿತು. ಚೀಂಕ್ರ ಗಾಬರಿಯಲ್ಲಿ ಯದ್ವಾತದ್ವ ಒಂದು ಗುಂಡು ಹೊಡೆದ.

ಕೃಷ್ಣೇಗೌಡ ರೇಗಿ "ಥತ್ತೇರಿ ಹೆದರುಪುಕ್ಲ, ಈಡು ಹೊಡಿ ಅಂದರೆ ನಡುಗ್ತಾ ಆಕಾಶಕ್ಕೆ ಹೊಡೀತಿಯೋನೋ" ಎಂದು ಬಯ್ದ.

"ಇಲ್ರಯ್ಯ, ಅದರ ನಡವಳಿಕೆ ನೋಡಿ ಯಾಕೋ ಒಂಥರಾ ಆಯ್ತು. ಜೊತೆಗೆ ಆ ಕಡೆ ಗೋಸಾಯಿಗೋಳು ಬೇರೆ ಟೆಂಟು ಹಾಕಿದ್ದಾರೆ. ಈವತ್ತು ನೋಡಿದೆ. ಈಡು ಯಾರಿಗಾದರೂ ತಾಗಿದರೆ ಅಂತ ಮೇಲೆ ಹೊಡೆದೆ" ಎಂದ.

"ನಿನ್ನ ಕಟ್ಟಿಕೊಂಡು ನಾನು ಕಳ್ಳರನ್ನ ಹಿಡಿದಂಗೇ" ಎಂದು ಕೃಷ್ಣಪ್ಪಗೌಡ ತಿರಸ್ಕಾರದಿಂದ ಹೇಳಿದ. ಮತ್ತೆ ಒಂದೆರಡು ಕಲ್ಲು ಬಿದ್ದವು. ಚೀಂಕ್ರ ಬೆಳದಿಂಗಳಲ್ಲಿ ಮೆಲ್ಲಗೆ ತಲೆ ಎತ್ತಿ ಬಯಲನ್ನು ತುಂಬ ಹೊತ್ತು ನಿರೀಕ್ಷಿಸಿದ. ಅನಂತರ ಒಂದು ನೀಳ ನಿಟ್ಟುಸಿರು ಬಿಟ್ಟು ಗೌಡರ ಕಡೆ ತಿರುಗಿ 'ಅಯ್ಯಾ ಏಳಿ ಹೋಗೋಣ' ಎಂದ.

ಅವನು ಇದ್ದಕ್ಕಿದ್ದಂತೆ ಹಾಗೆ ತೀರ್ಮಾನಿಸಿದ್ದನ್ನು ಕಂಡು ಚಕಿತನಾದ ಕೃಷ್ಣೇಗೌಡ "ಯಾಕೋ ಏನಾಯ್ತೋ?" ಎಂದು ಕೇಳಿದ. ಸುತ್ತಮುತ್ತ ಹತಾಶನಂತೆ ನೋಡುತ್ತಿದ್ದ ಚೇಂಕ್ರ ಗೌಡರ ಕಡೆಗೆ ತಿರುಗಿ "ಏಳಿ ಅಯ್ಯಾ, ಇದ್ಯಾಕೋ ಮನ್‌ಷರ ಕೆಲಸ ಕಂಡಂಗೆ ಕಾಣ್ತಿಲ್ಲಾ" ಎಂದ.

ಚಂದ್ರ ಮೂಡಿದ್ದ. ತಿಳಿಬೆಳಕಿನ ಬೆಳ್ದಿಂಗಳ ಮಾಹೆಯಲ್ಲಿ ಎಲ್ಲ ಆಕೃತಿಗಳೂ ಒಂದೊಂದು ಬಗೆಯ ವ್ಯಕ್ತಿತ್ವ ಪಡೆದು ಇವರ ಸುತ್ತ ರಣಹದ್ದುಗಳಂತೆ ನಿಂತಿದ್ದವು. ಚೇಂಕ್ರನ ಮಾತನ್ನು ಕೇಳಿ ಕೃಷ್ಣಪ್ಪಗೌಡ ಕಳವಳದಿಂದ ಸ್ಥಂಬೀಭೂತನಾಗಿ ಕುಳಿತುಬಿಟ್ಟ.



# ಅಧ್ಯಾಯ ೧೯

ದಫೇದಾರ ಜೋಗಪ್ಪ ಕೃಷ್ಣಪ್ಪಗೌಡರ ತೋಟಕ್ಕೆ ಪೋಲೀಸ್ ಪಹರೆ ಹಾಕಲು ಮುಂದಾಗದುದಕ್ಕೆ ಕಾರಣ, ಹೀಗೆ ಸತಾಯಿಸಿದರೆ ಕೊನೆಗೆ ಲಂಚ ಬಿಚ್ಚುತ್ತಾನೆ. ಅನಂತರ ಬೀಟ್ ಹಾಕಿದರಾಯ್ತು ಇಂಬುವ ನಂಬಿಕೆಯ ಜೊತೆಗೇ ಜೂನಿಯರ್ ಕಾಲೇಜಿನ ಸಮಾರಂಭಕ್ಕೆ ಪೋಲೀಸ್ ನೆರವನ್ನು ಪ್ರಿನ್ಸಿಪಾಲರು ಕೇಳಿದ್ದೂ ಕಾರಣವಿತ್ತು. ಆ ಕಾಲೇಜಿನ ಮೂರ್ಖ ಪ್ರಿನ್ಸಿಪಾಲರು ಸಮಾರಂಭ ಸಾಂಗವಾಗಿ ನೆರವೇರಲು ಪೋಲೀಸರ ನೆರವನ್ನು ಕೋರುತ್ತಿದ್ದುದರಿಂದಲೇ ಜೂನಿಯರ್ ಕಾಲೇಜಿನ ಯಾವೊಂದು ಸಮಾರಂಭವೂ ಸುಸೂತ್ರವಾಗಿ ನೆರವೇರುತ್ತಿರಲಿಲ್ಲ. ಕರಿಯ ಪೋಲೀಸ್ ವ್ಯಾನನ್ನು ನೋಡಿದ ಕೂಡಲೇ ಕಡ್ಡಾಯವಾಗಿ ಹುಡುಗರಿಗೆ ತಳಮಳ ಆರಂಭವಾಗುತ್ತಿತ್ತು. ಶಿಳ್ಳೆಗಳು ಆರಂಭವಾಗುತ್ತಿದ್ದವು. ಪೋಲೀಸರಿಗೂ ಹುಡುಗರ ಮುಕುಳಿ ಮೇಲೆ ಲಾಠಿ ಆಡಿಸುವ ಚಪಲ ಆರಂಭವಾಗುತ್ತಿತ್ತು. ಇದಕ್ಕೆಲ್ಲಾ ಆ ಮೂರ್ಖನೂ ಪುಕ್ಕಲನೂ ಆದ ಪ್ರಿನ್ಸಿಪಾಲ ಮಹಾಶಯನ ಸಭೆ ಸಾಂಗವಾಗಿ ನೆರವೇರಿಸುವ ಹಂಬಲವೇ ಕಾರಣವಾಗಿತ್ತು.

ಜೂನಿಯರ್ ಕಾಲೇಜಿನ ಸಭೆಗೆ ಮುಖ್ಯ ಅತಿಥಿಗಳಾಗಿ ಸಂಶೋಧನ ಕೇಂದ್ರದ ಮುಖ್ಯಸ್ಥ ಡಾ॥ ಪಾಟೀಲರನ್ನು ಕರೆಸಿದ್ದರು. ಗೂಗ್ಲಿ, ರಮೇಶ, ರಫಿ ಎಲ್ಲಾ ಬೆಳಗಿನಿಂದಲೂ ರಾಮಚಂದ್ರನ ಬಳಿ ವಾದ ಮಾಡಿ ಕೊನೆಗೂ ಅವನನ್ನು ಒಪ್ಪಿಸಿ ಪಾಟೀಲರಿಗೆ ಅವರ ಮಂತ್ರ ತಂತ್ರಗಳ ಬಗ್ಗೆ ಪ್ರಶ್ನೆ ಕೇಳುವುದೆಂದು ತೀರ್ಮಾನಿಸಿದ್ದರು. ಏಕೆಂದರೆ ವಿಚಾರವಾದಿಗಳ ಸಂಘ ಆರಂಭವಾದಾಗಿನಿಂದ ವಿಚಾರವಾದಿಗಳಿಗೆ ಯಾವುದೇ ಒಂದು ಕಾರ್ಯಕ್ರಮವೂ ಸಿಕ್ಕದೇ, ಎಲ್ಲಿ ತಮ್ಮ ಜಾತಿವಿನಾಶ ಸಂಘಕ್ಕಾದ ಗತಿಯೇ ಇದಕ್ಕೂ ಆಗುತ್ತದೋ ಎಂದು ಅವರಿಗೆ ದಿಗಿಲಾಗಿತ್ತು. ಅಷ್ಟಲ್ಲದೆ ಈಚೆಗೆ ತಮ್ಮ ಮೇಲೆ ಪೋಕರಿಗಳೆಂದು ಬಂದಿರಬಹುದಾದ ಅಪಖ್ಯಾತಿಯನ್ನೂ ತೊಳೆದುಕೊಳ್ಳಬೇಕೆಂಬ ಹಂಬಲವೂ ಅವರಿಗಿತ್ತು. ಅವರು ತಮ್ಮ ಧೋರಣೆ ಚಟುವಟಿಕೆಗಳಿಗೂ ಒಂದು ಸೈದ್ಧಾಂತಿಕ ತಳಹದಿ ಇದೆ ಎಂದು ತೋರಿಸಿಕೊಳ್ಳಲು ಕಾತರರಾಗಿದ್ದರು. ಅದಕ್ಕಾಗಿ ಅಲ್ಲಿ ಕೇಳಬೇಕಾದ





ಪ್ರಶ್ನೆಗಳನ್ನೂ ರಾಮಚಂದ್ರನನ್ನೇ ಪೀಡಿಸಿ ಅವನಿಂದಲೇ ಸಿದ್ಧಪಡಿಸಿದ್ದರು. ಅಂತೂ ಕಾರ್ಯಕ್ರಮದ ವೇಳೆಗೆ ಅವರೆಲ್ಲಾ ಪ್ರಶ್ನೆಗಳನ್ನು ಸರಿಯಾಗಿ ಬಾಯಿಪಾಠ ಮಾಡಿಕೊಂಡು ಬಂದು ಕುಳಿತಿದ್ದರು. ಆದರೆ ಕಾಲೇಜು ಹುಡುಗಿಯರೆಲ್ಲಾ ಕಣ್ಣು ಕೋರೈಸುವ ಉಡುಗೆ ತೊಟ್ಟು ಫಳ ಫಳ ಹೊಳೆಯುತ್ತಾ ಸಭಾಂಗಣಕ್ಕೆ ಆಗಮಿಸುತ್ತಿದ್ದಂತೆಯೇ ಕ್ರಾಂತಿಕಾರಿಗಳಿಗೆ ಅನವಶ್ಯಕ ಗಾಬರಿ ದಿಗಿಲು ಆರಂಭವಾಗಿ ಪ್ರಶ್ನೆಗಳು ಕೆಲವರಿಗೆ ಒಂದೋಂದಾಗ ಮರೆತುಹೋಗತೊಡಗಿದವು. ಅವರ ಸೈದ್ಧಾಂತಿಕ ತಳಹದಿ ಮೆಲ್ಲಗೆ ಕುಸಿಯಲಾರಂಭಿಸಿತು.

ಕಾಲೇಜು ಸುಂದರಿ ವನಜಾಕ್ಷಿಯಿಂದ ಸ್ವಾಗತ ಗೀತೆ ಆರಂಭವಾಯ್ತು. ಆಕೆ ಯಾವುದೋ ಪ್ರೇಮಗೀತೆಯಂಥ ಸ್ವಾಗತ ಗೀತೆಯನ್ನು ಸುಶ್ರಾವ್ಯವಾಗಿ ಹಾಡಿದಳು. ಹುಡುಗರೆಲ್ಲಾ ಭಾವೋದ್ವೇಗದಿಂದ ಕೇಳಿದರು. ಪ್ರತಿಯೊಬ್ಬರೂ ಅವಳು ತಮ್ಮನ್ನು ಉದ್ದೇಶಿಸಿಯೇ ಹಾಡುತ್ತಿದ್ದಾಳೆ ಎಂದು ತಿಳಿದು ಅವಳ ಕಂಠಶ್ರೀಯನ್ನು ಮನಸಾರೆ ಸವಿಯುತ್ತಾ ಪುಂಗಿಯ ನಾದಕ್ಕೆ ತಲೆಯಾಡಿಸುವ ಹಾವುಗಳಂತೆ



ಓಲಾಡಿದರು. ವನಜಾಕ್ಷಿಯ ಹಾಡು ಮುಗಿಯಿತು. ಆದರೆ ಅವಳು ವೇದಿಕೆಯಿಂದ ಇಳಿಯುವುದು ಹುಡುಗರಿಗೆ ಸುತರಾಂ ಇಷ್ಟವಿರಲಿಲ್ಲ. ಅವರು ಇದನ್ನೊಂದು ಭಾವಗೀತೆಯ ಕಾರ್ಯಕ್ರಮ ಎನ್ನುವಂತೆಯೇ ತಿಳಿದು “ಒನ್ಸ್ ಮೋರ್, ಒನ್ಸ್ ಮೋರ್” ಎಂದು ಕೂಗತೊಡಗಿದರು. ವನಜಾಕ್ಷಿಗೆ ತನ್ನ ಅಗಾಧ ಅಭಿಮಾನಿಗಳ ಬಳಗವನ್ನು ನೋಡಿ ಇನ್ನೊಂದು ಹಾಡನ್ನು ಹಾಡಲು ಇಷ್ಟವಾಗಿ ಅನುಮತಿಗಾಗಿ ಪ್ರಿನ್ಸಿಪಾಲರತ್ತ ನೋಡುತ್ತಾ ವೇದಿಕೆಯ ಮೇಲೆ ನಿಂತೇ ಇದ್ದಳು.

ಪ್ರಿನ್ಸಿಪಾಲರಿಗೆ ಆರ್ಥವಾಯ್ತು ಇವತ್ತಿನ ಕಾರ್ಯಕ್ರಮವನ್ನು ಸಂಪೂರ್ಣ ಹಾದಿ ತಪ್ಪಿಸುವ ಹವಣಿಕೆಯಲ್ಲಿದ್ದಾಳೆ ಇವಳು ಎಂದು. “ನೋಡಿ ಅದಕ್ಕೇ ಹೇಳಿದ್ದು ಯಾರಾದರೂ ಒಬ್ಬ ಹುಡುಗನಿಂದ ಸ್ವಾಗತ ಗೀತೆ ಹೇಳಿಸಿ ಅಂತ” ಎಂದು ಇಂಗ್ಲಿಷ್ ಮೇಷ್ಟರ ಕಡೆಗೆ ತಿರುಗಿ ಗೊಣಗಿದರು. ಒಪ್ಪಿಗೆ ಕೊಟ್ಟರೆ ಮತ್ತೆ ಮತ್ತೆ ಒನ್ಸ್ ಮೋರ್‌ಗಳು ಶುರುವಾಗ್ತದೆ! ಬೇಡ ಅಂದರೆ ಪ್ರಿನ್ಸಿಪಾಲರಿಗೆ ಧಿಕ್ಕಾರ ಶುರು ವಾಗ್ತದೆ! ಅಂತೂ ತಡವಾರಿಸುತ್ತಾ ಎದ್ದು ಮೈಕಿನ ಬಳಿಗೆ ಬಂದು ವನಜಾಕ್ಷಿಗೆ ಹೋಗಲು ಹೇಳಿ “ದಯವಿಟ್ಟು ವಿದ್ಯಾರ್ಥಿಗಳು ಶಾಂತವಾಗಿ ಕುಳಿತುಕೊಳ್ಳಬೇಕು. ಇದು ಸ್ವಾಗತ ಗೀತೆ. ಮುಂದೆ ಅತಿಥಿಗಳ ಭಾಷಣ ಇದೆ. ಕಾರ್ಯಕ್ರಮ ಮುಂದುವರೆಸುವುದಕ್ಕೆ ಅವಕಾಶ ಕೊಡಬೇಕು” ಎಂದು ಪ್ರತಿಸಮಾರಂಭದಲ್ಲೂ ಒರಲುವಂತೆ ಮೈಕಿನಲ್ಲಿ ಅದೇ ಧಾಟಿಯಲ್ಲಿ ಅದೇ ದನಿಯಲ್ಲಿ ವಿದ್ಯಾರ್ಥಿಗಳಲ್ಲಿ ಮನವಿ ಮಾಡಿಕೊಂಡರು.

“ಥತ್ತೇರಿ ಇವನ್ಯಾಕೋ ಇಲ್ಲಿ ಬಂದ” ಎಂದು ಒಬ್ಬ ಕೂಗಿದ.

“ಪ್ರಿನ್ಸಿಪಾಲಂತೆ ನಮ್ಮ ಪ್ರಾಣ ತಿನ್ತಾನಲ್ಲಯ್ಯ” ಎಂದು ಇನ್ನೊಬ್ಬ ಗಟ್ಟಿಯಾಗಿ ಹಿಂದಿನಿಂದ ಕೂಗಿದ. ವನಜಾಕ್ಷಿ ಇಳಿದು ನಿರ್ಗಮಿಸಿದ್ದಕ್ಕಿಂತಲೂ ಪ್ರಿನ್ಸಿಪಾಲರ ಆಗಮನ ವಿದ್ಯಾರ್ಥಿಗಳಿಗೆ ಹೆಚ್ಚು ಘೋರವಾಗಿ ಕಂಡಿತು. ಹಿಂದಿನಿಂದ ಸಿಳ್ಳೆಗಳು ಆರಂಭವಾದವು. ಅಷ್ಟರಲ್ಲಿ ಕಾರ್ಯದರ್ಶಿ ಅತಿಥಿಗಳ ಪರಿಚಯ ಮಾಡಿಕೊಡತೊಡಗಿದ. ಅತಿಥಿಗಳಾದ ಪಾಟೀಲರು ಮಹಾ ವಿಜ್ಞಾನಿಗಳೆಂದೂ, ಧಾರ್ಮಿಕರೆಂದೂ, ಶಾಸ್ತ್ರಾಚಾರ ಸಂಪನ್ನರೆಂದೂ, ಅವತಾರಪುರುಷರೆಂದೂ ಬಾಯಿಗೆ ಬಂದ ಹಾಗೆ ಹೊಗಳಿದ. ಆ ರೀತಿ ಅವರನ್ನು ಕಾರ್ಯದರ್ಶಿ ಹೊಗಳಿದ್ದು ಅಲ್ಲಿನ ಮೊದಲೇ ನಿರ್ಧರಿಸಿಕೊಂಡಿದ್ದ ತಂತ್ರವಾಗಿತ್ತು. ಹೇಗಾದರೂ ಮಾಡಿ ಪಾಟೀಲರನ್ನು ಬುಟ್ಟಿಗೆ ಹಾಕಿಕೊಳ್ಳಬೇಕೆಂಬ ಹಿಂದೂವಾದಿಗಳ ಉಪಾಯದ ಒಂದು ಅಂಗವಾಗಿತ್ತು.

ಕಾರ್ಯದರ್ಶಿಯ ಭೋಪರಾಕುಗಳನ್ನೆಲ್ಲ ಕೇಳುತ್ತಿದ್ದಂತೆ ವಿಚಾರವಾದಿಗಳಿಗೆ

ಸಿಟ್ಟು ಬಂತು! ಇನ್ನೇನು ಕಾರ್ಯದರ್ಶಿಯ ಪರಿಚಯ ಭಾಷಣ ಮುಗಿಯುತ್ತಾ ಬಂತು. ಪ್ರಶ್ನೆ ಕೇಳುವ ಹೊತ್ತು ಸನ್ನಿಹಿತವಾಗುತ್ತಿದೆ! ತಲೆಯೊಳಗೆ ಬರೀ ಹುಡುಗಿಯರ ಫಳಫಳ ಗೋಚರಿಸುತ್ತದೆಯೇ ಹೊರತು ಪ್ರಶ್ನೆಗಳೊಂದೂ ಜ್ಞಾಪಕಕ್ಕೆ ಬರುತ್ತಿಲ್ಲ! ರಾಮಚಂದ್ರನನ್ನಾದರೂ ನಿರ್ದೇಶನಕ್ಕೆ ಕೇಳೋಣೆಂದರೆ ರಾಮಚಂದ್ರ ತಾನು ಸಮಾರಂಭಕ್ಕೆ ಬರುವುದಿಲ್ಲವೆಂದು ಮೊದಲೇ ಹೇಳಿಬಿಟ್ಟಿದ್ದಾನೆ! ಗೂಗ್ಲಿ, ರಫಿ, ರಮೇಶ, ಚಂದ್ರ, ಅಂಗಾರ, ಎಲ್ಲಾ ಒಬ್ಬರನ್ನೊಬ್ಬರು "ನೀನೇ ಕೇಳೋ, ನೀನೇ ಕೇಳೋ" ಎಂದು ತಿವಿದುಕೊಳ್ಳುತ್ತಿದ್ದಾರೆ. ಅಷ್ಟರಲ್ಲಿ ಕಾರ್ಯದರ್ಶಿ ವಿದ್ಯಾರ್ಥಿಗಳು ಅತಿಥಿಗಳ ಭಾಷಣವನ್ನು ಶಾಂತರೀತಿಯಿಂದ ಕೇಳಬೇಕೆಂದು ಮನವಿ ಮಾಡಿ ಕುಳಿತುಕೊಂಡ. ಅತಿಥಿಗಳಾದ ಪಾಟೀಲರು ಎದ್ದು ನಿಂತರು.

ಅಂಗಾರ ಎದ್ದು ನಿಲ್ಲುವ ಧೈರ್ಯ ಮಾಡಿದ. "ನಾವು ಅತಿಥಿಗಳಿಗೆ ವಿಚಾರವಾದಿಗಳ ಸಂಘದಿಂದ ಕೆಲವು ಪ್ರಶ್ನೆಗಳನ್ನು ಕೇಳಬೇಕಂತ ಬಂದಿದ್ದೇವೆ" ಎಂದು ಗಂಭಿರವಾಗಿ ಹೇಳಿದ.

ಪ್ರಿನಿಸಪಾಲರಿಗೆ ದೊಡ್ಡ ಅಪಶಕುನ ನೋಡಿದಂತಾಗಿ ಜೀವವೇ ಹೋದಂತಾಯ್ತು.

ಕ್ರಿಶ್ಚಿಯನ್ನನಾದ ಅಂಗಾರ ಎದ್ದು ನಿಂತುದನ್ನು ನೋಡಿ ಕೆಸರೂರಿನ ಕ್ರಿಶ್ಚಿಯನ್ನರೂ ತಮ್ಮ ವಿರೋಧಿಗಳಾದ ಮಸೀದಿ ಗುಂಪಿಗೆ ಸೇರಿದ್ದಾರೆಂದು ತೀರ್ಮಾನಿಸಿದ. ಹುಡುಗರನ್ನು ಆತ ಸದಾ ತನ್ನನ್ನು ತೊಂದರೆಗೆ ಸಿಕ್ಕಿಸಬೇಕೆಂದಿರುವ ವಿರೋಧಿ ಸಮೂಹ ಎಂದೇ ತಿಳಿದಿದ್ದ. ಎದ್ದು ಬೇಗ ಬೇಗ ಮೈಕಿನ ಬಳಿ ಬಂದು "ಜೋಸೆಫ್ ಅಂಗಾರ ಕುಳಿತುಕೊಳ್ಳಿ. ಇದು ಚರ್ಚಾ ಸ್ಪರ್ಧೆ ಆಗಲಿ, ವಿಚಾರವೇದಿಕೆ ಆಗಲಿ ಅಲ್ಲ. ಮುಂದೆ ಕಾರ್ಯಕ್ರಮಗಳಿವೆ. ಯಕ್ಷಗಾನ ಇದೆ. ಪ್ರಶ್ನೋತ್ತರ ಆರಂಭಿಸಿದರೆ ಅವಕ್ಕೆಲ್ಲಾ ತೊಂದರೆ ಆಗುತ್ತೆ" ಎಂದ.

ಅಂಗಾರನಿಗೆ ಮುಂದೇನು ಮಾಡಬೇಕೆಂದು ಸರಿಯಾಗಿ ಹೊಳೆಯಲಿಲ್ಲ. ಜೊತೆಗೆ ಹುಡುಗಿಯರೆಲ್ಲ ಒಮ್ಮೆಲೆ ಹಿಂದಿರುಗಿ ಇವನು ಯಾರೆಂದು ನೋಡಿದರು. ಅಲ್ಲಿಗೆ ಅಂಗಾರನಿಗೆ ಯಾಕೆ ನಿಂತಿದ್ದೇನೆಂಬುದು ಸಂಪೂರ್ಣ ಮರೆತೇ ಹೋಗಿ ಸುಮ್ಮನೆ ನಿಂತೇಬಿಟ್ಟ. ಪಕ್ಕದಲ್ಲಿಯೇ ಕುಳಿತಿದ್ದ ವಯಸ್ಕರಿಬ್ಬರು ಆತ ನಿಂತೇ ಇದ್ದುದನ್ನು ಪ್ರತಿಭಟನೆ ಎಂದು ತಿಳಿದು, ಎದ್ದು, ಕುಳಿತುಕೋ ಎಂದು ಅವನ ಹೆಗಲು ಹಿಡಿದು ಒತ್ತಲಾರಂಭಿಸಿದರು.

ಮಿಕ್ಕ ವಿಚಾರವಾದಿಗಳಿಗೆ ಅಂಗಾರನನ್ನು ಏಕಾಂಗಿಯಾಗಿ ಸಿಕ್ಕಿಸಿದ್ದೇವೆ



ಎಂದೆನ್ನಿಸಿತು. ಮೆಲ್ಲಗೆ ಚಂದ್ರ ಎದ್ದ. ಅಂಗಾರನನ್ನು ಬಲಾತ್ಕರಿಸುತ್ತಿದ್ದವರಿಗೆ "ರ್ರೀ ಯಾಕ್ರಿ ಅವನಿಗೆ ಕೂರಿಸುತ್ತಿದ್ದೀರಿ. ನಾವು ಕಾಲೇಜಿಗೆ ಬಂದಿರೋದು ಪ್ರಶ್ನೆ ಕೇಳಿ ವಿಷ್ಯ ತಿಳ್ಕೊಳ್ಳೋಕೆ. ಭಜನೆ ಮಾಡೋದಕ್ಕಲ್ಲ" ಎಂದು ತಮ್ಮ ಜ್ಞಾನದಾಹವನ್ನು ತಿಳಿಸಿದ. ಅವನ ಮಾತು ಮುಗಿಯುವದರೊಳಗೆ ಗೂಗ್ಲಿ, ರಮೇಶ, ತಮ್ಮಣ್ಣ, ಜಗದೀಶ, ಇಂಗ್ಲಿಷ್‌ಗೌಡ ಇತ್ಯಾದಿ ವಿಚಾರವಾದಿ ಸಂಘದ ಸಮೂಹವೇ ಎದ್ದು ನಿಂತಿತು. ಪ್ರಿನ್ಸಿಪಾಲ್ ದೆವ್ವ ಹಿಡಿದವನಂತೆ "ಸಯ್‌ಲೆನ್ಸ್, ಶಾಂತಿ, ಕುತ್ಕೊಳ್ಳಿ" ಎಂದು ಕಿರುಚತೊಡಗಿದ. ರಮೇಶ ಪರಿಚಯ ಭಾಷಣ ಮಾಡಿ ಇನ್ನೂ ವೇದಿಕೆ ಮೇಲೆ ನಿಂತಿದ್ದ ಕಾರ್ಯದರ್ಶಿಗೆ "ಅಲ್ರೀ ಅವರು ಬಹಳ ದೊಡ್ಡ ವಿಜ್ಞಾನಿಗಳೂಂತೀರ, ಮತ್ಯಾಕೆ ಮಂತ್ರ ತಂತ್ರ ಮಾಡ್ತಾರೆ, ವಿಜ್ಞಾನಕ್ಕೂ ಇದಕ್ಕೂ ಏನು ಸಂಬಂಧ?" ಎಂದು ಕೂಗಿದ. ಆ ವೇಳೆಗೆ ವಿಚಾರವಾದಿಗಳಿಗೆ ಸಭಾ ಕಂಪನ ಸಾಕಷ್ಟು ಕಡಿಮೆಯಾಗಿತ್ತು.

"ನೋ ನೋ ನೋ ಇದು ಸಭೆ. ಇಲ್ಲೆಲ್ಲಾ ಅವರ ಪರ್ಸನಲ್ ವಿಷ್ಯ ಎತ್ತಕೂಡದು. ಅವರನ್ನು ಅತಿಥಿಗಳೂಂತ ಕರೆಸಿದ್ದೇವೆ. ಅವರಿಗೆ ಮರ್ಯಾದೆ ಕೊಡಬೇಕು" ಎಂದು ಪ್ರಿನ್ಸಿಪಾಲ್ ಕೂಗಿದ. ಗಲಭೆಯನ್ನು ಕೌತುಕದಿಂದ ನೋಡುತ್ತಿದ್ದ ಪಾಟೀಲರು ಇನ್ನು ತಮ್ಮ ಕೇಸನ್ನು ಪ್ರಿನ್ಸಿಪಾಲರ ವಕಾಲತ್ತಿಗೇ ಬಿಟ್ಟರೆ ತಮ್ಮ ಮರ್ಯಾದೆಯನ್ನು ಸಂಪೂರ್ಣ ತೆಗೆಯುತ್ತಾರೆಂದು ತಿಳಿದುಕೊಂಡರು.

"ಅದು ಹೇಗೆ ಪರ್ಸನಲ್ ವಿಷ್ಯ. ನಾವೇನು ಅವರ ಮನೆಯ ವಿಷಯ ಕೇಳಿದೆವೆ? ವಿಜ್ಞಾನಿ ಅಂದಮೇಲೆ ವಿಜ್ಞಾನದಲ್ಲಿ ನಂಬಿಕೆ ಇರಬೇಕು. ಮೂಢ ನಂಬಿಕೆ ಇರಕೂಡದು" ಎಂದು ಗಟ್ಟಿಯಾಗಿ ಹೇಳಿದ ರಫಿ.

"ರಫೀಕ್ ಅಹಮದ್ ಸಿಟ್ ಡೌನ್, ಬೇರೆಯೋರ ಧರ್ಮದ ವಿಷ್ಯ ಮತ್ತೊಬ್ಬರು ಟೀಕಿಸಬಾರದು" ಪ್ರಿನ್ಸಿಪಾಲ್ ಕೂಗಿದ. ಮೂಢನಂಬಿಕೆ ಸಂಪ್ರದಾಯಗಳ ವಿಷಯ ಬಂದೊಡನೆ ಪ್ರಿನ್ಸಿಪಾಲರ ತಲೆಯೊಳಗೆ ಒಂದು ಎಚ್ಚರಿಕೆ ಗಂಟೆ ಹೊಡೆಯತೊಡಗಿತ್ತು. ಏಕೆಂದರೆ ಸಂಶೋಧನ ಕೇಂದ್ರದ ಉದ್ಭವ ವೆಂಕಟೇಶ್ವರ ದೇವಸ್ಥಾನದ ಕಾರ್ಯಕ್ರಮದಲ್ಲಿ ಆತನದು ಒಂದು ಮಹತ್ವದ ಪಾತ್ರ ಇತ್ತು. ಅದಕ್ಕೆ ಪಾಟೀಲರು ಅಷ್ಟೊಂದು ಸಹಕಾರಿಯಾಗಿರಲಿಲ್ಲ ಎಂದು ತಿಳಿದೇ ಅವರನ್ನು ಹೇಗಾದರೂ ಬುಟ್ಟಿಗೆ ಹಾಕಿಕೊಳ್ಳಬೇಕೆಂದು ಅವರನ್ನು ಕರೆಸಿದ್ದು. ಆತ ಕೆಸರೂರಿಗೆ ಬಂದಾಗಿನಿಂದ ಮಸೀದಿಗಳು, ಮೈಕಿನ ಚೀರಾಟ, ಬೇರಿಗಳ ರಾಜಕಾರಣ ಎಲ್ಲ ನೋಡಿಯೇ ರೋಸಿ ಅವನು ಉದ್ಭವ ವೆಂಕಟೇಶ್ವರ

ಪಕ್ಷ ಸೇರಿಕೊಂಡಿದ್ದ. ಬರೀ ಹಿಂದೂಗಳಿಗೆ ಮಾತ್ರ ಅನ್ವಯಿಸುವ ಕುಟುಂಬ ಯೋಜನೆಗೆ ಬದ್ಧ ವಿರೋಧಿಯಾಗಿದ್ದ. ಕುಟುಂಬಯೋಜನಾ ಸಪ್ತಾಹಕ್ಕೆ ರಜಾದಿನಗಳಲ್ಲಿ ಕಾಲೇಜು ಕಟ್ಟಡ ಬಿಟ್ಟುಕೊಡವುದಿಲ್ಲವೆಂದು ವಿರೋಧಿಸಿದ್ದ. ಪ್ರಶ್ನೆಗೆ ಅವಕಾಶ ಕೊಟ್ಟರೆ ಪಾಟೀಲರನ್ನು ಕರೆಸಿರುವ ತಮ್ಮ ಉದ್ದೇಶ ಹಾಳಾಗುವುದರ ಜೊತೆಗೇ ತನ್ನ ಪರ್ಸನಲ್ ವಿಷಯಗಳನ್ನೂ ಹುಡುಗರು ಹೊರತೆಗೆಯುತ್ತಾರೆ ಎನ್ನುವ ದಿಗಿಲು ಆತನಿಗೆ. ಸಭೆಯ ಗೊಂದಲವನ್ನು ಆತ ಅಡಗಿಸುವ ಪ್ರಯತ್ನದಲ್ಲಿಯೇ ಸಭೆಯನ್ನು ಇನ್ನಷ್ಟು ಗೊಂದಲಕ್ಕೆ ತಳ್ಳಿದ. ಪಾಟೀಲರು ಮೈಕ್ ಕೇಳಿದರೂ ಕೊಡದೆ ಅದನ್ನು ಗಟ್ಟಿಯಾಗಿ ಹಿಡಿದುಕೊಂಡು "ಸಯ್‌ಲೆನ್ಸ್, ಕೂತ್ಕೊಳ್ಳಿ, ಶಾಂತಿ" ಎಂದು ಕೂಗಿದ.

ಪಾಟೀಲರು ಮೈಕ್ ದೊರೆಯದೆ ಇದ್ದುದರಿಂದ ಹಾಗೇ ರಫಿ ಕಡೆಗೆ ತಿರುಗಿ ಗಟ್ಟಿಯಾಗಿ "ನೊಡಿ ನಾನು ಮಂತ್ರ ಮಾಯಾ ಮಾಡೋ ವಿಜ್ಞಾನಿ ಅಲ್ಲ. ಚೇಳು ಮಂತ್ರ ಒಂದು ಬಗೆಯ ಚಿಕಿತ್ಸೆ ಅಷ್ಟೇ. ಅದರ ಸತ್ಯಾಸತ್ಯಗಳನ್ನು ವೈಜ್ಞಾನಿಕವಾಗಿ ತಿಳಿದುಕೊಳ್ಳಬೇಕಾದದ್ದು ವಿಜ್ಞಾನ. ನನಗೆ ಪೂಜೆ ಪುರಸ್ಕಾರ ದೇವರು ಸಂತರ್ಪಣೆ ಯಾವುದರಲ್ಲೂ ನಂಬಿಕೆ ಇಲ್ಲ. ಅದಕ್ಕೆ ನನ್ನ ಬೆಂಬಲವೂ ಇಲ್ಲ." ಪ್ರಿನ್ಸಿಪಾಲರ ಆರ್ಭಟಗಳ ನಡುವೆ ಪಾಟೀಲರ ಮಾತಿನ ತುಣುಕುಗಳು ಹಿಂದೆ ಕುಳಿತಿದ್ದವರಿಗೆ ಕೇಳಿದವು.

ಮುಂದುಗಡೆ ಕುಳಿತಿದ್ದರೊಬ್ಬರು ಎದ್ದು ಹಿಂದಕ್ಕೆ ತಿರುಗಿ "ದೇವರಲ್ಲಿ ನಂಬಿಕೆ ಇದ್ದವರು ದೇವರು ಪೂಜೆ ಮಾಡ್ತಾರೆ! ಮಂತ್ರದಲ್ಲಿ ನಂಬಿಕೆ ಇದ್ದವರು ಮಂತ್ರ ಮಾಡ್ತಾರೆ! ನಿಮಗೇನ್ರಯ್ಯಾ ಆಯ್ತು?" ಎಂದು ಹುಡುಗರಿಗೆ ಜೋರು ಮಾಡಿದರು. ಅವರು ಪಾಟೀಲರು ಹುಡುಗರಿಗೆ ಹೆದರಿ ಈ ರೀತಿ ಮಾತನಾಡುತ್ತಿದ್ದಾರೆ ಎಂದು ತಿಳಿದರು.

ಅತಿಥಿವರ್ಯರೂ ಸ್ವಲ್ಪ ವಿಚಾರವಾದಿಗಳಂತೆಯೇ ಕಂಡು ಬಂದುದರಿಂದ ಧೈರ್ಯ ಮಾಡಿದ ಕಾಲೇಜು ಹುಡುಗಿ ಶಾಮಲ ಎದ್ದು ಅವರನ್ನು "ಹಾಗಾದರೆ ವಿಜ್ಞಾನಿಗಳು ದೆವ್ವ ದೇವರು ಮಂತ್ರತಂತ್ರ ಮಾಡಬಹುದಾ?" ಎಂದು ಕೇಳಿದಳು.

"ಸ್ಟಡೀ ಶಾಮಲ. ಹಿಯರ್ ಹಿಯರ್" ಎಂಬ ಕೂಗೂ ಚಪ್ಪಾಳೆಗಳೂ ಹಿಂದಿನಿಂದ ಕೇಳಿಬಂದವು. ಪ್ರಿನ್ಸಿಪಾಲರು ಇನ್ನು ಮುಗಿಯಿತು ಎಂದುಕೊಂಡರು. ಏಕೆಂದರೆ ಹುಡುಗಿಯರ ಬೆಂಬಲ ಸಿಕ್ಕರೆ ಹುಡುಗರನ್ನು ರಿಜರ್ವ್ ಪೋಲೀಸ್ ಇರಲಿ ಮಿಲಿಟರಿ ಬಂದರೂ ಹೆದರಿಸಲಾಗುವುದಿಲ್ಲ ಎಂಬುದು ಅವರ ನಂಬುಗೆ. ಶಾಮಲನ ಹಿಂದೆ ಕುಳಿತಿದ್ದ ಹಲವಾರು ವಯಸ್ಸಾದ ಹೆಂಗಸರಿಗೆ ಕೋಪ



ಬಂತು. ಅವರು ಕಾರ್ಯಕ್ರಮದ ಕೊನೆಯಲ್ಲಿದ್ದ ಪ್ರಹ್ಲಾದ ಪ್ರಕರಣ ಯಕ್ಷಗಾನ ನೋಡಲು ಬಂದಿದ್ದವರು. ಅವರು ಶಾಮಲನನ್ನು ತರಾಟೆಗೆ ತೆಗೆದುಕೊಂಡರು.

"ನಿನಗೇನಮ್ಮ ಆಗಿದೆ ಹುಡುಗು. ಆ ಹುಡುಗ್ರು ಬೀದೀಲೆ ಕಾಲ ಕಳೆಯೋವು. ಅವಕ್ಕೇನು ಜವಾಬ್ದಾರಿ ಇದೆಯೆ? ನೀನು ಮುಂದೆ ದೊಡ್ಡೋಳಾಗಿ ಹೆತ್ತೋರ ಮನೆಗೆ, ಕೈ ಹಿಡಿದೋರ ಮನೆಗೆ ಮರ್ಯಾದೆ ತರಬೇಕಾದೋಳು. ಆ ಹುಡುಗರ ಮಾತಿಗೆ ಮರುಳಾಗಿ ಗಂಡುಬೀರಿ ಅಂತ ಹೆಸರು ತಗೋತಿಯಾ ಕೂತ್ಗೋ ಕುತ್ಗೋ" ಎಂದರು.

ಶಾಮಲ ತಮ್ಮ ಪರವಾಗಿ ಮಾತಾಡಿದ್ದನ್ನು ನೋಡಿ ಶಾಕ್ ಹೊಡೆದಂತಾಗಿ ವಿಚಾರವಾದಿಗಳು ಒಂದು ಕ್ಷಣ ಮಾತು ನಿಲ್ಲಿಸಿ ಮುಖ ಮುಖ ನೋಡಿಕೊಂಡರು. ಕುರುಕ್ಷೇತ್ರದಲ್ಲಿ ಅರ್ಜುನನಿಗೆ ವಿಶ್ವರೂಪದರ್ಶನ ಕಂಡಂತಾಯ್ತು ಅವರಿಗೆ.

ಕೆಲವರು ವೆಂಕಟೇಶ್ವರ ಭಕ್ತರು ಪಾಟೀಲರಿಗೆ ತರಾಟೆಗೆ ತಗೊಂಡು "ವಿಜ್ಞಾನಿ ಆದಮಾತ್ರಕ್ಕೆ ಅವನು ನಾಸ್ತಿಕ ಆಗಬೇಕೆ?" ಎಂದು ಐನ್‌ಸ್ಟೈನ್, ಸಿ.ವಿ. ರಾಮನ್, ಇತ್ಯಾದಿ ಎಲ್ಲರನ್ನೂ ಉದಾಹರಿಸತೊಡಗಿದರು. ಪಾಟೀಲರು "ಹಾಗಲ್ಲ ನಮ್ಮ ಸ್ವಂತ ನಂಬಿಕೆ ಮತಾಚಾರ ಏನಿದ್ದರೂ ಮನೆಯೊಳಗಿರಬೇಕೇ ಹೊರತು ಬೀದಿಗೆ ತಂದು ಅದನ್ನು ಇನ್ನೊಬ್ಬರ ಮೇಲೆ ಹೇರಕೂಡದು" ಎಂದರು. "ಹಾಗಾದರೆ ಸಾಬರು ಮಾತ್ರ ಮಸೀದಿ ಕಟ್ಟಿಸಿ ಮೈಕು ಹಾಕಿಸಿ ಕೂಗಬಹುದೊ?" ಎಂದು ಒಬ್ಬರು ನೇರವಾಗಿ ಕೆಸರೂರಿನಲ್ಲಿ ನಡೆಯುತ್ತಿದ್ದ ಶೀತಲ ಸಮರಕ್ಕೆ ವಾಗ್ವಾದ ಗಂಟು ಹಾಕಿದರು.

ಹದಿನೈದು ನಿಮಿಷದಲ್ಲಿ ಆ ಸಭೆಯಲ್ಲಿ ನಡೆಯುತ್ತಿದ್ದ ಆಲೋಚನೆ ಸಮಾಲೋಚನೆಯಾಗಿ, ಸಮಾಲೋಚನೆ ವಾಗ್ವಾದವಾಗಿ, ವಾಗ್ವಾದ ಗೊಂದಲವಾಗಿ, ಗೊಂದಲ ಗಲಭೆಯಾಗಿ, ಗಲಭೆ ದೊಂಬಿಗೆ ಸಮೀಪವಾಗುತ್ತಾ ಹೋಯ್ತು.

ಕೆಲವು ವಿಚಾರವಾದಿಗಳು ತಮ್ಮೊಡನೆ ವಾದದಲ್ಲಿ ತೊಡಗಿದ್ದ ಸಭಿಕರ ವಿರುದ್ಧ ತಾಳ್ಮೆ ಕಳೆದುಕೊಂಡು ರೊಚ್ಚಿಗೆದ್ದು ಕಂದಾಚಾರಿ ಪಾಟೀಲರಿಗೆ ಧಿಕ್ಕಾರ ಎಂದು ಕೂಗಿದರು. ಪಾಟೀಲರ ಜೊತೆ ವಾಗ್ವಾದದಲ್ಲಿದ್ದ ಕೆಲವರು ಇದನ್ನು ಕೇಳಿ ನಾಸ್ತಿಕವಾದಿ ಪಾಟೀಲರಿಗೆ ಧಿಕ್ಕಾರ ಎಂದು ಕೂಗಿದರು.

ತಮ್ಮೊಡನೆ ಧಿಕ್ಕಾರ ಕೂಗಿದವರು ಯಾರೆಂದು ವಿಚಾರವಾದಿಗಳು ನೋಡಿದರು. ನೋಡಿದರೆ ಎಲ್ಲಾ ವೆಂಕಟೇಶ್ವರ ಪಕ್ಷದ ಸನಾತನಿಗಳು. ಅವರು ಪಾಟೀಲರಿಗೆ ನಾಸ್ತಿಕವಾದಿ ಎಂದು ಧಿಕ್ಕಾರ ಕೂಗುತ್ತಿದ್ದಾರೆ! ಅವರಲ್ಲಿ ಅನೇಕರು

ಪ್ರಿನ್ಸಿಪಾಲರ ಚೇಲಾಗಳೂ ಸನಾತನಿ ಹಿಂದೂವಾದಿಗಳೂ ಇದ್ದಾರೆ! ಈಗ ಅವರೊಡನೆ ಸೇರಿ ಪಾಟೀಲರಿಗೆ ಧಿಕ್ಕಾರ ಕೂಗಿದರೆ ಹೇಗೆ? ನಮ್ಮ ವಿರೋಧಿಗಳಾಗಬೇಕಿದ್ದ ಪಾಟೀಲರು ಅವರಿಗೂ ಹೇಗೆ ವಿರೋಧಿಗಳಾದರು? ತಮ್ಮಲ್ಲೇ ಏನೋ ಲೆಕ್ಕಾಚಾರ ತಪ್ಪಿದೆ! ವಿಚಾರವಾದಿಗಳು ಎಂದಿನಂತೆ ತಮ್ಮ ಮಾಮೂಲಿ ಗೊಂದಲಕ್ಕೆ ಒಳಗಾದರು. ರಾಮಚಂದ್ರನೂ ಇಲ್ಲ ಸೂಕ್ತ ನಿರ್ದೇಶನಕ್ಕೆ! ಹೋಗಲಿ ಹುಡುಗಿಯರಾದರೂ ಯಾವ ಕಡೆ ಎಂದು ತಿಳಿದು ತಮ್ಮ ಧೋರಣೆ ರೂಪಿಸೋಣ ಎಂದರೆ ಅದೂ ಸರಿಯಾಗಿ ಗೊತ್ತಾಗುತ್ತಿಲ್ಲ!

ಯಾವಾಗ ಸಭೆಯಿಂದ ಧಿಕ್ಕಾರಗಳು ಹೊರಬರತೊಡಗಿದವೋ ದೂರಲದಲಿ ಕತ್ತಲಲ್ಲಿ ನಿಂತಿದ್ದ ಪೋಲೀಸ್ ವ್ಯಾನು ಮೆಲ್ಲಗೆ ಮುಂಬರತೊಡಗಿತು. ಕಾಲೇಜಿನ ಬಳಿಗೆ ಬಂದು ನಿಂತೊಡನೆ ಅದರೊಳಗಿನಿಂದ ಲಾಠಿ ಹಿಡಿದು ಕಾಬಿ ಆಕೃತಿಗಳು ಇಳಿದುವು. ಕಾಲೇಜಿನ ಹೊರಗೆ ನಿಂತು ಮಾತಾಡುತ್ತಿದ್ದ ಹಲವು ಹುಡುಗರಿಗೆ ಕಾಬಿಬಟ್ಟೆಕಂಡೊಡನೆ ನಾಗರಹಾವನ್ನು ಕಂಡಂತಾಯ್ತು. ಮೆಲ್ಲನೆ ಒಳನುಗ್ಗಿ ಧಿಕ್ಕಾರ ಕೂಗುತ್ತಿದ್ದ ವೆಂಕಟೇಶ್ವರ ಪಕ್ಷದವರಿಗೆ ಬೇಗ ವಾದ ನಿಲ್ಲಿಸಿ ಹೊರಬರಬೇಕೆಂದೂ, ಪೋಲೀಸರೊಡನೆ ಸಭಾಂಗಣದಲ್ಲಿ ಘರ್ಷಣೆಗಳಿಯುವುದಕ್ಕಿಂತ ಹೊರಗಡೆ ಗಲ್ಲಿ ಕಾಂಪೌಂಡು ಚರಂಡಿ ಮುಂತಾದವುಗಳ ಸಹಾಯದಿಂದ ಗೆರಿಲ್ಲಾ ಯುದ್ಧ ಹೂಡುವುದು ಒಳ್ಳೆಯದೆಂದೂ ತಿಳಿಸಿದರು. ಅವರು ಕೂಡಲೇ ವಾದ ನಿಲ್ಲಿಸಿ ಪಾಟೀಲರಿಗೆ ಧಿಕ್ಕಾರ ಮಾತ್ರ ಕೂಗಿದರು.

ದೈವ ವಿರೋಧಿ, ನಾಸ್ತಿಕವಾದಿ ಪಾಟೀಲರಿಗೆ!

ಧಿಕ್ಕಾರ ಧಿಕ್ಕಾರ ಧಿಕ್ಕಾರ.

ರಮೇಶ ಕಕ್ಕಾಬಿಕ್ಕಿಯಾಗಿ "ಲೋ ಆ ಬೋಳೀಮಕ್ಕಳ ಜೊತೆ ಸೇರಿಕೊಂಡು ನಾವ್ಯಾಕೋ ಧಿಕ್ಕಾರ! ಕೂಗಬೇಕು?" ಎಂದು ರಫಿಯನ್ನು ಕೇಳಿದ.

"ಹಾಗಾದ್ರೆ ಸುಮ್ನಿರು ಅಂತೀಯ?"

"ಮತ್ತೇನು ಮಾಡೋಣ?"

"ಸುಮ್ಮನಿರೊದಕ್ಕಾಗೊಲ್ಲ. ನಾವು ಬೇಕಾದರೆ ಅವರ ವಿರುದ್ಧ ಜಯಕಾರ ಹಾಕೋಣ" ಎಂದ ಚಂದ್ರ.

"ಹಂಗೇ ಮಾಡೋಣ! ನಾವ್ಯಾಕೆ ಸುಮ್ನಿರಬೇಕು" ಎಂದ ಅಂಗಾರ.

ಅವರೆಲ್ಲಾ ದೈವ ವಿರೋಧಿ ನಾಸ್ತಿಕವಾದಿ ಪಾಟೀಲರಿಗೆ ಎಂದು ಕೂಗುವುದನ್ನೇ ಕಾಯುತ್ತಿದ್ದು ವಿಚಾರವಾದಿಗಳ ಸಮೂಹ ಅವರ ಧಿಕ್ಕಾರದ



ಕೂಗು ಮುಳುಗಿ ಹೋಗುವಂತೆ ಜಯವಾಗಲಿ ಎಂದು ಕಿವಿಗಡಚ್ಚಿಕ್ಕುವಂತೆ ಕೂಗಿದರು.

ಪ್ರಹ್ಲಾದ ಪ್ರಕರಣ ನೋಡಲು ಬಂದು ಕುಳಿತಿದ್ದ ಹೆಂಗಸರಿಗೆ ನರಸಿಂಹಾವತಾರದಂತೆ ಹಲವು ಪೋಲೀಸರು ವೇದಿಕೆಯ ಹಿಂದಿನ ಬಾಗಿಲ ಬಳಿಯಿಂದ ಕಾಣಿಸಿಕೊಂಡರು. ತಕ್ಷಣ ಅವರು ಗಾಬರಿಯಿಂದ ಏಳುತ್ತಾ "ಥೂ ಪೋಕ್ರಿಗಳು, ನಾಸ್ತಿಕರು.ಇಲ್ಲಿ ಬಂದು ಗಲಾಟೆ ಮಾಡ್ತಾರೆ. ಧೈರ್ಯ ಇದ್ದರೆ ಹೋಗಿ ಮಸೀದಿ ಹತ್ರ ಮಾಡಲಿ" ಎಂದು ಗಟ್ಟಿಯಾಗಿ ಒದರುತ್ತಾ ಜಾಗ ಖಾಲಿಮಾಡತೊಡಗಿದರು.

"ಅದ್ಯಾಕೆ ಮಸೀದಿ ಹತ್ರ ಹೋಗ್ತಾರೆ. ಅವರೇ ಇವರನ್ನ ಹೋಗಿ ಪ್ರಹ್ಲಾದ ಪ್ರಕರಣ ನಿಲ್ಲಿಸಿ ಅಂತ ಗಲಾಟೆ ಮಾಡೋದಕ್ಕೆ ಕಳಿಸಿರುವಾಗ!" ಅಂತ ಇನ್ಯಾರೋ ಉರಿಯುವ ಬೆಂಕಿಗೆ ತುಪ್ಪ ಹುಯ್ದರು.

ದಫೇದಾರ್ ಜೋಗಪ್ಪ ಪ್ರಿನ್ಸಿಪಾಲರ ಹತ್ತಿರ ಬಂದು "ಯಾರಿಗೆ ಬಾರಿಸಬೇಕು, ಧಿಕ್ಕಾರ ಕೂಗ್ತಿರೋರಿಗೊ? ಜೈಕಾರ ಕೂಗ್ತಿರೋರಿಗೊ?" ಎಂದು ಕೇಳಿದ. ಪ್ರಿನ್ಸಿಪಾಲ್ ಇನ್ನಷ್ಟು ಗಾಬರಿಯಾಗಿ "ಅವರೇ ಅವರೇ ಪಾಟೀಲರಿಗೆ ಜಯವಾಗಲಿ ಅನ್ತಿದಾರಲ್ಲ ಅವರೇ" ಎಂದು ಪಾಟೀಲರೆದುರೇ ಹೇಳಿದರು.

ಅದಕ್ಕೆ ಪಾಟೀಲರು "ಇಲ್ಲಾ ಧಿಕ್ಕಾರ ಕೂಗ್ತಿರೋರದ್ದೂ ತಪ್ಪು ಇದೆ, ಅವರು ಪ್ರಶ್ನೆ ಕೇಳಿದರೆ ಉತ್ತರ ಹೇಳೊದಕ್ಕೆ ಇವರು ಅವಕಾಶ ಕೊಡಬಾರದೇ" ಎಂದರು. ಜೋಗಪ್ಪನಿಗೆ ಯಾರಿಗೆ ಹೊಡೆಯಬೇಕೆಂದು ಸರಿಯಾಗಿ ಅರ್ಥವಾಗಲಿಲ್ಲ, ಆತ ಪ್ರಿನ್ಸಿಪಾಲರ ಕೈಯಿಂದ ಮೈಕನ್ನು ಕಿತ್ತು ಕೊಂಡು "ಪ್ರತಿಭಟನೆ ಮಾಡೋರು ಏನಿದ್ರೂ ಹೊರಗಡೆ ಹೋಗಿ ಪ್ರತಿಭಟನೆ ಮಾಡಿ. ಸಭೆ ಒಳಗೆ ಸಭಾಂಗಣದಲ್ಲಿ ಗಲಾಟೆ ಮಾಡಿದರು ನವು ಲಾಠಿ ಚಾರ್ಜು ಮಾಡಬೇಕಾಗ್ತದೆ" ಎಂದ.

"ಥೂ ಪೋಲೀಸ್ನೋರುಂಟು ಅವರುಂಟು. ನಮಗ್ಯಾಕೆ ಈ ದುಷ್ಟ ಮುಂಡೇಗಂಡ್ರ ಸಾವಾಸ" ಎಂದು ಗೊಣಗುತ್ತಾ ಎದ್ದ ಓರ್ವ ಬೋಳಮ್ಮನ ಮುಂದಾಳತ್ವದಲ್ಲಿ ಸಭೆಯ ಹೆಂಗಸರು ಮಕ್ಕಳು ಮುದುಕರು ಎಲ್ಲ ಹೊರಹೋಗತೊಡಗಿದರು. ಪೋಲೀಸರು ಹುಡುಗರನ್ನ ತಳ್ಳಾಡುತ್ತಾ ಅವರಿಗೆ ಹೊರಹೋಗಲು ದಾರಿ ಮಾಡಿದರು.

ಸಭೆ ಬರಖಾಸ್ತಾಗುವ ಸ್ಪಷ್ಟ ಸೂಚನೆಗಳು ಕಂಡುಬಂದವು. ಸಸ್ಯಗಳ ಬಗ್ಗೆ, ಸಸ್ಯರೋಗಗಳ ಬಗ್ಗೆ ಮುಖ್ಯವಾಗಿ ಏಲಕ್ಕಿಯಕೆಸರೂರು ವೈರಸ್ ಖಾಯಿಲೆ

ಬಗ್ಗೆ ಮಾಹಿತಿ ಕೊಡಲು ಬಂದಿದ್ದ ಪಾಟೀಲರು ಹತಾಶರಾದರು. ಕೆಸರೂರಿನ ಖಾಯಿಲೆಗೆ ಇಡೀ ಒಂದು ಜನಪದವೇ ಸಿಕ್ಕಿದ್ದನ್ನು ಕಂಡರು.





## ಅಧ್ಯಾಯ ೨೦

"ಏನಯ್ಯ ಒಬ್ನೇ ಕುಳಿತಿದ್ದೀಯಲ್ಲ. ನಮ್ಮ ಸಿದ್ದಪ್ಪ ಹೆಗ್ಡೇ ಎಲ್ಲಾ ಎಲ್ಲರಯ್ಯ?" ಎಂದು ಜಯರಾಮ ಕೆಸರೂರಿನ ವಿಶ್ವಭವನ ಕಾಫಿ ಕ್ಲಬ್ಬಿನ ಮೆಟ್ಟಿಲು ಹತ್ತಿ ಒಬ್ಬನೇ ಸಿಗರೇಟು ಸೇದುತ್ತಾ ಕುಳಿತಿದ್ದ ರಾಮಚಂದ್ರನ ಬಳಿಗೆ ಬಂದ.

"ಅವರ ಬಾಸ್‌ದೊಂದು ಸಮಾರಂಭ ಕೆಸರೂರಿನ ಕಾಲೇಜಿನಲ್ಲಿದೆ ಕಣೋ. ಅದಕ್ಕೆ ಹೋಗಿದಾರೆ ಅಂತ ಕಾಣ್ತದೆ."

"ನಿಮ್ಮ ಕಾಲೇಜಿನಲ್ಲಾ? ಮತ್ತೆ ನೀಯಾಕೆ ಇಲ್ಲಿ ಕುಳಿತಿದ್ದೀಯಾ?"

"ಅಯ್ಯೋ ಅದೊಂದು ಕತೆ ಕಣಯ್ಯ. ಈ ಹುಡುಗರನ್ನ ಕಂಟ್ರೋಲ್ ಮಾಡೋದು ಭಾರಿ ಕಷ್ಟ ಕಣಯ್ಯ. ನೀನು ಪಾಟೀಲರ ಬಗ್ಗೆ ಅಷ್ಟೊಂದು ಸಮಜಾಯಿಷಿ ಕೊಟ್ರೂ ಸುಖಾ ಇಲ್ಲ."

"ಇರ್‍ಲಿ ಬಿಡೋ, ಈಗ ಭಾಳ ಇಂಪ್ರೂ ಆಗಿದ್ದಾರೆ. ಮೊದಲು ಬರೇ ಶಿಳ್ಳೆ ಹೊಡೆದುಕೊಂಡು ಪೋಲಿ ತಿರುಗಿಕೊಂಡಿದ್ರು. ಈಗ ಕೊಂಚ ಯೋಚನೆ ಮಾಡ್ತಾರೆ! ಸಿದ್ಧಾಂತ ಗಿದ್ಧಾಂತ ಅಂತ ಮಾತಾಡ್ತಾರೆ."

"ಅಂದರೆ ಈಗ ಸಿದ್ಧಾಂತದ ಪ್ರಕಾರ ಗಲಾಟೆ ಮಾಡ್ತಾರೆ ಅಷ್ಟೆ. ಬೆಳಗಿನಿಂದ ಎಷ್ಟು ಹೇಳಿದರೂ ಕೇಳದೆ ಪಾಟೀಲರಿಗೆ ಪ್ರಶ್ನೆ ಕೇಳ್ತೀವಿ ಅಂತ ಪೀಡಿಸಿದರು. "ಹೂಂ" ಅಂದೆ. ಪ್ರಶ್ನೇನೂ ಹೇಳ್ಕೊಡಿ ಅಂತ ಪೀಡಿಸೋದಕ್ಕೆ ಶುರು ಮಾಡಿದರು. ಇನ್ನೆಲ್ಲಾದರೂ ಕರೀ ಬಾವುಟ ಹಿಡಿದು ಧಿಕ್ಕಾರ ಕೂಗಿಯಾರು ಅಂತ ಪ್ರಶ್ನೆ ಕೇಳೋದಕ್ಕೆ ತಯ್ಯಾರಿ ಕೊಟ್ಟು ನಾನು ಮಾತ್ರ ಸಮಾರಂಭಕ್ಕೆ ಬರೋದಿಲ್ಲಾಂತ ಇತ್ಲಾಗಿ ಬಂದೆ."

"ಪ್ರಶ್ನೆ ಕೇಳಲಿ ಬಿಡೋ!"

"ಹಂಗಲ್ಲ ಜಯರಾಮ್, ಈ ಊರಿನ ವಾತಾವರಣ ಯಾರೋ ಹದಗೆಟ್ಟಿದೆ. ಯಾವ ಸಣ್ಣ ಘಟನೇನೂ ಅನಾಹುತಕ್ಕೆ ನಾಂದಿಯಾಗಬಹುದು. ಅದಕ್ಕೇ ಯೋಚನೆ ಮಾಡ್ತಾ ಚಿಂತಿಸ್ತಾ ಕುಳಿತಿದ್ದೆ ಕಣಯ್ಯ.

"ಆ ಹುಡುಗರು ಕೊಂಚ ತೀವ್ರಗಾಮಿಗಳು ಕಣಯ್ಯ, ಅದೇ ತೊಂದರೆ.

ಈ ಫೈರ್ ಬ್ರಾಂಡ್‌ಗಳು ಸಭೇಲಿ ಮಾತಿಗೆ ಮಾತಾಡುತ್ತಾ ಎಲ್ಲಾದರೂ ಕೈ ಕೈ ಮಿಲಾಯಿಸೋದಕ್ಕೆ ಹೋದರೆ ಮಾತ್ರ ತೊಂದರೆ ನೋಡು."

ಅಷ್ಟರಲ್ಲಿ ಶಾಮನಂದನ ಅಂಗಾಡಿಯ ನೀಳಕಾಯ ಹೋಟೆಲಿನ ಬಾಗಿಲಿನುದ್ದಕ್ಕೂ ಪ್ರತ್ಯಕ್ಷವಾಯ್ತು. ಜಯರಾಂ ಆ ಕಡೆಗೆ ಬೆನ್ನು ತಿರುಗಿಸಿ ಕುಳಿತಿದ್ದರಿಂದ ಬಂದದ್ದು ತಿಳಿಯಲಿಲ್ಲ. "ಹಲ್ಲೋ" ಎನ್ನುತ್ತಾ ಅಂಗಾಡಿ ನಡೆದುಬಂದಾಗ ಜಯರಾಂ ಸಹ ಅವನತ್ತ ತಿರುಗಿ ಹಲ್ಲೋ ಎಂದ. "ಎಲ್ಲಿ ನಮ್ಮ ಹೆಗ್ಡೆ ಸಿದ್ದಪ್ಪಾ ಎಲ್ಲಾ. ಬರೀ ಇಬ್ರೇ ಕುಳಿತಿದೀರಲ್ಲಾ? ಎಂದೆನ್ನುತ್ತಾ ಬೇರೊಂದು ಟೇಬಲ್ಲಿನಿಂದ ಕುರ್ಚಿ ಎಳೆದುಕೊಂಡು ಕುಳಿತ ಅಂಗಾಡಿ.

"ಇನ್ನೇನು ಬರಬಹುದೇನೋ!" ಎಂದೆನ್ನುತ್ತಾ ರಾಮಚಂದ್ರ ಸಿಗರೇಟು ತೆಗೆಯುವ ಹೊತ್ತಿಗೆ ಹೆಗ್ಡೆ ಸಿದ್ದಪ್ಪಾ ಇಬ್ಬರೂ ಮೆಟ್ಟಿಲು ಹತ್ತಿ ಒಳಬಂದರು.

"ಏನಪ್ಪಾ ಫಂಕ್ಷನ್ ಮುಗೀತಾ ಆಗಲೇ" ಎಂದು ರಾಮಚಂದ್ರ ಆತಂಕದಿಂದ ಕೇಳಿದ.

"ರಾಮಚಂದ್ರ, ನೀನು ಸಮಾರಂಭ ಹಾಳುಮಾಡೋದಕ್ಕೆ ಸುಬಾಹು ಮಾರೀಚ ಮುಂತಾದ ರಾಕ್ಷಸರನ್ನು ಛೂಬಿಟ್ಟು ಇಲ್ಲಿ ಆರಾಮಾಗಿ ಕುಳಿತು ವರ್ತಮಾನ ಕೇಳ್ತೀದೀಯ?" ಎಂದು ಹೆಗ್ಡೆ ಕೇಳಿದ.

ರಾಮಚಂದ್ರ ಗಾಬರಿಬಿದ್ದು "ಏನಂದೆ? ಏನಾಯ್ತೋ?" ಎಂದು ಕೇಳಿದ.

ಹೆಗ್ಡೆ ಸಮಾರಂಭದಲ್ಲಿ ನಡೆದುದನ್ನೆಲ್ಲಾ ತಿಳಿಸಿ ಪೋಲೀಸರ ಪ್ರವೇಶದಿಂದ ಸಮಾರಂಭದಲ್ಲಿ ಹೊಡೆದಾಟ ತಪ್ಪಿತೆಂದು ತಿಳಿಸಿದ. "ನಮ್ಮ ಚೀಫ್ ಮೊದಲೇ ಸಿನಿಕ್ಕು, ಇನ್ನು ಕೆಸರೂರಿನ ಜನಾನ ಇನ್ನಷ್ಟು ಬಯ್ತಾರೆ" ಎಂದ.

"ಗಲಾಟೆ ಮಾಡಬೇಡಿ ಬರೇ ಪ್ರಶ್ನೆ ಕೇಳೀಂತ ತರಬೇತಿ ಕೊಟ್ಟು ಕಳಿಸಿದ್ದೀನಿ. ನೋಡಯ್ಯಾ ಹೀಗೆ ಹೊಡೆದಾಟಕ್ಕೆ ಹೋಗಿದಾರಲ್ಲ!" ಖಿನ್ನನಾಗಿ ರಾಮಚಂದ್ರ ಹೇಳಿದ.

"ಅವರು ಪ್ರಶ್ನೇನೂ ಕೇಳಲಿಲ್ಲ. ಇವರು ಉತ್ತರಾನೂ ಹೇಳಲಿಲ್ಲ. ಇವರು ಪಾಟೀಲರ ಚೇಳು ಮಂತ್ರದ ಬಗ್ಗೆ ಏನೋ ಕೇಳೋದಕ್ಕೆ ಹೊರಟರು. ಪಾಟೀಲರು ಮಂತ್ರತಂತ್ರ ನಾನು ನಂಬೊಲ್ಲ ಇಂದೇನೋ ಹೇಳಿದರು. ಅಷ್ಟರಲ್ಲಿ ಒಂದಿಷ್ಟು ಜನ ನೀನು ನಾಸ್ತಿಕವಾದಿ, ದೈವ ವಿರೋಧಿ ಅಂತ ಎದ್ದರು. ಮಸೀದಿ ದೇವಸ್ಥಾನ ಎಲ್ಲಾ ವಾದವಿವಾದಕ್ಕೆ ಬಂತು. ಕೆಲವರು ಪಾಟೀಲರಿಗೆ ಧಿಕ್ಕಾರ ಕೂಗಿದರು. ನಿನ್ನ ಶಿಷ್ಯರು ಕೂಡಲೇ ಪಾಟೀಲರಿಗೆ ಜಯಕಾರ ಹಾಕತೊಡಗಿದರು. ಪೋಲೀಸರಿಗೆ ಯಾರಿಗೆ ಚಚ್ಚಬೇಕೋ ಗೊತ್ತಾಗದೆ ಸಭೆ ಬರಖಾಸ್ತಾಯ್ತು."



ಹೆಗ್ಡೆ ಮಾತನ್ನು ಕೇಳಿ ರಾಮಚಂದ್ರ ಜಯರಾಮನ ಕಡೆಗೆ ತಿರುಗಿ "ನೋಡಿದೆಯಾ! ಅದಕ್ಕೆ ಕಣಯ್ಯ ಈ ಊರಿನಲ್ಲಿ ಸಣ್ಣಪುಟ್ಟದು ಏನೋಂದಾದರೂ ದೊಡ್ಡ ಅನಾಹುತಕ್ಕೆ ನಾಂದಿಯಾಗುತ್ತೆ ಅಂತ ಹೇಳಿದ್ದು" ಎಂದ.

"ಕಿಡಿ ಬಿದ್ದು ಬೆಂಕಿ ಹತ್ತಿಕೊಳ್ಳಲಿ ಬಿಡು. ಈ ಜ್ವಾಲಾಮುಖಿ ಮೇಲೆ ಯಾವುತ್ತು ಸಿಡಿಯುತ್ತೋ ಅಂತ ಕೂತಿರೋದರ ಬದಲು ಆಗೋದೆಲ್ಲಾ ಆಗಿಬಿಡೋದು ಒಳ್ಳೇದಲ್ಲವೆ? ಕೆಸರೂರಿನ ಖಾಯಿಲೆಗೆಲ್ಲಾ ಅದೊಂದೆ ಮದ್ದೂಂತ ಪಾಟೀಲರು ಹೇಳ್ತಾರಲ್ಲ. ನಾನೂ ಅದೇ ತೀರ್ಮಾನಕ್ಕೆ ಬಂದಿದ್ದೇನಯ್ಯಾ" ಎಂದ ಜಯರಾಂ.

"ಪಾಟೀಲರ ಮಾತು ಕೇಳಿ! ಅವನೊಬ್ಬ ಥರ್ಡ್ ರೇಟು ಸಿನಿಕ್ಕು ಕಣೋ. ಜೋಗಿಹಾಳರಿಗಿದ್ದ ಮಾನವೀಯತೆ ಒಂದಂಶಾನೂ ಇಲ್ಲಾ ಈತನಿಗೆ" ಸಿದ್ದಪ್ಪ ಗೊಣಗಿದ.

"ನಮ್ಮ ಅತ್ಯುತ್ತಮ ವಿಜ್ಞಾನಿಗಳಲ್ಲಿ ಒಬ್ಬರು ಅಂತಾರಲ್ಲೋ, ಜೋಗಿಹಾಳರೇ ಇವರ ಬಗ್ಗೆ ಬಹಳ ಸಾರಿ ಹೇಳ್ತಿದ್ರಲ್ಲಾ" ಎಂದ ಹೆಗ್ಡೆ.

"ಹೇಳ್ತಾರೆ. ಆದರೆ ಹೇಳಿದೆನಲ್ಲಾ ಅವನೊಬ್ಬ ಥರ್ಡ್ ರೇಟು ಸಿನಿಕ್ ಅಂತ. ಅವನಿಗೆ ಯಾರಾದರೂ ವೈರಿಗಳಿದ್ದಾರೆ ಅಂತ ಅಂದಾಗಲೇ ಬುದ್ಧಿ ಚುರುಕಾಗೋದು ಕಾಣ್ತದೆ. ಬೆಳಿಗ್ಗೆ ನೋಡು ಜೋಗಿಹಾಳರನ್ನು ನೀವೇ ಖೂನಿ ಮಾಡಿದಿರಿ ಅಂತ ಹ್ಯಾಗೆ ಸುಮ್ಮಸುಮ್ಮನೆ ಬ್ರೀಡರ್ ಮಹಮದ್ ಮೇಲೆ ನಮ್ಮ ಮೇಲೆ ಎಲ್ಲಾ ರೇಗಿದ. ಅವನ ರೂಪಕದ ಭಾಷೆಗೆ ಬೆಂಕಿಹಾಕ. ಯಾರಾದರೂ ಅದನ್ನೇ ನಿಜಾಂತ ತಿಳಿದರೆ ಜೋಗಿಹಾಳರ ಜೊತೆ ಕೆಲಸ ಮಾಡಿದೋರು, ನಮ್ಮಗತಿ ಏನಾಗಬೇಕಾಯ್ಯ" ಸಿದ್ದಪ್ಪ ಕಳವಳದಿಂದ ಹೇಳಿದ.

ಅಷ್ಟರವರೆಗೂ ಇವರ ಮಾತುಕತೆಗಳನ್ನೆಲ್ಲಾ ಮೌನವಾಗಿ ಕೇಳಿಸಿಕೊಳ್ಳುತ್ತಾ ಕುಳಿತಿದ್ದ ಅಂಗಾಡಿ "ಮಿಸ್ಟರ್ ಸಿದ್ದಪ್ಪಾ, ಪಾಟೀಲರು ನೀವೆಲ್ಲಾ ಜೋಗಿಹಾಳರ ಜೊತೆ ಸರಿಯಾಗಿ ಸಹಕರಿಸದೆ ಅವರ ಸಾವಿಗೆ ಮಾನಸಿಕವಾಗಿ ಕಾರಣರಾದಿರೀಂತ ರೂಪಕದ ಭಾಷೆಯಲ್ಲಿ ಹೇಳಿದರಲ್ಲಾ, ಅದೇ ಅಕ್ಷರಶಃ ನಿಜವೂ ಇರಬಹುದೇನೋ ಅಂತ ನನಗೆ ಗುಮಾನಿ" ಎಂದ.

ಅದಕ್ಕೆ ಕುಪಿತನಾದ ಹೆಗ್ಡೆ "ಸರಿ ಮತ್ತೆ ಶುರುವಾಯ್ತಲ್ಲಾ ಹಳೇ ಅವಾಂತರ ಅದಕ್ಕೇ ನಾವು ಇಂಟೆಲಿಜೆನ್ಸ್‌ನವರ ತಂಟೆ ನಮಗೆ ಬೇಡಾಂತ ಹೇಳೋದು" ಎಂದ.

"ಜೋಗಿಹಾಳರು ಬದುಕಿದ್ದಾಗ ನಮಗೆ ಅವರ ಮೇಲೆ ಎಷ್ಟೊಂದು

ಗೌರವ ವಿಶ್ವಾಸ ಇತ್ತೋ ಅದೆಲ್ಲಾ ಅವರ ಮರಣಾನಂತರ ಮಾಯವಾಗಿ ಜೋಗಿಹಾಳರ ಹೆಸರೆತ್ತಿದರೆ ಈಗ ತಲೆಕೆಡುತ್ತದೆ" ಎಂದು ಸಿದ್ದಪ್ಪ ಹೆಗ್ಡೆಯೊಂದಿಗೆ ದನಿಗೂಡಿಸಿದ.

"ನನಗೂ ಹಾಗೇ ಆಗಿದೆ ಸಿದ್ದಪ್ಪಾ. ಎಲ್ಲಾ ಯಾವ ವಿಷಯ ಎತ್ತಿಕೊಂಡರೂ ಅದು ಕೊನೆಗೆ ಜೋಗಿಹಾಳರ ಸಾವಿನ ರಹಸ್ಯದ ಸುತ್ತ ತಿರುಗುತ್ತದೆ ಈ ಊರಲ್ಲಿ. ಈವತ್ತು ಸ್ಟೇಷನ್ನಿಗೆ ಹೊಗಿ ಹಳೇ ತನಿಖೆ ರಿಪೋರ್ಟುಗಳನ್ನೆಲ್ಲಾ ತೆಗೆಸಿ ನೋಡಿದೆ. ಎಲ್ಲಾ ಆಧ್ವಾನ ಕಲಸು ಮೇಲೋಗರ, ಎಂಥೆಂಥದೋ ದುರುದ್ದೇಶಗಳ ಒಳದನಿ ಅದರೊಳಗೆ."

ಹೆಗ್ಡೆ "ಅಂಗಾಡಿ ಖಂಡಿತ ನನ್ನ ನಂಬಿಕೆ ಹೇಳುತ್ತೇನೆ. ಜೋಗಿಹಾಳರನ್ನು ಖೂನಿ ಮಾಡೋದಕ್ಕೆ ಯಾರಿಗೂ ಯಾವ ಕಾರಣವೂ ಇಲ್ಲ. ದಯಮಾಡಿ ಆ ವಿಷಯ ಎತ್ತಿ ನಮ್ಮ ಮೇಲೆ ಹಳೇ ಶನಿಗಳನ್ನೆಲ್ಲಾ ಛೂ ಬಿಡಬೇಡಿ" ಎಂದವ ಅತ್ತಿತ್ತ ಜನ ಓಡಾಡುತ್ತಿರುವುದನ್ನು ನೋಡಿ, "ಅಂಗಾಡಿ ನಾವು ಕುರ್ಚಿ ಒಂದು ಮೂಲೆಗೆ ಹಾಕಿಕೊಂಡು ಮಾತಾಡೋದು ಒಳ್ಳೇದು" ಎಂದ.

ಜಯರಾಮ, ರಾಮಚಂದ್ರ ಇಬ್ಬರೂ ಇವರ ಸಂಭಾಷಣೆಗಳನ್ನು ಕೇಳುತ್ತಾ ಕೇಳುತ್ತಾ ಕುತೂಹಲಿಗಳಾಗುತ್ತಿದ್ದರು. ಎಲ್ಲ ಎದ್ದು ಕುರ್ಚಿಗಳನ್ನು ಹೊತ್ತು ಮೂಲೆಗೆ ಹಾಕಿಕೊಂಡರು. ಹೋಟೆಲ್ ಮಾಣಿ ಟೇಬಲ್ಲನ್ನು ತಂದು ಮತ್ತೆ ಇವರ ಗುಂಪಿನ ಮಧ್ಯೆ ಪ್ರತಿಷ್ಠಾಪಿಸಿದ.

ಹೆಗ್ಡೆ ಮುಂದುವರಿಸಿದ "ನೋಡಿ ಅಂಗಾಡಿ ನಾವು ಯಾವುದೇ ನ್ಯಾಯಬದ್ಧ ನಿಷ್ಪಕ್ಷಪಾತ ತನಿಖೆಗೂ ಎಂದಿರೂ ಹೆದರೊಲ್ಲ. ಆದರೆ ನಾನು ಹೆದರಿರೋದಕ್ಕೆ ಕಾರಣ ಆ ತನಿಖೆ ಅದ್ಯಂತ ಎಷ್ಟೊಂದು ಜನ ಒಳ ಉದ್ದೇಶಗಳನ್ನಿಟ್ಟುಕೊಂಡು ತಮ್ಮ ಬೇಳೆ ಬೇಯಿಸಿಕೊಳ್ಳೋದಕ್ಕೆ ನೋಡಿದರು ಗೊತ್ತಾ? ಶೇಂದಿ ಕಂಟ್ರಾಕ್ಟರ್ ತಲೆಗೆ ತರೋದಕ್ಕೆ ಕೆಲವರು, ಬ್ರೀಡರ್ ಮಹಮದ್ದ ಕುತ್ತಿಗೆಗೆ ತರೋದಕ್ಕೆ ಕೆಲವರು, ನಾನು ಸಿದ್ದಪ್ಪಾನೂ ಕೊಂಚವೇ ದೌರ್ಬಲ್ಯ ತೊರಿಸಿದ್ದರೂ ನಮ್ಮ ಬಾಯಲ್ಲಿ ಯಾರು ಯಾರ ಮೇಲೋ ಸುಳ್ಳು ಹೇಳಿಸೋದಕ್ಕೆ ತಯಾರಿ ನಡೆಸಿದ್ದರು. ಅದಕ್ಕೇ ನಮಗೆ ಜೋಗಿಹಾಳರ ಕೊಲೆ ರಹಸ್ಯಾಂದರೆ ದೆವ್ವ ಕಂಡ ಹಾಗಾಗುತ್ತೆ."

"ಹಾಗಲ್ಲಾ ಹೆಗ್ಡೇ. ನಾನೀನ ಜೋಗಿಹಾಳರ ಸಾವಿನ ತನಿಖೆ ಮಾಡೋದಕ್ಕೆ ಬಂದಿಲ್ಲಾಪ್ಪ. ನನ್ನ ಹತ್ರ ಯಾಕೆ ಹಿಂದೆಮುಂದೆ ನೋಡ್ತೀರ" ಎಂದ ಅಂಗಾಡಿ ಜಯರಾಂ ಕಡೆ ತಿರುಗಿ "ಜಯರಾಂ ನೀವು ಕತೆಗಾರರು. ನಿಮ್ಮನ್ನ ಒಂದು



ವಿಷ್ಯ ಕೇಳಿಕೋತೇನೆ. ದಯವಿಟ್ಟು ಕೊನೆಗೆ ಇದರ ಮೇಲೆ ಕತೆಗಿತೆ ಬರೀಬಾರದು.ನನ್ನ ತನಿಖೆ ಅಂತೂ ಒಂದು ಡೆಡ್‌ಲಾಕ್‌ಗೆ ಸಿಕ್ಕಾಕಿಕೊಂಡಿದೆ, ಯಾವ ದಿಕ್ಕಿನಿಲ್ಲಿ ಹೋದರೂ ಕೊನೆಗೆ ಹೇಗೋ ಜೋಗಿಹಾಳರ ವಿಷ್ಯಕ್ಕೆ ಬಂದು ಸಿಕ್ಕಾಕಿಕೊತ ಇದ್ದೇನೆ. ಎಂದ.

ಅದಕ್ಕೆ ಜಯರಾಂ ನಗುತ್ತಾ "ಅಂಗಾಡಿ, ಒಬ್ಬ ಸಾಹಿತಿಗೆ ಯಾರೂ ಬರೀಬೇಡ ಅಂತಾಗಲೀ, ಬರೀ ಅಂತಾಗಲಿ ಹುಕುಂ ಚಲಾಯಿಸೋ ಹಾಗಿಲ್ಲ. ಸ್ವತಃ ಬರಹಗಾರನಿಂದಲೂ ಅದು ಅಸಾಧ್ಯ" ಎಂದ.

"ಹೋಗಲಿ ಪಬ್ಲಿಷ್ ಆದರೂ ಮಾಡದೆ ಇರಬಹುದಲ್ಲಯ್ಯ. ಆದಾದರೂ ನಿನ್ನ ಕೈಲಿದೆಯೋ ಅಥವಾ ಅದೂ ದೈವಲೀಲೇನೋ" ಎಂದು ರಾಮಚಂದ್ರ ನಗೆಯಾಡಿದ.

"ನಿಮ್ಮಿಂದಾನೂ ಸಾಧ್ಯವಿಲ್ಲಾ ಅನ್ನೋಹಾಗಿದ್ದರೆ ನಿಮ್ಮ ಕಲ್ಪನೆ ಈಗಾಗಲೇ ಆ ಬಗ್ಗೆ ಕತೆ ಹೆಣೆಯೋದಕ್ಕೆ ಶುರು ಮಾಡಿದೇ ಅನ್ನಿ?" ಎಂದ ಅಂಗಾಡಿ.

"ಓಹೋ ಖಂಡಿತ, ಆದರೆ ಅದು ಹೆಣೆಯೋದಲ್ಲಾ ಅಂಗಾಡಿ. ಕೇಳ್ತಾನೆ ಅದು ಕತೆರೂಪದಲ್ಲಿ ತಲೆಯೊಳಗೆ ಜೀರ್ಣವಾಗ್ತಾ ಹೋಗ್ತದೆ."

"ನೋಡಿದಿರಾ ಈಗ ಹೀಗೆ ಹೇಳ್ತೀರ, ಹಿಂದೊಮ್ಮೆ ನಿಮ್ಮ ಕತೆ ಓದಿ ಅದರ ಮೂಲಕ ನಿಮಗೆ ಗೊತ್ತಿದ್ದ ಸಂಗತಿ ತಿಳಿಸಿ ಅಂತ ನಾನು ಕೇಳಿದರೆ ಆಗ ಮಾತ್ರ ನೀವು ಸಹಕರಿಸಲೇ ಇಲ್ಲ. ನೀವು ಒಂದು ಚೂರು ಸಹಕರಿಸಿದ್ದರೆ ನಾನು ಆ ಹುಡುಗಿ ಕೊಲೆ ಕೇಸಿನ ಅಪರಾಧಿಯನ್ನ ಪತ್ತೆ ಮಾಡೇ ಬಿಡ್ತಿದ್ದೆ."

"ಇನ್ನೂ ಆ ಕತೇ ತಲೆಯೊಳಗೆ ಇಟ್ಕೊಂಡಿದ್ದೀರೇನ್ರಿ. ಅದೊಂದು ಕಾಲ್ಪನಿಕ ಕತೆ ಅಂತ ಪ್ರಮಾಣ ಮಾಡಿ ಹೇಳ್ತೀನಿ ಅಂಗಾಡಿ. ವಾಸ್ತವಾಂಶ ಎಲ್ಲಾ ಗೊತ್ತಿರೋ ಒಬ್ಬ ಕತೆಗಾರ ಅವನು ನಿಜವಾಗಿಯೂ ಮಾನವೀಯ ದೃಷ್ಟಿ ಇರುವ ದೊಡ್ಡ ಕಲಾವಿದನಾದರೆ ಮೊದಲು ಕೊಲೆಗಾರಿನಿಗೆ ಶಿಕ್ಷೆ ವಿಧಿಸೋದಕ್ಕೆ ಪ್ರಯತ್ನ ಮಾಡ್ತಾನೆಯೆ ಹೊರತು ಒಳ್ಳೆ ಕತೆ ಬರೆಯೋದಕ್ಕೆ ಪ್ರಯತ್ನಿಸುತ್ತಾ ಕೂರೋದಿಲ್ಲ ಅಂಗಾಡಿ" ಎಂದ ಜಯರಾಂ.

ಅಲ್ಲಿದ್ದ ನಾಲ್ವರಿಗೂ ಜಯರಾಂ ಮಾತು ಪ್ರಾಮಾಣಿಕವಾದ ಒಪ್ಪುವಂಥ ಹೇಳಿಕೆಯಾಗಿ ಕಂಡಿತು.

"ನಿಮ್ಮ ಮೇಲಿನ ಅಪನಂಬಿಕೆಯಿಂದ ಆ ಥರ ಮಾತಾಡ್ತಿಲ್ಲಾ ಜಯರಾಂ. ನೀವೇ ಸಂಶೋಧನ ಕೇಂದ್ರದಲ್ಲಿ ಹೇಳಿದ ಹಾಗೆ ಒಬ್ಬ ನಿಜವಾದ ಕಲಾವಿದರನಿಗೆ ಸಾಕಷ್ಟು ಸತ್ಯಾಂಶವಿರುವ ಸಾಮಗ್ರಿ ಒದಗಿಸಿದರೆ ಅವನು ವಾಸ್ತವಕ್ಕೆ ತೀರಾ

ಸಮೀಪವಾದ ಕತೆ ಸೃಷ್ಟಿಸಬಲ್ಲ ಎನ್ನಲಿಲ್ಲವೆ" ಎಂದ ಅಂಗಾಡಿ. ಒಟ್ಟಿನಲ್ಲಿ ಅಂಗಾಡಿ ದೆಸೆಯಿಂದ ರಾಮಚಂದ್ರ ಒಬ್ಬನನ್ನುಳಿದು ಮಿಕ್ಕವರೆಲ್ಲಾ ಕಿರುಕುಳ ಅನುಸರಿಸುತ್ತಿದ್ದಂತೆನಿಸಿತು.

"ಕಲಾವಿದನ ಇಚ್ಛೆಮೇಲೆ ಅವೆಲ್ಲಾ ನಿಂತಿವೆ. ಅವರು ಇಷ್ಟಪಟ್ಟರೆ ಒಂದು ಪಾತ್ರ ಒಳ್ಳೆಯವನಾಗುತ್ತಾನೆ ಇಲ್ಲಾ ಕೇಡಿಯಾಗುತ್ತಾನೆ" ಎಂದ ಹೆಗ್ಡೆ.

"ನೋ ನೋ ನೋ ನಾನಂತೂ ಇದನ್ನ ಒಪ್ಪೋದಿಲ್ಲಾ. ಇದು ಅತ್ಯಂತ ಗಂಭೀರವಾದ ಪ್ರಶ್ನೆ ತಿಳುಕೊಳ್ಳಿ. ಎಂಥ ಕಾಲ್ಪನಿಕ ಕತೆ ಆದರೂ ಅದರಲ್ಲಿನ ಪಾತ್ರಗಳನ್ನು ಮನಬಂದಂತೆ ರೂಪಿಸೋದು ಅಸಾಧ್ಯ. ಅವು ತನ್ನದೇ ಆದ ನಿಯಮಗಳ ಪ್ರಕಾರ ವ್ಯಕ್ತಿತ್ವ ರೂಪಿಸಿಕೊಳ್ಳುತ್ತಾ ವಿಕಾಸವಾಗುತ್ತಾ ಹೋಗ್ತವೆ. ಹೇಗೆ ಜೀವನದಲ್ಲಿ ವ್ಯಕ್ತಿಗಳ ನಡವಳಿಕೆಗೆ ಆರ್ಥಿಕ ಸಾಮಾಜಿಕ ಅನುಷಂಗಿಕ ಕಾರಣಗಳಿರ್ತವೆಯೋ ಹಾಗೇ ಕಲಾಕೃತಿಗಳೂ ಕೂಡ. ಇದಕ್ಕೆ ವ್ಯತಿರಿಕ್ತವಾದಾಗ ಅದೊಂದು ಕೀಳು ಕಲಾಕೃತಿ ಅನ್ನುತ್ತೇವೆ." ರಾಮಚಂದ್ರ ಗಂಭೀರವಾಗಿ ವಾದಕ್ಕೆ ಇಳಿದು ತೋಳು ಮಡಿಚಿಕೊಳ್ಳತೊಡಗಿದ.

"ನೀನು ಹೇಳೋದನ್ನ ನಾನು ಕೆಲಮಟ್ಟಿಗೆ ಒಪ್ತೀನಯ್ಯಾ. ಅದರೂ ಜೀವನದಲ್ಲಿ ಮತ್ತು ವಾಸ್ತವ ಜಗತ್ತಿನಲ್ಲಿ ವ್ಯಕ್ತಿಗಳೂ ಒಳ್ಳೆಯವರೂ ಕೆಟ್ಟವರೂ ಆಗೋದಕ್ಕೆ ಅವಕಾಶ ಸ್ವಾತಂತ್ರ್ಯ ಇಲ್ಲವೆ! ಹಾಗೇ ಕಾದಂಬರಿಯಲ್ಲೂ" ಜಯರಾಂ ಹೇಳಿದ.

"ನೋ ನೋ ನೋ, ಸ್ವಾತಂತ್ರ್ಯದ ಭ್ರಮೆಯಲ್ಲಿ ನಾವು ಪರಿಸರ ಮತ್ತು ಸನ್ನಿವೇಶಗಳ ವಿಧಿನಿಯಮಗಳ ಪ್ರಕಾರನೇ ವರ್ತಿಸುತ್ತೇವೆ. ಕತೆಯಲ್ಲೂ ಹಾಗೇ, ಒಂದು ಕತೆಯ ಕೊನೆಯನ್ನು ನೀನು ಬದಲಾಯಿಸಬೇಕಾಗಿ ಬಂದರೂ ಅದನ್ನು ಮೊದಲಿನಿಂದಲೂ ತಿದ್ದಬೇಕಾಗುತ್ತೆ."

"ಇರಬಹುದು. ಸ್ವಾತಂತ್ರ್ಯದ ಭ್ರಮೆಯಲ್ಲಿಯೇ ನಾವು ನಿಯಮಗಳ ಬಂಧಿಗಳಾಗಿರಬಹುದು. ಆದರೆ ನಾವು ಸ್ವತಂತ್ರರೋ, ನಿಯಮಗಳ ಬಂಧಿಗಳೋ ಪರೀಕ್ಷಿಸಿ ಪತ್ತೆಹಚ್ಚುವುದು ಜೀವನದಲ್ಲಂತೂ ಸಾಧ್ಯವೇ ಇಲ್ಲ. ಕಾಲ ದೇಶಗಳ ವರ್ತಮಾನದ ಒಂದು ಕ್ಷಣದಲ್ಲಿ ಏಕಕಾಲದಲ್ಲಿ ಎರಡು ರೀತಿಗಳಲ್ಲಿ ವರ್ತಿಸಬಹುದಾದ ಸ್ವಾತಂತ್ರ್ಯ ನಿನಗೆ ಸಿಕ್ಕಾಗ ಮಾತ್ರ ಅದನ್ನು ನಾವು ಪತ್ತೆ ಹಚ್ಚಲು ಸಾಧ್ಯ. ಕಾಲ ದೇಶಗಳ ಈ ವರ್ತಮಾನದ ಕ್ಷಣಗಳಲ್ಲಿ ನಮಗೆ ಒಮ್ಮೆ ಒಂದೇ ಒಂದು ಸಾರಿ ಮಾತ್ರ ವರ್ತಿಸೋ ಸ್ವಾತಂತ್ರ್ಯ ಅಥವಾ ಬಂಧನ ಇರುವುದು."



"ಸರಿ! ಒಂದೇ ಕೆಲಸವನ್ನೇ ಎರಡೆರಡು ರೀತಿ ಮಾಡಿದರೂ ನಾವು ಅದು ಕಾಲ ದೇಶದ ಎರಡು ವಿಭಿನ್ನ ಕ್ಷಣಗಳ ವರ್ತನೆ. ಏನು ಮಾಡಿದರೂ. ಒಂದು ಇನ್ನೊಂದು ಕ್ಷಣದ ಪುನರಾವರ್ತನೆಯಲ್ಲ. ಅದಕ್ಕೇ ಹೇಳೋದು. ಇದನ್ನು ಒಬ್ಬ ಕಲಾವಿದರ ತನ್ನ ಕಲಾಕೃತಿಯೊಳಗೆ ಪುನಃ ಸೃಷ್ಟಿ ಮಾಡುವಾಗ ಇದರ ಸ್ವರೂಪ ಏನು ಅಂತ ಬಯಲು ಮಾಡಬಹುದು ಅಂತ."

"ಹಾಗಾದರೆ ರಾಮಚಂದ್ರ, ಈಗ ನನ್ನದೊಂದು ಹಳೆಯ ಕತೆ ಕೆಲವೊಂದು ಅಸಹಜ ಕಾಲ್ಪನಿಕ ಪಾತ್ರಗಳ ದೆಸೆಯಿಂದ ಅಂಗಾಡಿಯ ಪ್ರಕಾರ ತನಿಖೆಯನ್ನು ತಪ್ಪು ತೀರ್ಮಾನಗಳಿಗೆ ಒಯ್ದಿತು. ಅಂಗಾಡಿ ಹೇಳಿದರಲ್ಲ ಹಾಗಾದರೆ, ಆ ಪಾತ್ರಗಳನ್ನು ಬಿಟ್ಟು ಕತೇನ ಬದಲಾಯಿಸಿ ಬರೆದರೆ ಕೊಲೆಗಾರ ಯಾರೆಂದು ಅಂಗಾಡಿ ಪತ್ತೆ ಮಾಡಿಬಿಡಬಹುದೋ?"

"ರೈಟ್ ರೈಟ್! ಹಾಗೆ ಬನ್ನಿ ಪಾಯಿಂಟಿಗೆ" ಅವರೆಗೂ ಸುಮ್ಮನೆ ಮಾತು ಕೇಳುತ್ತಾ ಕುಳಿತಿದ್ದ ಅಂಗಾಡಿ ಉತ್ಸಾಹದಿಂದ ತಲೆ ಹಾಕಿದ. "ಆ ಕತೇನೂ ಬೇಡ, ಆ ಪಾತ್ರಗಳೂ ಬೇಡ. ಜಯರಾಂ, ಈಗ ಜೋಗಿಹಾಳರ ಕತೇನೇ ತಗೊಳ್ಳಿ. ಅವರ ಸಾವಿನ ಪ್ರಕರಣ ನಾನೀಗ ಮುಂದಕ್ಕೆ ಹೋಗಲಾರದ ಸ್ಥಿತಿ ಮುಟ್ಟಿದ್ದೇನೆ. ನನಗೆ ಗೊತ್ತಿರೋ ಅಷ್ಟೂ ಸತ್ಯಸಂಗತಿ ನಿಮಗೆ ತಿಳಿಸುತ್ತೇನೆ. ನೀವು ನಿಮ್ಮ ಕಲ್ಪನೆ ಉಪಯೋಗಿಸಿ ಒಂದು ಕತೆ ಹೇಳಿ. ನಾನು ಅದಕ್ಕೆ ವಿಮರ್ಶಕ. ನಾನು ನಿಮ್ಮ ಕಲ್ಪನೆ ಉಪಯೋಗಿಸಿಕೊಂಡು ಯಾವುದು ಅಸಹಜ ಸಹಜ ಎಂದು ತನಿಖೆ ಮಾಡುತ್ತಾ ಹೋಗುತ್ತೇನೆ."

ಜೀವನ ನಿಜವಾಗಿಯೂ ಸ್ವಾತಂತ್ರ್ಯದ ಭ್ರಮಯಲ್ಲಿ ರೂಪಿತವಾಗುವ ಕೇವಲ ಕ್ರಮಬದ್ಧ ವಿಕಾಸವಾಗಿದ್ದರೆ! ನಿಮ್ಮ ಕತೆ ವಾಸ್ತವ ಸಂಗತಿಗಳ ಆಧಾರದ ಮೇಲೆ ರೂಪುಗೊಂಡರೆ! ಕೊನೇವರೆಗೂ ಸತ್ಯವಾಗ್ತಾನೆ ಹೋಗಬೇಕು. ನಿಮಗೂ ಈ ರಹಸ್ಯ ಪತ್ತೆ ಮಾಡಿದಂತಾಗುತ್ತೆ. ಅಲ್ಲಿಗೆ ನನ್ನ ರಿಪೋರ್ಟಿಗೂ ಸಹಾಯವಾಗುತ್ತೆ! ಏನಂತೀರ!" ಎಂದ ಅಂಗಾಡಿ.

ಸಿದ್ದಪ್ಪಾ ಮತ್ತು ಹೆಗ್ಡೆ ಇಬ್ಬರೂ ಜಯರಾಂ ಕಡೆಗೆ ತಿರುಗಿ, "ಜಯರಾಂ ನಿಮ್ಮ ಕಲ್ಪನೆ ಜಾಗೃತವಾಗೋದರೊಳಗೆ ನಾವಿಲ್ಲಿಂದ ಕಾಲು ಕೀಳುತ್ತೇವೆ. ಜೋಗಿಹಾಳರ ಸಾವು ನಮಗೆ ಮರೆತ ಸಂಗತಿ" ಎಂದು ಎದ್ದು ನಿಂತರು.

"ಏ! ಕೂತ್ಕೋಳ್ರಯ್ಯಾ ಇರಲಿ. ನೀವು ಹೀಗೆ ಎದ್ದು ಓಡಿದರೆ ನನ್ನ ಕಲ್ಪನೆ ಮೊದಲು ಇವರು ಯಾಕೆ ಓಡಿದರು? ಇವರೇ ಕೊಲೆ ಮಾಡಿದರೆ? ಎಂದು ಶಂಕಿಸುತ್ತೆ. ಆವಾಗ ಆ ಬಗ್ಗೆ ಅಂಗಾಡಿ ತನಿಖೆ ಆರಂಭವಾಗುತ್ತೆ

ಗೊತ್ತಾಯ್ತೋ" ಎಂದ ಜಯರಾಂ.

"ಇದ್ಯಾವ ಗೋಳಯ್ಯ! ನಮಗೇ ಗೊತ್ತಿಲ್ಲದಂತೆ ಈ ಬಲೆಯಲ್ಲಿ ನಾವು ಸಿಕ್ಕಾಕಿಕೋತ ಇದೀವಲ್ಲಯ್ಯ" ಎಂದು ಗೊಣಗುತ್ತ ಎದ್ದ ಸಿದ್ದಪ್ಪ.

"ಕುತ್ಕೋಳ್ರೀ, ಕತೇ ಕೇಳೋದಕ್ಕೇನು ನಿಮಗೆ ಭಯಾನೇನ್ರಿ?" ಎಂದು ಅಂಗಾಡಿ ಚುಡಾಯಿಸಿದ.

ಕತೆ ಕೇಳೋದಕ್ಕೆ ಅವರಿಗೇನೂ ಭಯ ಇರಲಿಲ್ಲ. ಆದರೆ ಅದರೊಡನೆ ಮಿನಿಸ್ಟ್ರಿಗೆ ರಿಪೋರ್ಟ್ ಕಳಿಸುವ ಅಂಗಾಡಿ ಸೇರಿಕೊಂಡು ತುಂಬಾ ತೊಂದರೆ ಆಗಿತ್ತು ಅಷ್ಟೆ.

"ಒಂದು ಕೆಲಸ ಮಾಡೋಣ್ರಿ. ನಾವೆಲ್ಲಾ ಟಿಬಿಗೆ ಹೋಗೋಣ. ಜೋಗಿಹಾಳರ ಸಾವಿನ ಬಗ್ಗೆ ಈವರೆಗೆ ನಾನು ತಿಳಿದಿರೋದನ್ನೆಲ್ಲಾ ನಿಮಗೆ ಹೇಳ್ತೀನಿ. ಇದೊಂದು ಇಸ್ಪೀಟಾಟದ ತರ ಅಂತ ತೀಳಿದುಕೊಳ್ಳಿ. ಇಲ್ಲೆಲ್ಲಾ ಪಬ್ಲಿಕ್‌ನಲ್ಲಿ ನಾವ್ಯಾಕೆ ಈ ವಿಷಯಗಳ ಬಗ್ಗೆ ಮಾತಾಡೋಣ" ಎಂದ ಅಂಗಾಡಿ.

"ಸರಿ, ಟಿಬಿಗೆ ರೆವಿನ್ಯೂ ಮಿನಿಷ್ಟ್ರು ಬರ್ತಾರೆ ಅಂತ ಪ್ರೋಗ್ರಾಂ ಇತ್ತಲ್ಲಪ್ಪಾ" ಎಂದ ಜಯರಾಂ.

"ಏನೋ ಹಾಗಂತ ಹೇಳಿ ಮೇಟಿ ಒಂದು ರೂಂ ರೆಡಿ ಮಾಡ್ತಿದ್ದ. ಆಮೇಲೆ ಬರೋಲ್ಲಾಂತ ಹೇಳಿದ" ಎಂದ ಅಂಗಾಡಿ.

ಅವರೆಲ್ಲಾ ಹೋಟೆಲಿಂದ ಇಳಿದು ಹೊರಬಂದರು. ಚಂದ್ರೋದಯದ ಸೂಚನೆಗಳು ಕಾಣತೊಡಗಿದ್ದವು. ಕಲ್ಲುಸೇತುವೆ ಕಡೆಯಿಂದ ಥಂ ಎಂದು ಒಂದು ಈಡಿನ ಢಂಕಾರ ಕೇಳಿಸಿತು.





# ಅಧ್ಯಾಯ ೨೧



"ಒಳ್ಳೇದಾಯ್ತು. ಅವರು ಎಂಥ ವಿಜ್ಞಾನಿನೇ? ದೇವರಿಲ್ಲಾಂತ ಹೇಳಿದರೆ! ತಂದೆತಾಯಿ ಇಲ್ಲದೆ ಮಕ್ಕಳು ಇರೋದಕ್ಕೆ ಸಾಧ್ಯನಾ. ಏನು ವಿದ್ಯಾವಂತರೋ ಏನೋ" ಎಂದು ಡಾ॥ ಪಾಟೀಲರ ಬಗ್ಗೆ ಕೃಷ್ಣೇಗೌಡ ಗೊಣಗಿದ. ಅವನಿಗೆ ಜಯಂತಿ ಆ ದಿನ ಕಾಲೇಜಿನಲ್ಲಿ ನಡೆದ ಘಟನೆಗಳನ್ನು ಹೇಳುತ್ತಿದ್ದಳು. ಉದ್ಭವ ವೆಂಕಟೇಶ್ವರಸ್ವಾಮಿ ಭಕ್ತಸಮುದಾಯಕ್ಕೆ ಸೇರಿದ ಕೃಷ್ಣೇಗೌಡನಿಗೆ ಪಾಟೀಲರು ದೇವಸ್ಥಾನದ ಮೈಕಿನ ಕಿರುಚಾಟಕ್ಕೆ ವಿರೋಧಿಗಳಾಗಿದ್ದಾರೆಂದು ತಿಳಿದು ಕೋಪವಿತ್ತು. ಜಯಂತಿ ಏನನ್ನೋ ಕೃಷ್ಣೇಣೇಗೌಡನಿಗೆ ಹೇಳುತ್ತಲೇ ಇದ್ದಳು. ಆದರೆ ಕೃಷ್ಣೇಗೌಡನಿಗೆ ತಲೆಯೊಳಗೆ ಓಡುತ್ತಿದ್ದುದು ಬೇರೆಯೇ.

"ಇದ್ಯಾಕೋ ಮನ್‌ಷರ ಕೆಲಸ ಕಂಡಂಗೆ ಕಾಣ್ತಿಲ್ಲ" ಎಂದು ಚೀಂಕ್ರ ಕಲ್ಲು ಬಿಳುವುದರ ಬಗ್ಗೆ ಹೇಳಿದ್ದು ನೋಡಿ ಅವನು ಕಂಗಾಲಾಗಿದ್ದ. ಯಾಕೆಂದರೆ

ಎಂಥ ವೈರಿಯನ್ನಾದರೂ ಎದುರಿಸಬಹುದು. ಈ ದೆವ್ವ ಪಿಶಾಚಿಗಳಂಥ ಅದೃಶ್ಯ ವೈರಿಗಳನ್ನು ಹೇಗೆ ಹೆದರಿಸುವುದು? "ಕಲ್ಲು ಬೀಳೋದು ತಾನೆ. ನಾಲ್ಕು ದಿನ ಬೀಳ್ತದೆ. ಆಮೇಲೆ ತಾನಾಗಿ ನಿಲ್ತದೆ!" ಎಂದುಕೊಂಡ.

ಆದರೆ ನಿಜವಾಗಿಯೂ ಅವನಿಗೆ ಇದಕ್ಕಿಂತ ಮುಖ್ಯವಾಗಿ ತಲೆ ಕೊರೆದು ತಿನ್ನುತ್ತಿದ್ದುದು ಎಂದರೆ ಕೃಷ್ಣೇಗೌಡರ ದಾಸ್ತಾನಿನ ಏಲಕ್ಕಿ ಎಲ್ಲವನ್ನೂ ಹರಾಜಿನಲ್ಲಿ ಕೂಗಿ ಯಾವನೋ ಕೊಂಡುಕೊಂಡಿದ್ದ. ಈ ರೀತಿ ಲಕ್ಷಾಂತರ ರೂ. ಮಾಲುಗಳನ್ನು ಒಮ್ಮೆಗೆ ಬಿಕರೆ ಮಾಡಿದವ ಯಾರು ಎಂದು ತನಿಖೆ ಮಾಡಲಾಗಿ ಕೃಷ್ಣೇಗೌಡನಿಗೆ ಸಿಡಿಲು ಹೊಡೆದಂತೆ ಅರಿವಿಗೆ ಬಂತು, ಆತ ಸುಲೇಮಾನ್ ಯೂಸುಫ್ ಬೇರಿ ಕಡೆಯವನು ಎಂದು.

ಸುಲೇಮಾನ್ ಯೂಸುಫ್ ಬೇರಿ ಕೆಸರೂರಿಗೆ ಆಗಮಿಸಿದ್ದು ಒಣ ಮೀನು ಮಾರಾಟ ಮಾಡಲು. ಆತ ಕೆಲವೇ ವರ್ಷಗಳಲ್ಲಿ ಕೆಸರೂರಿನ ಕೋಟ್ಯಾಧಿಪತಿಯಾಗಿದ್ದು ಮಾತ್ರ ಯಾರಿಗೂ ತಿಳಿಯದ ಸಂಗತಿಯಾಗಿತ್ತು. ಕೆಲವರು ಆತ ಮಾರಾಟಕ್ಕೆ ತಂದ ಒಣಮೀನಿನ ಚೀಲದಲ್ಲಿ ಒಮ್ಮೆ ಕಳ್ಳಸಾಗಾಣಿಕೆದಾರರ ಚಿನ್ನದ ಗಟ್ಟಿಗಳು ದಾರಿ ತಪ್ಪಿ ಬಂದಿಬಿಟ್ಟಿತ್ತೆಂದೂ, ಅಂದಿನಿಂದ ಸುಲೇಮಾನ್ ಯೂಸುಫ್ ಬೇರಿಯ ನಸೀಬು ಬದಲಾಗಿ ಹೋಯ್ತೆಂದೂ ಹೇಳುತ್ತಿದ್ದರು. ಮತ್ತೆ ಕೆಲವರು ಇವರ ಕೊಯಮತ್ತೂರಿನಿಂದ ನೋಟ್ ಪ್ರಿಂಟ್ ಮಾಡುವವರನ್ನು ಕರೆಸಿ ಅವರಿಂದ ಲಕ್ಷಲಕ್ಷ ನೋಟ್ ಪ್ರಿಂಟ್ ಮಾಡಿಸಿ ಆಮೇಲೆ ಅವರು ಮೂವರನ್ನೂ ಮುಗಿಸಿದನೆಂದು ಮಾತಾಡುತ್ತಿದ್ದರು.

ಹೀಗೆ ಒಟ್ಟಿನಲ್ಲಿ ತಕ್ಷಣದ ಶ್ರೀಮಂತಿಕೆಗೆ ಯಾವ ಯಾವ ಕ್ಷಿಪ್ರ ಮಾರ್ಗಗಳಿವೆ ಎಂದು ತಮ್ಮ ಕಲ್ಪನೆಗೆ ಹೋಳೆಯುತ್ತಿತ್ತೋ ಅವನ್ನೆಲ್ಲಾ ಸುಲೇಮಾನ್ ಬೇರಿಗೆ ಆರೋಪಿಸಿ ಮಾತಾಡುತ್ತಿದ್ದರು.

ಸುಲೇಮಾನ್ ಬೇರಿ ಬಳಿ ಮೂರು ಹಡಗುಗಳಿದ್ದವು. ಅರಬ್ ದೇಶಗಳೊಂದಿಗೆ ಆತ ರಫ್ತು ವ್ಯಾಪಾರ ನಡೆಸುತ್ತಿದ್ದ. ಅಲ್ಲಿಂದ ಖರ್ಜೂರವನ್ನು ಭಾರತಕ್ಕೆ ಸಾಗಿಸಿ ಇಲ್ಲಿಂದ ಹುಣಸೆ ಹಣ್ಣು ಇತ್ಯಾದಿಗಳನ್ನು ರಫ್ತು ಮಾಡುತ್ತಿದ್ದ. ಇದರೊಂದಿಗೆ ಏಲಕ್ಕಿ ಮುಂತಾದವುಗಳ ಕಳ್ಳಸಾಗಾಣಿಕೆಯನ್ನೂ ನಡೆಸುತ್ತಿದ್ದ. ಅವನ ಈಚಿನ ಹೊಸ ವ್ಯಾಪಾರ ಎಂದರೆ ಕೆಸರೂರಿನಲ್ಲಿ ಒಂದು ಏಲಕ್ಕಿ ಮಂಡಿ ತೆರೆದು ಅವನೇ ಕೊಂಡು ನೇರ ರಫ್ತು ವ್ಯಾಪಾರಕ್ಕೆ ಇಳಿಯುವುದು. ಅದಕ್ಕಾಗಿ ಕೆಸರೂರಿನಲ್ಲಿ ಕಕ್ಕುಂಜಿ ಬೇರಿ ಮಳಿಗೆಯನ್ನುಕೊಂಡು ಮಲಬಾರ್ ಏಲಕ್ಕಿ ಮಂಡಿ ತೆರೆಯುವ ಹವಣಿಕೆಯಲ್ಲಿದ್ದ. ಇದೇ ನಿಜವಾಗಿಯೂ ಕೃಷ್ಣೇಗೌಡನಿಗೆ



ತಲೆ ತಿನ್ನುತ್ತಿದ್ದುದು. ಏಕೆಂದರೆ ಆತನಿಗೆ ಸುಲೇಮಾನ್ ಬೇರಿ ಜೊತೆ ಪೈಪೋಟಿ ನಡೆಸುವುದು ಸಾಧ್ಯವಿರಲಿಲ್ಲ.

ಇನ್ನೊಂದು ಕೃಷ್ಣಪ್ಪಗೌಡನಿಗಿದ್ದ ಪ್ರತಿಕೂಲ ಪರಿಸ್ಥಿತಿ ಎಂದರೆ ಏಲಕ್ಕಿ ಚಿಲ್ಲರೆ ವ್ಯಾಪಾರವೆಲ್ಲಾ ನೂರಕ್ಕೆ ನೂರರಷ್ಟು ಬೇರಿಗಳೇ ನಡೆಸುತ್ತಿದ್ದರು. ಈಗ ಸುಲೇಮಾನ್ ಬೇರಿ ಮಂಡಿ ತೆರೆದೊಡನೆ ಈ ವಾಣಿಜ್ಯ ಮಾರ್ಗಗಳೆಲ್ಲಾ ನೇರವಾಗಿ ಅವನ ಮಂಡಿಯ ಮಾರ್ಗವನ್ನೇ ಹಿಡಿಯುತ್ತವೆ!

ಸುಲೇಮಾನ್ ಬೇರಿ ಕಳ್ಳಸಾಗಾಣಿಕೆ, ಲಂಚ, ಅರಣ್ಯನಾಶ ಮುಂತಾದವನೇಕವನ್ನು ನಡೆಸಿದ್ದರೂ ಕೆಸರೂರಿನ ಜನರ ತಲೆಗೆ ಇವ್ಯಾವೂ ತಾಗಿಯೇ ಇರಲಿಲ್ಲ. ಆದರೆ ಸುಲೇಮಾನ್ ಬೇರಿಯ ಅಪಾಯ ಅವರಿಗೆ ತಟ್ಟಲಾರಂಭಿಸಿದ ರೀತಿಯೇ ಬೇರೆ. ಸುಲೇಮಾನ್ ಬೇರಿ ಹೋದಹೋದಲ್ಲೆಲ್ಲಾ ತನ್ನ ಕಡೆಯ ಜನಗಳಿಗೆ ಕೆಲಸ ಕೊಡುತ್ತಿದ್ದ. ಎಲ್ಲೆಲ್ಲಿ ಯಾವ್ಯಾವ ಕಂಟ್ರಾಕ್ಟು ಹಿಡಿಯಲಿ, ಎಲ್ಲೆಲ್ಲಿ ಇದ್ದಿಲು ಮಾಡಲು ಅರಣ್ಯದ ಕೂಪು ಮಾಡಲಿ ಅಲ್ಲೆಲ್ಲ ನೂರಾರು ಕೇರಳ ಬೇರಿಗಳು ಬಂದು ಬೀಡು ಬಿಡುತ್ತಿದ್ದರು. ಅವರು ಹಾಕಿದ ವಠಾರದ ಜಾಗಗಳನ್ನೆಲ್ಲಾ ಸುಲೇಮಾನ್ ಬೇರಿ ತಹಶೀಲ್ದಾರರು ರೆವಿನ್ಯೂ ಇನ್‌ಸ್ಪೆಕ್ಟರು ಸರ್ವೇಯರುಗಳು ಇವರನ್ನೆಲ್ಲಾ ಹಿಡಿದು ಲಂಚದ ಬುಟ್ಟಿಗೆ ಬೀಳಿಸಿ ಅವರಿಗೇ ಮಂಜೂರಾಗುವಂತೆ ಮಾಡುತ್ತಿದ್ದ. ಈ ದೊಡ್ಡ ದೊಡ್ಡ ಸಾಬರ ವಠಾರಗಳನ್ನು ನೋಡುತ್ತಿದ್ದಂತೆಯೆ ಕೆಸರೂರಿನ ಜನರ ಕಣ್ಣು ಕೆಂಪಾಗತೊಡಗಿತು. ಮಸೀದಿಗಳೆದ್ದು ಮೈಕುಗಳ ಕೂಗಾಟ ಆರಂಭವಾದೊಡನೆ ಸುಲೇಮಾನ್ ಬೇರಿಯ ಉದ್ದೇಶ ಅರ್ಥವಾಗತೊಡಗಿತು. ಬೇರಿ ಹಣ ಧರ್ಮ ರಾಜಕೀಯಗಳನ್ನೆಲ್ಲಾ ಒಂದರೊಳಗೊಂದು ಸೇರಿಸಿ ಬಲವರ್ಧನೆ ಮಾಡಿಕೊಳ್ಳತೊಡಗಿದ.

ಕೆಸರೂರಿನ ಒಕ್ಕಲಿಗರು ಲಿಂಗಾಯಿತರು ಇತ್ತ ತಮ್ಮ ಆಸ್ತಿಪಾಸ್ತಿ ತಮ್ಮಲ್ಲೇ ಉಳಿಸಿಕೊಳ್ಳಲು ತಮ್ಮತಮ್ಮಲ್ಲೇ ಹೆಣ್ಣು ಕೊಟ್ಟು ತರುತ್ತಾ ತಮ್ಮ ಕುಟುಂಬ ರಕ್ಷಣೆ ನಡೆಸುತ್ತಿರಬೇಕಾದರೆ ಅವರಿಗೆ ಸುಲೇಮಾನ್ ಬೇರಿಯ ಸವಾಲು ಬಂದುದು ತಿಳಿಯಲೇ ಇಲ್ಲ.

ಸುಲೇಮಾನ್ ಬೇರಿ ಕಡೆಯವರೊಂದಷ್ಟು ಜನ ತಾಲ್ಲೂಕ್ ಬೋರ್ಡ್ ಮೆಂಬರುಗಳಾಗಿ ಬಂದು ನಮ್ಮ ಕೆಸರೂರಿನ ಪಟೇಲ್ ಪಾಳೆಗಾರರುಗಳ ಪಕ್ಕ ಕುಳಿತರು. ಕೆಸರೂರಿನ ಒಕ್ಕಲಿಗರೂ ಲಿಂಗಾಯತರೂ ಗಾಬರಿ ಬಿದ್ದರು.

ಕೃಷ್ಣೇಗೌಡನಿಗೆ ಕೆಸರೂರಿನ ಸಂಸ್ಕೃತಿಯ ಅವಸಾನವನ್ನು ಅದರ ವಿಸ್ತೃತ ಸ್ವರೂಪದಲ್ಲಿ ಅರಿಯಲು ಸಾಧ್ಯವಿಲ್ಲದಿದ್ದರೂ ತನ್ನ ಅನುಭವಕ್ಕೆ ಬಂದ ರೀತಿಯಲ್ಲಿ

ಗ್ರಹಿಸಿ ಕೆಸರೂರಿಗೆ ಏನೋ ಕೇಡುಗಾಲ ಬಂದಿದೆ! ಎಂದು ಶಂಕಿಸಿದ. ಅದಕ್ಕೆ ಸರಿಯಾಗಿ ಆತನ ಮನೆ ಮೇಲೆ ಕಲ್ಲು ಬೀಳುವ ಹೊಸದೊಂದು ಸಮಸ್ಯೆ ಉದ್ಭವವಾಗಿತ್ತು.

ಕೆಸರೂರು ನಾಶವಾಗುತ್ತಿತ್ತು. ಕಾಡಿನ ಮೂಲಕ, ಮತಗಳ ಧರ್ಮಗಳ ಮೂಲಕ, ಕೊನೆಗೆ ಜೋಗಿಹಾಳರ ಸಾವಿನ ಮೂಲಕವೂ ಸಹ.



## ಅಧ್ಯಾಯ ೨೨



"ಅಲ್ಲಯ್ಯಾ ರಾಮಚಂದ್ರ. ನೀನು ವಿಚಾರವಾದಿ ಅಂತಿ. ಮತ್ತೆ ನನ್ನ್ಯಾಕೆ ಇಲ್ಲಿ ಭವಿಷ್ಯ ಹೇಳೋದಕ್ಕೆ ಕೂರಿಸಿಕೊಂಡಿದ್ದೀರಿ" ಎಂದ ಜಯರಾಂ.

"ಭವಿಷ್ಯ ಅಲ್ಲವಯ್ಯಾ, ಭೂತ. ಹಿಂದೆ ಏನಾಗಿದ್ದಿರಬಹುದೂಂತ ಹೇಳು ಅಂತಿದ್ದೇವೆ" ಎಂದ ರಾಮಚಂದ್ರ.

"ಏನಾಗಿದ್ದಿರಬಹುದೂಂತ ಸತ್ಯಸಂಗತಿಗಳ ತುಣುಕುಗಳ ಮೇಲೆ ನೀವು ಸೃಷ್ಟಿಶೀಲ ಬರಹಗಾರ ಅಂತಿರೋದರಿಂದ ಕತೆ ಹೇಳಿ ಅಂತಿದ್ದೇವೆ! ಯಾಕೆಂದರೆ ಈ ತುಣುಕುಗಳನ್ನು ಹೇಗೆ ಹೇಗೋ ಜೋಡಿಸಿದ ಒಂದು ಕತೆ ಬೇಕಾಗಿದೆ ನಮಗೆ. ಅದನ್ನು ಹಿಡಿದು ತನಿಖೆ ಮುಂದುವರಿಸಿಕೊಂಡು ಹೋಗೋದಕ್ಕೆ. ಕೊನೇಪಕ್ಷ ನಿಮ್ಮ ಕತೆ ಸುಳ್ಳು ಅಂತಾದರೂನಾವು ಸಾಧಿಸಿದರೆ ಆ ಮೂಲಕ ನಿಜ ಏನಂತ ಹೊರಬೀಳುತ್ತೇ" ಅಂಗಾಡಿ ಎಂದ.

"ನೀವು ಜೋಗಿಹಾಳರ ಸಾವಿನ ಬಗ್ಗೆ ಈವರೆಗೆ ತಿಳಿದುಕೊಂಡಿರೋ ವಿಷಯ ಮತ್ತು ಈಚಿನ ದಿನಗಳಲ್ಲಿ ಕೆಸರೂರಿನ ಏಲಕ್ಕಿಗೆ ಒದಗಿರೋ ಗತಿ ಇವನ್ನೆಲ್ಲಾ ಗಮನಿಸಿದರೆ ನನ್ನ ಕಲ್ಪನೆ ಕೆಸರೂರಿನ ಪರಿಸರ ಮೀರಿದ ಕತೆ ಹೇಳುತ್ತೆ. ಮೊದಲೇ ನೋಡಿ ಜೋಗಿಹಾಳರ ಸಾವಿನ ಬಗ್ಗೆ ಒಬ್ಬೊಬ್ಬರು

ಒಂದೊಂದು ತರ ಕತೆ ಕಟ್ಟಿ ವ್ಯಾಖ್ಯಾನ ಮಾಡಿ ಅಧ್ವಾನ ಆಗಿದೆ. ಇನ್ನು ನನ್ನದೊಂದು ಬಾಕಿ ಇತ್ತು" ಎಂದು, ಅನಂತರ ಜಯರಾಂ ಮಾತಾಡದೆ ಗಂಭೀರವಾಗಿ ಯೋಚಿಸುತ್ತ ಕುಳಿತ. ಜಯರಾಂ ಏನೇನನ್ನು ಕಲ್ಪಸಬಹುದೆಂದು ಅಲ್ಲಿದ್ದವರೆಲ್ಲಾ ಒಂದೊಂದು ಕತೆಯನ್ನು ಕಲ್ಪಿಸಿತೊಡಗಿದರು. ಹೆಗ್ಡೆ ಸಿದ್ದಪ್ಪ ಇಬ್ಬರೂ ಜೋಗಿಹಾಳರ ಮರಣ ಕೇವಲ ಆಕಸ್ಮಿಕ ಎಂದು ಯೋಚಿಸಿದರು. ಜೋಗಿಹಾಳರು ಅಪಘಾತದಲ್ಲಿ ಸತ್ತಿದ್ದಾರೆ. ಅದರಲ್ಲಿ ರಹಸ್ಯ ಏನೂ ಅವರಿಗೆ ತೋರಲೇ ಇಲ್ಲ. ಜಯರಾಂ ಇದಕ್ಕಿಂತ ಅನ್ಯವಾದುದನ್ನು ಏನನ್ನು ತಾನೆ ಹೇಳಿಯಾನೆಂದು ಅವರು ಅಚ್ಚರಿಪಟ್ಟರು.

ಅಂಗಾಡಿ ಮಾತ್ರ ಖಾಲಿ ಮನಸ್ಸು ಮಾಡಿಕೊಂಡೇ ಕುಳಿತಿದ್ದ. ಏಕೆಂದರೆ ಅವನಿಗೆ ಸಾಕ್ಷಾಧಾರಗಳ ಮುಖೇನ ಮುಂದೇನನ್ನೂ ಯೋಚಿಸಲಾರದಂಥ ಕೊನೆ ಮುಟ್ಟಿ ಕಲ್ಪನೆ ಕೈಕಟ್ಟಿ ಕುಳಿತಿತ್ತು.

ಜೋಗಿಹಾಳರಿಗೆ ಯಾರಾದರೂ ಪ್ರೇಯಸಿಯರಿದ್ದರೆ? ರಾಮಚಂದ್ರನ ತಲೆಯೊಳಗೆ ವಿಚಿತ್ರ ಕಲ್ಪನೆಯೊಂದು ಸುಳಿದುಹೋಯ್ತು. ಆದರೆ ಅಂಗಾಡಿ ತಿಳಿಸಿದ ತನಿಖೆಯ ತುಣುಕುಗಳಲ್ಲೆಲ್ಲೂ ಈ ಬಗೆಯ ಸಂಗತಿ ತೋರಿಬಂದಿರಲಿಲ್ಲ. ಜಯರಾಂ ಏನು ತಾನೆ ಹೇಳಿಯಾನು? ಎಂದು ರಾಮಚಂದ್ರನೂ ಅಚ್ಚರಿಪಟ್ಟ.

ಜಯರಾಂ ತುಂಬಹೊತ್ತು ಸುಮ್ಮನೆ ಕುಳಿತಿದ್ದವ ಅನಂತರ ಗಂಭೀರವಾಗಿ ತನ್ನಕತೆ ಆರಂಭಿಸಿದ. ಇವರು ಯಾರೂ ಊಹಿಸಲೂ ಸಾಧ್ಯವಾಗದ ದಿಕ್ಕಿನಲ್ಲಿ ಜಯರಾಮನ ಕತೆ ಬೆಳದಿತ್ತು. ಕೆಸರೂರಿನ ಜನ ಊಹಿಸಲಸಾಧ್ಯವಾದ ಕಾರಣಗಳಿಂದ ಜೋಗಿಹಾಳರ ಕೊಲೆ ಸಂಭವಿಸಿತ್ತು.

"ಅದು ಹ್ಯಾಗೆ ಕೊಲೆ ಅಂತೀರಿ ಅಷ್ಟೊಂದೆಲ್ಲಾ ಪೋಲೀಸ್ ತನಿಖೆ ನಡೆದಿದೆ. ಖೂನಿ ಅಂತ ಒಂದೇ ಒಂದು ಸರಿಯಾದ ಸಾಕ್ಷ್ಯ ಇಲ್ಲ. ಅಂತಾದರಲ್ಲಿ ನೀನು ಒಳ್ಳೆ ಆರಂಭ ಅಂತ ಏಕದಂ ಖೂನಿ ಅಂದುಬಿಟ್ಟರೆ ಹ್ಯಾಗಯ್ಯಾ" ಎಂದು ಮೊದಲಿನಲ್ಲೇ ಹೆಗ್ಡೆ ತಕ್ರಾರು ತೆಗೆದ.

ಅಂಗಾಡಿ ಅದಕ್ಕೆ "ಮಿಸ್ಟರ್ ಹೆಗ್ಡೆ, ಪೋಲೀಸ್ ತನಿಖೇನ ನಾನು ಆಮೂಲಾಗ್ರ ನೋಡಿದೀನಿ. ಪ್ರತಿಯೊಬ್ಬರೂ ಅದನ್ನ ಕೂನಿ ಅಂತಾನೆ ಹೇಳಿ ಬೇರೆಯವರ ಮೇಲೆ ತಳ್ಳೋದಕ್ಕೆ ಪ್ರಯತ್ನ ಮಾಡಿದಾರೆ. ಈತರ ಕೆಸರೂರಿನ ಜನರ ತರಲೆ ಬುದ್ಧಿ ದೆಸೆಯಿಂದಾನೆ ಒಂದೇ ಒಂದು ಸರಿಯಾದ ಸಾಕ್ಷ್ಯಾಧಾರ ಇಲ್ಲ. ಅನಂತರ ಯಾವುದೋ ಹಂತದಲ್ಲಿ ಆ ತನಿಖೆ ಕೈ ಬಿಡಲಾಗಿದೆ. ಬಹುಶಃ ಒಬ್ಬರ ಮೇಲೊಬ್ಬರು ಫೀರ್ಯಾದು ಮಾಡೊ ಪ್ರಯತ್ನದಲ್ಲಿ ಊರಿಗೆ ಊರೇ



ಪ್ರಕ್ಷುಬ್ಧವಾಗತೊಡಗಿತ್ತು ಅಂತ ಕಾಣುತ್ತೆ" ಎಂದ.

ಅಷ್ಟರೊಳಗೆ ಜಯರಾಮ ಅವರ ವಾಗ್ವಾದ ಅಷ್ಟಕ್ಕೇ ತಡೆದ. "ನೋಡಿ ಹೆಗ್ಡೆ, ಅಂಗಾಡಿ, ನಿಮಗೆ ಹೇಳ್ತೇನೆ ನಾನು, ಇಲ್ಲಿ ಕತೆಗಾರನ್ನ, ಅದನ್ನ ಯಾಕೆ ಹೀಗೆ ಹೇಳಿದ ಅಂತ ನೀವು ಕತೆ ಹೇಳುವಾಗ ಕೇಳಲೇ ಕೂಡದು. ಒಬ್ಬ ಪೋಲೀಸ್ ಪತ್ತೇದಾರ ನಡೆದುದನ್ನು ತನಿಖೆಯಿಂದ ನಿರ್ಮಾಣ ಮಾಡೋ ಕ್ರಮವೇ ಬೇರೆ. ಒಬ್ಬ ಕಲಾವಿದನ ಪ್ರತಿಭೆ ಕತೆ ನಿರ್ಮಿಸುವ ಕ್ರಮವೇ ಬೇರೆ, ನಾನು ಹೇಳಿದ್ದನ್ನ ಅನಂತರ ನೀವು ಸುಳ್ಳೋ ನಿಜವೋ ತನಿಖೆ ನಡೆಸಿ ತಿಳುಕೊಳ್ಳಬೇಕೆ ಹೊರತು ಇದನ್ನು ಹಾಗೆ ಕಲ್ಪಿಸಿದರೆ ಸರಿಯಲ್ಲ. ಹೀಗೆ ಕಲ್ಪಿಸಿದರೆ ಸರಿ ಅಂತ ಟೀಕಿಸೋದಕ್ಕೆ ಶುರು ಮಾಡಿದರೆ ಅಲ್ಲಿಗೆ ನನ್ನ ಸೃಷ್ಟಿಕ್ರಿಯೆ ನಿಂತೇ ಹೋಗುತ್ತೆ" ಎಂದು ಹೇಳಿದ.

ಇಡೀ ಕೆಸರೂರಿನ ಜನ, ರಸ್ತೆಗಳು ಎಲ್ಲ ಸ್ತಬ್ಧವಾಗಿ ದೀಪಗಳು ಒಂದೊಂದಾಗಿ ಆರುತಿದ್ದುವು. ಜಯರಾಂ ಕತೆ ಹೇಳುವ ಮೊದಲೇ "ಈ ನನ್ನ ಕತೆಗೆ ಯಾವ ತನಿಖೆಗಾಗಲೀ ಪತ್ತೆದಾರನಿಗಾಗಲೇ ಸಹಾಯ ಮಾಡುವ ಉದ್ದೇಶ ಇಲ್ಲ. ಇದೊಂದು ಸಾಹಿತ್ಯ ಸೃಷ್ಟಿ. ನಿಮ್ಮೆಲ್ಲರ ಉದ್ದೇಶಗಳನ್ನೂ ಅಲಕ್ಷಿಸುತ್ತಿದ್ದೇನೆಂದು ತಪ್ಪು ತಿಳಿಯಬೇಡಿ" ಎಂದು ಹೇಳಿ ಕತೆ ಆರಂಭಿಸಿದ.

ಜಯರಾಂ ಹೇಳಿದ ಕತೆ ಸಂಕ್ಷಿಪ್ತವಾಗಿ ಹೀಗಿತ್ತು. ಜೋಗಿಹಾಳ್ ಅಂತರರಾಷ್ಟ್ರೀಯ ಖ್ಯಾತಿಯ ವಿಜ್ಞಾನಿಯಾಗಿ ಮಾಗ್‌ಸೇಸೆ ಬಹುಮಾನಕ್ಕೆ ಆಯ್ಕೆಯಾಗುವ ಹಂತ ಬಂದಕೂಡಲೆ ಇತರ ರಾಷ್ಟ್ರಗಳ ದೃಷ್ಟಿ ಇವರ ಮೇಲೆ ಬಿತ್ತು. ಏಲಕ್ಕಿ ರಫ್ತು ವ್ಯಾಪಾರದಲ್ಲಿ ನೂರಕ್ಕೆ ನೂರರಷ್ಟು ಏಕಸ್ವಾಮ್ಯ ಉಳಿಸಿಕೊಂಡಿದ್ದ ಭಾರತದ ಮೇಲೆ ಇನ್ನೂ ಹಲವಾರು ರಾಷ್ಟ್ರಗಳು ಕಣ್ಣಿಟ್ಟಿದ್ದವು. ಹಿಂದುಳಿದ ರಾಷ್ಟ್ರಗಳ ಏಳಿಗೆಗಾಗಿ ಶ್ರಮಿಸುತ್ತಿರುವ ಆಯಾ ರಾಷ್ಟ್ರಗಳ ಶ್ರೇಷ್ಠ ವಿಜ್ಞಾನಿಗಳನ್ನೆಲ್ಲ ತೀರಿಸಬೇಕೆಂಬ ಅಂತರರಾಷ್ಟ್ರೀಯ ಒಳಸಂಚು ಕೂಟವೊಂದು ನಿರ್ಮಾಣವಾಯ್ತು. ಭಾರತದ ಕೆಲವು ಅಣು ವಿಜ್ಞಾನಿಗಳು, ಇಂಧನ ಸಂಶೋಧನೆಯ ತಜ್ಞರು, ಸಸ್ಯ ತಳಿಶಾಸ್ತ್ರಜ್ಞರು ಮುಂತಾದವರೆಲ್ಲ ಇದರ ಗುರಿಯಾಗಿದ್ದರು. ಅದರಲ್ಲಿ ಕೃಷಿಶಾಸ್ತ್ರಜ್ಞ ಜೋಗಿಹಾಳ್ ಒಬ್ಬರು. ಅರಬ್ ರಾಷ್ಟ್ರಗಳಿಗೆ ಏಲಕ್ಕಿ ರಫ್ತಿನಲ್ಲಿ ಭಾರತಕ್ಕೆ ಪ್ರಮುಖ ಪ್ರತಿಸ್ಪರ್ಧಿಯಾಗಿದ್ದ ಗ್ವಾಟೆಮಾಲಾ ವಾಣಿಜ್ಯಕೂಟ ಈ ಒಳಸಂಚಿನಲ್ಲಿ ಸೇರಿಕೊಂಡು ಜೋಗಿಹಾಳರ ಕೊಲೆಗೆ ಕಾರಣವಾಯ್ತು. ಗ್ವಾಟೆಮಾಲಾದಿಂದ ಹಲ;ವು ಸ್ಲೈಡ್‌ಗಳನ್ನು ಜೋಗಿಹಾಳರ ಕೊಲೆಗೆ ಕಾರಣವಾಯ್ತು. ಗ್ವಾಟೆಮಾಲಾದಿಂದ ಹಲವು ಸ್ಲೈಡ್‌ಗಳನ್ನು

ಜೋಗಿಹಾಳರಿಗೆ ಅಭಿಪ್ರಾಯಕ್ಕಾಗಿ ಕಳಿಸಿಕೊಡಲಾಯ್ತು.

ಅದರಲ್ಲಿ ಕೆಸರೂರು ಖಾಯಿಲೆಯ ಜೀವಂತ ವೈರಸ್‌ಗಳಿದ್ದವು. ಅವನ್ನು ಫ್ಯೂಜೆಕ್ಟರಿಗೆ ಹಾಕುತ್ತಿದ್ದಂತೆಯೇ ಅವು ಸಿಡಿಯುವ ವ್ಯವಸ್ಥೆ ಮಾಡಲಾಗಿತ್ತು. ಅದರಿಂದ ಜೋಗಿಹಾಳರು ನಿಧನರಾದರು. ವೈರಸ್‌ಗಳು ಸ್ಫೋಟದಲ್ಲಿ ಪ್ರಸಾರವಾಗಿ. ಭಾರತದ ಏಲಕ್ಕಿಗೆ ರೋಗ ತಗುಲಿಕೊಂಡು ಭಾರತದ ರಫ್ತು ವ್ಯಾಪಾರ ದಿನದಿಂದ ದಿನಕ್ಕೆ ಕುಸಿಯಿತು. ಅರಬರ ಎಣ್ಣೆ ಇತರ ರಾಷ್ಟ್ರಗಳ ದಿಕ್ಕಿನಲ್ಲಿ ಹರಿಯಿತು. ಈ ಕೊಲೆಗಡುಕರ ಒಳಸಂಚು ಅನೇಕ ವಿಜ್ಞಾನಿಗಳ ಸಾವಿಗೆ ಕಾರಣವಾಯ್ತು. ಎಲ್ಲ ಹಿಂದುಳಿದ ರಾಷ್ಟ್ರಗಳನ್ನು ಈ ಒಳಸಂಚಿನ ಕೂಟ ಕೊನೆಯಪಕ್ಷ ಅಭಿವೃದ್ಧಿ ಪಥದಲ್ಲಿ ಇಪ್ಪತ್ತು ವರ್ಷ ಹಿಂದಕ್ಕೆ ಹಾಕಿತು.

ಇಷ್ಟು ಕತೆಯನ್ನು ಜಯರಾಂ ದಟ್ಟ ವಿವರಗಳೊಂದಿಗೆ ನಾಟಕೀಯವಾಗಿ ಅವರೆದುರು ಮಂಡಿಸಿದ್ದ. ಹೆಗ್ಡೆ ಸಿದ್ದಪ್ಪ ಕತೆ ಕೇಳುತ್ತಾ ಕೇಳುತ್ತಾ ಬಿಳಿಚಿಕೊಂಡಿದ್ದರು. ಜಯರಾಂ ವೈರಸ್ ರೋಗಗಳ ಬಗ್ಗೆ ಅವುಗಳು ಪ್ರಸಾರ ವಿಧಾನಗಳ ಬಗ್ಗೆ ಕತೆಯೊಳಗೆ ಹೇಳಿದ್ದರಲ್ಲಿ ಬಹುಪಾಲು ವಿವರಗಳು ಸಿದ್ದಪ್ಪ, ಹೆಗ್ಡೆ ಅವರೊಂದಿಗಿನ ಸಂಭಾಷಣೆಯಿಂದಲೇ ಜಯರಾಂ ಸಂಗ್ರಹಿಸಿದ್ದಾಗಿತ್ತು. ಒಬ್ಬ ಕತೆಗಾರನ ಕೈಯಲ್ಲಿ ಹೇಗೆ ಯಾವು ಯಾವುವೋ ಸಂಗತಿಗಳು ಬಂದು ಅರ್ಥಬದ್ಧವಾಗಿ ಒಂದಕ್ಕೊಂದು ಸೇರಿಕೊಳ್ಳುತ್ತಾ ಹೋಗುತ್ತದೆ ಎನ್ನುವುದು ಅವರಿಗೆ ಬಿಳಚಿಕೊಳ್ಳುವಷ್ಟು ಗಾಬರಿ ತಂದಿತ್ತು.

ಕತೆ ಕೇಳುತ್ತಾ ಕೇಳುತ್ತಾ ಅವರೆಲ್ಲ ಯಾವ ರೀತಿ ತಲ್ಲೀನರಾಗಿದ್ದರೆಂದರೆ ಈಗ ಜೋಗಿಹಾಳರ ಸಾವಿನ ಬಗ್ಗೆ ಜಯರಾಂ ವ್ಯಾಖ್ಯಾನ ಬಿಟ್ಟು ಬೇರೊಂದು ಅವರಿಗೆ ಹೊಳೆಯುವುದು ಅಸಾಧ್ಯವಾಗಿತ್ತು.

ಜಯರಾಂ ಕತೆ ಹೇಳಿ ನಾಲ್ವರು ಪ್ರೇಕ್ಷಕರ ಮುಖ ನೋಡಿದ. ತನ್ನ ಕಲೆಗಾರಿಕೆಯ ಬಗ್ಗೆ ಅವನಿಗೆ ಸಂಪೂರ್ಣ ನಂಬಿಕೆ ಇತ್ತು. ಅದು ಸುಳ್ಳಿರಲಿ ನಿಜವಿರಲಿ ಅದನ್ನು ಕೇಳಿದಷ್ಟು ಕಾಲ ಅವರಿಗೆ ನಿಜ ಅನ್ನಿಸುವಂತೆ ಮಾಡುತ್ತೇನೆಂದುಕೊಂಡೇ ಕತೆ ಆರಂಭಿಸಿದ್ದ. ಅವರು ನಾಲ್ವರೂ ತನ್ನ ಕತೆಯ ವಾತಾವರಣದಲ್ಲೇ ಇರುವುದರಿಂದ ಕೂಡಲೇ ವಿಮರ್ಶಿಸುವುದು ಅಸಾಧ್ಯ ಎಂದೆನ್ನಿಸಿತು. ತಾನು ನಡೆದುದನ್ನು ಕರಾರುವಾಕ್ಕಾಗಿ ಕಲ್ಪಿಸುತ್ತೇನೆಂಬುದರ ಬಗ್ಗೆ ಜಯರಾಂಗೆ ಚೂರೂ ನಂಬಿಕೆ ಇರಲಿಲ್ಲ. ಕೇವಲ ಸಾಹಿತ್ಯ ದೃಷ್ಟಿಯಿಂದ ಉತ್ತಮವೆನ್ನಬಹುದಾದ ಕತೆ ಹೇಳಿದ್ದ. ಆದರೆ ಮುಂದೆ ಆತನ ಕತೆ ತೀರ ವಿಚಿತ್ರವಾದ ವಿಮರ್ಶೆಗೆ ಗುರಿಯಾಗುವುದಿತ್ತು. ನಿಜಜೀವನದಲ್ಲಿ ಇದು ನಡೆಯಿತೆ ಇಲ್ಲವೆ ಎನ್ನುವ ಕತೆಯ ಯಥಾವತ್ ಸ್ವರೂಪವನ್ನು ಅಂಗಾಡಿ ಪತ್ತೆಮಾಡ ಹೊರಟಿದ್ದ. ಸಿದ್ದಪ್ಪ ಹೆಗ್ಡೆ ಇಬ್ಬರೂ ಅದಕ್ಕೆ ತಕ್ಕ ಪರಿಕರಗಳನ್ನು ಅಂಗಾಡಿಗೆ ಒದಗಿಸಲು ಸಿಕ್ಕಿದ್ದರು.



ಎಲ್ಲರೂ ಅಂಗಾಡಿ ಕಡೆ ಅಭಿಪ್ರಾಯಕ್ಕಾಗಿ ತಿರುಗಿದರು. ಅಂಗಾಡಿ "ಜಯರಾಂ ನಿಮ್ಮ ಕತೆ ಒಂದು ರೋಮಾಂಚಕ ಅನುಭವ. ಆದರೆ ಇದನ್ನು ನಾನು ಕೇವಲ ಒಬ್ಬ ವಾಚಕನಂತೆ ನೋಡುವಂತಿಲ್ಲ. ನಾನು ಮಾಡುವ ಕೆಲಸ ಎಂದರೆ ಈ ಕತೆಯ ಮುಖ್ಯಾಂಶಗಳನ್ನೆಲ್ಲಾ ನೋಟ್ ಮಾಡಿಕೊಂಡು ಒರೆ ಹಚ್ಚುತ್ತಾ ಹೋಗುವುದು. ಅಲ್ಲಿಯವರೆಗೆ ಈ ಕತೆ ಬಗ್ಗೆ ನನ್ನ ವೈಯಕ್ತಿಕ ಅಭಿಪ್ರಾಯ ಇಲ್ಲ" ಎಂದ.

# ಅಧ್ಯಾಯ ೨೩



ಬೆಳಿಗ್ಗೆ ಕೃಷ್ಣೇಗೌಡ ಏಲಕ್ಕಿ ಮಂಡಿ ಬಾಗಿಲು ತೆಗೆಯುತ್ತಿದ್ದಂತೆಯೇ ಕೆಸರೂರಿನ ರಿಟೈರ್ಡ್ ಸಬ್‌ರಿಜಿಸ್ಟ್ರಾರ್ ಆಚಾರಿ, ಕಾಲೇಜು ಪ್ರಿನ್ಸಿಪಾಲ್ ವೆಂಕಟರಾಯ ಮತ್ತು ಸುಬ್ಬೇಗೌಡ ಇತ್ಯಾದಿಗಳ ಜೊತೆ ಹಾಜರಾದ. ಕೃಷ್ಣೇಗೌಡನ ತಲೆಯೊಳಗೆ ಇನ್ನೂ ಸುಲೇಮಾನ್ ಬೇರಿಯ ಮಲಬಾರ್ ಏಲಕ್ಕಿ ಮಂಡಿ ವಿಷಯವೇ



ಕೊರೆಯುತ್ತಿತ್ತು. ಮೂವರ ಹಿಂದೆ ಇನ್ನೊಬ್ಬ ಕೆಂಚು ಮೀಸೆಯ ವಿಚಿತ್ರ ವೇಷದ ಆಗಂತುಕನೂ, ಅಷ್ಟೇ ವಿಚಿತ್ರ ಚರ್ಯೆಯ ಹೆಂಗಸೂ ಇರುವುದನ್ನು ಅವನು ಗಮನಿಸಲಿಲ್ಲ. ಅವರು ಆಗಿಂದಾಗ್ಗೆ ಕೆಸರೂರಿಗೆ ಭೇಟಿ ಕೊಡುತ್ತಿದ್ದವರಾದರೂ ಕೃಷ್ಣೇಗೌಡನಿಗೆ ಪರಿಚಯ ಹತ್ತದುದರಿಂದ ಆಚಾರಿಯೇ ಅವರಿಬ್ಬರನ್ನೂ ಪರಿಚಯಿಸಿದ. ಅವನ ಹೆಸರು ಮೆಜಿಶಿಯನ್ ಮುತ್ತು ಎಂದು. ಕೃಷ್ಣೇಗೌಡನ ಮನೆ ಹಿಂದಿನ ಬಯಲಿನಲ್ಲಿ ಬಂದು ಬೀಡು ಬಿಟ್ಟಿದ್ದ ಗೋಸಾಯಿಗಳಲ್ಲಿ ಇವನೂ ಒಬ್ಬ. ಅವನ ಕೆಲಸ ಬಹುವಾಗಿ ಬಸ್ ಸ್ಟಾಂಡಿನಲ್ಲಿ ಸಂತೆಮಾಳದಲ್ಲಿ ಜನ ಸೇರುವಂಥ ಕಡೆಗಳಲ್ಲಿ ಮ್ಯಾಜಿಕ್ ಮಾಡುವುದು. ಎಲ್ಲಿ ಜನ ಸೇರಿದರೂ ತನ್ನ ಮ್ಯಾಜಿಕ್ ಪರಿಕರಗಳನ್ನು ಬಿಚ್ಚಿಕೊಂಡು "ಒನ್ ಟೂ ತ್ರೀ ಫೋರ್" ಎಂದು ಮ್ಯಾಜಿಕ್ ಆರಂಭಿಸುತ್ತಿದ್ದ. ಪ್ರೇಕ್ಷಕರಿಂದ ಗಿಟ್ಟಿಸಿದ ಮೂರು ಕಾಸು ಆರು ಕಾಸುಗಳನ್ನು ಒಟ್ಟು ಮಾಡಿ ಸಾಯಂಕಾಲ ಒಂದು ಬಾಟ್ಲಿ ಷರಾಬಿಗೆ ಏರ್ಪಾಡು ಮಾಡಿಕೊಳ್ಳುತ್ತಿದ್ದ. ರಾತ್ರಿ ಎಲ್ಲಾ ತನ್ನ ಗುಂಪಿನವರೊಡನೆ ಮೊಲ ನರಿ ಮುಂತಾದುವನ್ನು ಶಿಕಾರಿ ಮಾಡಿ ಬೆಳಿಗ್ಗೆ ಊಟಕ್ಕೆ ತಯಾರಿ ಮಾಡುತ್ತಿದ್ದ. ಅವನಿಗೆ ಹಿಂದಿ ಇಂಗ್ಲಿಷ್ ಉರ್ದು ತೆಲುಗು ತಮಿಳು ಬಂಗಾಳಿ ಎಲ್ಲ ಭಾಷೆಗಳನ್ನೂ ಕೊಂಚ ಕೊಂಚ ಅಧ್ವಾನವಾಗಿ ಮಾತಾಡಲು ಬರುತ್ತಿತ್ತು.

ಈ ಗೋಸಾಯಿಗಳ ಹೆಂಗಸರಷ್ಟೂ ಜನ ಸಾಂಗೋಪಾಂಗವಾಗಿ ಸೂಳೆಗಾರಿಕೆ ನಡೆಸುತ್ತಿದ್ದರು. ಕೆಂಪಕೆಂಪಗಿರುವ ತೆಳ್ಳನೆಯ ನಡುವಿನ ಈ ಹೆಂಗಸರ ರುಚಿ ನೋಡಲು ಕೆಸರೂರಿನ ಗೌಡರಿಗೆ ಒಂದು ವಿಚಿತ್ರವಾದ ತೆವಲು. ಹಾಗಾಗೇ ಈ ಮೆಜಿಶಿಯನ್ ಮುತ್ತು, ಆಚಾರಿಗೂ ಸುಬ್ಬೇಗೌಡನಿಗೂ ಅಷ್ಟೊಂದು ಆತ್ಮೀಯವಾಗಿ ಗೊತ್ತಾಗಿದ್ದು. ಈ ಸಾರಿ ಅವರನ್ನು ಊರಿಂದ ಮುಂದಕ್ಕೆ ಹೋಗಲು ಬಿಡದೆ ಶಾಶ್ವತವಾಗೇ ಊರಲ್ಲಿ ಉಳಿಸಿಕೊಂಡು ಅಷ್ಟೂ ಹೆಂಗಸರ ರುಚಿ ನೋಡಬೇಕೆಂಬುದೇ ಆಚಾರಿಯ ಉದ್ದೇಶವಾಗಿತ್ತು.

ಕೃಷ್ಣೇಗೌಡ ಕೆಸರೂರು ಪಂಚಾಯ್ತಿ ಅಧ್ಯಕ್ಷನಾದ್ದರಿಂದ ಕೃಷ್ಣೇಗೌಡನ ತೆವಲು ತಿಳಿದ ಆಚಾರಿಯೇ ಮುತ್ತುಗೆ ಹೇಳಿ ಅವರ ಟೆಂಟಿನಿಂದ ಒಂದು ಕನ್ಯಾರತ್ನವನ್ನೂ ತಮ್ಮೊಟ್ಟಿಗೆ ಕರೆತಂದಿದ್ದ. ಹಿಂದುಮುಂದು ನೋಡದೆ ಅವಳನ್ನು ಮುತ್ತುವಿನ ಮಗಳೆಂದು ಕೃಷ್ಣೇಗೌಡನಿಗೆ ಪರಿಚಯಿಸಿದ.

ಇದೆಲ್ಲಾ ಪರಿಚಯ ಇತ್ಯಾದಿಗಳು ಮುಗಿದ ಮೇಲೆ ಆಚಾರಿ ಹೇಳಿದ "ಇವರಿಗೆ ಗ್ರಾಮ ಪಂಚಾಯ್ತಿಯಿಂದ ಮನೆದಳಕ್ಕೆ ಜಾಗ ಮಂಜೂರು ಮಾಡಬೇಕು. ಅವರ ಕೈಲಿ ಅರ್ಜಿ ಕೊಡಿಸುತ್ತೇನೆ" ಎಂದು. ಕೃಷ್ಣೇಗೌಡ ಏನೇನೋ

ಯೋಚನೆಯಲ್ಲಿದ್ದವನು ಆಚಾರಿಯ ಯೋಜನೆಗೆ ಒಮ್ಮೆಲೆ ಅಸಮ್ಮತಿ ಸೂಚಿಸಿ ಆ ಜಾಗ ಗೋಮಾಳ ಎಂದೂ, ಅಲ್ಲಿ ಮನೆದಳಕ್ಕೆ ಕೊಡಲಾಗುವುದಿಲ್ಲೆಂದೂ ಹೇಳಿದ.

ಆಚಾರಿ ಹೇಳಿದ "ಗೌಡರೆ, ಇರಲಿ, ಹಾಗೆ ಏಕ್‌ದಂ ಇಲ್ಲಾಂತ ಹೇಳಬೇಡಿ. ಯೋಚನೆ ಮಾಡಿ ಸಾಯಂಕಾಲ ತಿಳಿಸಿ. ನಿಮಗೂ ಕೊಂಚ ವಿಷಯ ತಿಳಿಸೋದಿದೆ. ಆಮೇಲೂ ನಿಮಗೆ ಬೇಡಾಂತ ಅನ್ನಿಸಿದರೆ ನಿಮ್ಮಿಷ್ಟ" ಎಂದ ಅನಂತರ ಮುತ್ತುವನ್ನೂ ಅವನ ಜೊತೆಗಿದ್ದ ಕನ್ಯಾರತ್ನವನ್ನೂ "ಸಾಯಂಕಾಲ ಗೌಡರನ್ನೂ ನೋಡಿ, ಈಗ ಹೋಗಿ" ಎಂದು ಹೇಳಿ ಕಳಿಸಿದ.

ಆಚಾರಿಯದು ಮಹಾಪ್ರಳಯಾಂತಕ ತಲೆ. ಅವನನ್ನು ತಲೆಬಿಸಿ ಆಚಾರಿ ಎಂದೇ ಎಲ್ಲಾ ಕರೆಯುತ್ತಿದ್ದರು. ಆಚಾರಿಯ ಕುತಂತ್ರ ಬುದ್ಧಿಗಾಗಿ ಹೆದರಿಯೇ ಬಹುವಚನದಲ್ಲಿ ಅವನನ್ನು ಮಾತಾಡಿಸುತ್ತಿದ್ದರು. ಆಚಾರಿಗೆ ಕಚ್ಚೆ ಹರುಕು ಬುದ್ಧಿ ಇಲ್ಲದಿದ್ದರೆ ಅವನು ಈ ವೇಳೆಗಾಗಲೇ ಸುಲೇಮಾನ್ ಬೇರಿಯನ್ನು ಮೀರಿಸುವಂತ ಕುಳವಾಗಿರುತ್ತಿದ್ದ. ಆದರೆ ಅವನಿಗೆ ಪ್ರಪಂಚದಲ್ಲಿ ಹೆಂಗಸಿನ ಸೊಂಟ ಒಂದನ್ನು ಬಿಟ್ಟು ಇನ್ಯಾವುದಕ್ಕೂ ಆಸೆಯಾಗಲೀ ಬೆಲೆಯಾಗಲಿ ಇರಲಿಲ್ಲ. ಎಲ್ಲಾ ತೋಟ ಮನೆ ಕಾರು ಇತ್ಯಾದಿಗಳನ್ನು ಹೊಂದಲು ಪರಿತಪಿಸುತ್ತಾ ಇರಬೇಕಾದರೆ ಆಚಾರಿ ಅರವತ್ತರ ಮುದಿತನದಲ್ಲೂ ಅತ್ತ ಕಿಂಚಿತ್ ಲಕ್ಷ ಹರಿಸದೆ ಸಂತೆಯಿಂದ ಹಿಡಿದು ಜಾತ್ರೆಗಳವರೆಗೆ ಹೆಂಗಸರನ್ನು ಹುಡುಕಿಕೊಂಡು ಮೂಸುತ್ತ ತಿರುಗುತ್ತಿದ್ದ. ಅವನ ಕೂದಲು ಬೆಳ್ಳಗಾಗಿರುವುದೊಂದನ್ನು ಬಿಟ್ಟರೆ ಅವನ ಸಣಕಲು ದೇಹದ ಮೇಲೆ ಮತ್ಯಾವುದೇ ವೃದ್ಧಾಪ್ಯದ ಚಿನ್ಹೆಗಳಿರಲಿಲ್ಲ. ಅವನಿಗೆ ಒಂದೊಂದು ಹೆಂಗಸರ ಸಹವಾಸವೂ ಒಂದೊಂದು ಹೊಸ ಹೊಸ ಸಾಹಸಯಾನ. ಒಂದೊಂದು ಹೆಂಗಸೂ ಒಂದೊಂದು ಬಗೆಯ ವಿನೂತನ ಅನುಭವವನ್ನು ದಯಪಾಲಿಸುವ ಅಗಾಧ ಭೂಖಂಡವಿದ್ದಂತೆ. ಹೆಂಗಸಿನ ಪ್ರಶ್ನೆ ಬಂದಾಗಲೆಲ್ಲ ಅವನ ಬುದ್ಧಿ ಪ್ರಚಂಡವಾಗುತ್ತಿತ್ತು. ಹೇಗಾದರೂ ಮಾಡಿ ಈ ಬಾರಿ ಗೋಸಾಯಿಗಳನ್ನು ಸಾಕಷ್ಟು ಕಾಲ ಊರಲ್ಲೆ ಉಳಿಸಲು ಹವಣಿಕೆ ಹಾಕಿದ್ದ. ಅದಕ್ಕೇ ಗೋಸಾಯಿಗಳ ಮುಖಂಡರಾದ ಮುತ್ತೋಜಿ ತಾನಾಜಿ ಶಿವಾಜಿ ಮುಂತಾದವರನ್ನೆಲ್ಲಾ ಹಿಡಿದು ಇಲ್ಲಿ ಮನೆ ಕಟ್ಟಿಕೊಳ್ಳಲು ನಿವೇಶನಕ್ಕೆ ಅರ್ಜಿಹಾಕಿ ಎಂದು ಚಿತಾವಣೆ ಮಾಡಿದ. ಆ ಗೋಸಾಯಿಗಳಿಗಾದರೂ ಅಲ್ಲಿ ಮನೆಕಟ್ಟಿಕೊಳ್ಳಬೇಕೆಂಬ ಅಭಿಲಾಷೆ ಏನೂ ಇರಲಿಲ್ಲ. ಏಕೆಂದರೆ ಅವರು ಇಲ್ಲಿಯ ನರಿ, ಮೊಲ, ಗವುಜಲು ಹಕ್ಕಿ, ಕಾಡುಕೋಳಿ ಇತ್ಯಾದಿಗಳನ್ನೂ, ಹಳ್ಳ ಗುಂಡಿಗಳಲ್ಲಿರುವ ಮೀನುಗಳನ್ನೂ, ಊರವರ ಬೆಕ್ಕು ಕುರಿ ಕೋಳಿಗಳನ್ನೂ ಹಿಡಿದು ಮುಗಿಸಿ, ಕದಿಯಬಹುದಾದದ ಸಾಮಾನುಗಳನ್ನು ಕದ್ದು, ಕಚ್ಚೆ ಹರುಕರಿಗೆ ಹಿಡಿಸಬಹುದಾದದ ಖಾಯಿಲೆಗಳನ್ನೆಲ್ಲಾ ಹಿಡಿಸಿ, ಅನಂತರ ಬೇರೊಂದೆಡೆಗೆ ಕಾಲು ಕೀಳುವುದೇ ಅವರ ಜೀವನದ ಪರಿಯಾಗಿತ್ತು. ಆದರೆ ಅವರಿಗೆ ಆಚಾರಿ ಹೇಳಿದ್ದ, ಮನೆಗೂ ಸರ್ಕಾರವೇ ಹಣ, ಹೆಂಚು, ಮರ ಮುಟ್ಟು ಇತ್ಯಾದಿಗಳನ್ನು ಒದಗಿಸುತ್ತದೆ, ಜೊತೆಗೆ ನಿಮಗೆ ಇಲ್ಲಿ ಜಮೀನು ಕೊಟ್ಟ ಕೂಡಲೆ ಓಟಿನ ಹಕ್ಕು ಸಿಕ್ಕುತ್ತದೆ, ತಾಲ್ಲೂಕು ಬೋರ್ಡ್ ಚುನಾವಣೆ ಬಂತು. ಎರಡೂ ಪಾರ್ಟಿಯವರೂ ನಿಮ್ಮ ಓಟಿಗೆ ಬೇಕಾದಹಾಗೆ ಹಣ ಚೆಲ್ಲುತ್ತಾರೆ, ಇತ್ಯಾದಿ ಮಾತಿನ ಮಾಯಾಜಾಲವನ್ನೆ ಅವರೆದುರು ಬೀಸಿದ. ಅವರಿಗೂ ಇವರ ಮಾತು ಸರಿ ಎನ್ನಿಸಿತು.



ಮೆಜಿಶಿಯನ್ ಮುತ್ತು ಅತ್ತ ಹೋಗುತ್ತಿದ್ದಂತೆಯೇ ಕೃಷ್ಣೇಗೌಡ ಇದೆಲ್ಲ ಏನು? ಎನ್ನುವಂತೆ ಆಚಾರಿ ಕಡೆ ನೋಡಿದ. ಆಚಾರಿ ತನ್ನ ಮಾತಿಗೆ ಒಂದು ಗುರುತ್ವ ಬರಲಿ ಎಂದೇ ಕಾಲೇಜು ಪ್ರಿನ್ಸಿಪಾಲರನ್ನು ತನ್ನೊಡನೆ ನಿಷ್ಕಾರಣವಾಗಿ ಎಳೆದುತಂದಿದ್ದು. ಬೆಳಿಗ್ಗೆ ಪ್ರಿನ್ಸಿಪಾಲರ ಮನೆಗೆ ಹೋಗಿ "ನಿನ್ನೆ ನಿಮ್ಮ ಕಾಲೇಜಿನಲ್ಲಿ ಗಲಾಟೆಯಾದುದೆಲ್ಲಾ ಈ ಸುಲೇಮಾನ್ ಬೇರಿ ಕಡೆಯೋರ ಕುತಂತ್ರದಿಂದಲೇ. ಈಗಲೇ ಅವರಿಗೆ ಸರಿಯಾದ ತಿರುಮಂತ್ರ ಹಾಕದಿದ್ದರೆ ನಿಮ್ಮ ಕಾಲೇಜಿನಲ್ಲಿ ಇನ್ನು ಮುಂದೆ ಅತ್ಯಾಚಾರ ಅನಾಚಾರಗಳು ಆರಂಭವಾಗುತ್ತವೆ. ನಾನು ಇದಕ್ಕೆಲ್ಲಾ ಸರಿಯಾದ ಯೋಚನೆ ಮಾಡಿದ್ದೇನೆ. ನೀವು ನನ್ನೊಡನೆ ಬನ್ನಿ" ಎಂದು ಆ ಬಡಪಾಯಿ ಮೂರ್ಖಶಿಖಾಮಣಿಯನ್ನು ತನ್ನ ಬೆನ್ನಿಗೆ ಹಾಕಿಕೊಂಡು ತಿರುಗುತ್ತಿದ್ದ. ಆತನೂ ತನಗೇನೋ ಈ ಊರಿನ ಆಗುಹೋಗುಗಳಲ್ಲಿ ಪ್ರಮುಖ ಪಾತ್ರ ದೊರೆತಿದೆ ಎಂದು ತಿಳಿದು ಕುರಿಯಂತೆ ತಲೆತಗ್ಗಿಸಿ ಆಚಾರಿಯ ಬೆನ್ನು ಹಿಡಿದಿದ್ದ.

ಕೃಷ್ಣೇಗೌಡ ಇವರತ್ತ ತಿರುಗಿದ ಕೂಡಲೇ ಆಚಾರಿ ಏಕಾಂತದಲ್ಲಿ ನಿಮ್ಮೊಡನೆ ಮಾತಾಡುವುದಿದೆ ಎಂದು ಹೇಳಿ ಪ್ರಿನ್ಸಿಪಾಲರನ್ನೂ ಸುಬ್ಬೇಗೌಡನನ್ನೂ ಅಲ್ಲೇ ಕೂರಿಸಿ ಕೃಷ್ಣೇಗೌಡನನ್ನು ಕರೆದುಕೊಂಡು ಒಳಕೋಣೆಗೆ ನಡೆದ. ಏಕಾಂತದಲ್ಲಿ ಕೃಷ್ಣೇಗೌಡನದೂ ಆಚಾರಿಯದೂ ಏಕವಚನದ ಸಂಭಾಷಣೆ ಆರಂಭವಾಯ್ತು. ಹೆಂಗಸರ ಮರ್ಮಸ್ಥಳಗಳ ಬಗ್ಗೆ ಎಲ್ಲಾ ಮಾತಾಡುವಷ್ಟು ಇಬ್ಬರೂ ಆತ್ಮೀಯರಾಗಿರುವಾಗ ಬಹುವಚನದ ಗೋಡೆ ಇರುತ್ತದೆಯೇ!

"ಅಲ್ಲೋ ಆಚಾರಿ, ನಿಂದೇನಯ್ಯಾ ಸಮಾಚಾರ? ನಿನಗೆ ತೆವಲಿದ್ದರೆ ಅವರು ನಾಲ್ಕು ಜನ ಹೆಂಗಸರಿಗೆ ಮಜಾ ಉಡಾಯಿಸಿ ಕೈತೊಳಕೋ. ಅದು

ಬಿಟ್ಟು ಅವರನ್ನ ಊರೋಳಗೆ ಖಾಯಮ್ಮಾಗಿ ಇಟ್ಟುಕೊಂಡು ಯಾರ್ಮನೆ ಹಾಳ್ಮಾಡಬೇಕಂತ ಮಾಡಿದೀಯ. ನಮ್ಮ ತೋಟದ ಬೇಲಿ ಹಿಂದೇನೆ ಈ ಸೂಳೇಮಕ್ಕಳು ವಕ್ಕರಿಸಿದ್ದಾರೆ. ಅವರಿಗೆ ಅಲ್ಲಿ ಜಾಗ ಖಾಯಂ ಮಾಡಿದರೆ ನಮ್ಮ ಕೋಳಿ ಕುರಿ ಒಂದಾದ್ರೂ ಉಳಿತದೇನೋ?" ಎಂದು ಕೃಷ್ಣೇಗೌಡ ದಬಾಯಿಸಿದ.

"ಕೃಷ್ಣಪ್ಪ, ನೋಡು! ನಿಂದು ಇದೇ ತಪ್ಪು! ನಾನೇನು ಹೆಂಗಸರಿಗೆ ಬಾಯಿಬಿಟ್ಟುಕೊಂಡು ಕೂತಿದೀನಿ ಅಂತ ಮಾಡಿದ್ದೀಯಾ? ಇಂತಾವರು ಎಷ್ಟು ಜನ ಹೆಂಗಸರನ್ನು ನೋಡಿಲ್ಲ. ನಾನು ಯಾವ ದೂರದೃಷ್ಟಿಯಿಂದ ಈ ಮಾತನ್ನ ನಿನಗೆ ಹೇಳ್ತೀದೀನಿ ಅನ್ನೋದನ್ನು ಯೋಚಿಸು. ನೀನುಅವರಿಗೆ ಮನೆದಳಕ್ಕೆ ಜಮೀನು ಕೊಟ್ರೂ ಅವರೇನು ಅಲ್ಲೇ ಉಳೀತಾರೆ ಅಂತ ತಿಳಿದುಕೊಂಡಿದೀಯಾ? ಅಲೆಮಾರಿ ತಿರುಕರಲ್ಲೇನೋ ಅವು. ಈಗೊಂದಿಷ್ಟು ಮನೆದಳ ಅಳತೆಮಾಡಿಸಿಕೊಡು. ಅಲ್ಲಿಗೆ ಅವರಿಗೆ ಓಟು ಸಿಕ್ತವೆ. ಸುಲೇಮಾನ್ ಬೇರಿ ಕಡೆಯವರನ್ನು ಸುಲಭವಾಗಿ ಮಟ್ಟ ಹಾಕಬಹುದು. ಇಲ್ಲಾ ಎಲ್ಲಾದರೂ ಅಪ್ಪೀತಪ್ಪಿ ಈ ಹರಿಜನರು ಸಾಬರಿಗೆ ಓಟು ಕೊಟ್ರೂ ಅನ್ನು! ಈ ಸಾರಿ ವಿಪಿ ಚೇರ್ಮನ್‌ಗಿರಿ ತಾಲ್ಲೂಕು ಬೋರ್ಡ್ ಅಧ್ಯಕ್ಷತೆ, ಎಲ್ಲಾ ಸುಲೇಮಾನ್ ಬೇರಿ ಕಡೆಯವರಿಗೇ ಹೋಗ್ತದೆ. ನಿನಗೆ ಒಂದುದಿನ ಮನೆಗೇ ಬಂದು ಅವರ ಕಡೆಯೋರೆಷ್ಟಿದಾರೆ ನಮ್ಮ ಕಡೆಯೋರೆಷ್ಟಿದಾರೆ ಲೆಕ್ಕಾ ಹಾಕಿ ತೋರಿಸಿಕೊಡ್ತೀನಿ. ಈಗ ಸುಮ್ಮನೆ ನಾನು ಹೇಳಿದ್ದಕ್ಕೆ ಆಯ್ತು ಅನ್ನು. ಸಾಯಂಕಾಲ ಮುತ್ತು ಅವನ ಮಗಳ ಜೊತೆ ಬಂದು ನೋಡ್ತಾನೆ. ಪಾಪ ಹೆಣ್ಮಗಳು. ಏನೋ ಒಂದು ಆಸೆ ಇಟ್ಗೊಂಡಿರುತ್ತೆ. ಬ್ಯಾಡ ಅನ್ನಬೇಡ." ಆಚಾರಿ ಕೃಷ್ಣಪ್ಪನ ಎಲ್ಲ ಇಂದ್ರಿಯಗಳ ಮೇಲು ಸಮ್ಮೋಹನ ಬೀರುವಂತೆ ಮಾತಾಡಿದ.

ಸುಲೇಮಾನ್ ಬೇರಿ! ಕೃಷ್ಣಪ್ಪನಿಗೆ ಮತ್ತೆ ಮರೆತಿದ್ದ ಚಿಂತೆ ಮರುಕಳಿಸಿತು. ಗೋಸಾಯಿಗಳು ಬೀಡು ಬಿಟ್ಟಿದ್ದ ಜಾಗಕ್ಕೇ ಹಿಂದೊಮ್ಮೆ ಸುಲೇಮಾನ್ ಬೇರಿಯೇ ಸಾಮಿಲ್ಲಿಗಾಗಿ ಅರ್ಜಿ ಹಾಕಿದ್ದ. ಅದನ್ನು ಹೇಗೆ ಹೇಗೋ ನೂರೆಂಟು ತಕರಾರು ತೆಗೆದು ಒಕ್ಕಲಿಗರೂ ಲಿಂಗಾಯ್ತರೂ ಅವನಿಗೆ ದಕ್ಕದಂತೆ ಮಾಡಿದ್ದರು. ಕೃಷ್ಣಪ್ಪನಿಗೆ ಆಚಾರಿಯ ಮಾತುಗಳಲ್ಲಿಯೂ ಸತ್ಯಾಂಶ ಇದೆ ಎನ್ನಿಸಿತು. ಆದರೂ ಆಚಾರಿಯ ಚಟುವಟಿಕೆಗಳಿಗೆ ಮೂಲಸ್ಫೂರ್ತಿ ಆ ಗೋಸಾಯಿ ಹೆಂಗಸುಗಳೆ ಎಂದು ಅವನಿಗೆ ಗುಮಾನಿ ಮಾತ್ರ ಇದ್ದೇ ಇತ್ತು.

"ಅಲ್ಲೋ ಆಚಾರಿ ನೀನು ಈ ಹೆಂಗಸರ ಹಿಂದೆ ಬಿದ್ದು ನಿನ್ನ ಜಾಗ, ಭೂಮಿ ಎಲ್ಲವನ್ನೂ ಕಳಕೊಂಡಿದ್ದಲ್ಲದೆ ಈಗ ಲೋಕಾನೆಲ್ಲಾ ಹಂಚೋದಕ್ಕೆ ಹೊರಟಿದ್ದೀಯಾ. ಸದ್ಯಕ್ಕೆ ಹೆಣ್ತಿ ಒಬ್ಬಳು ಬೇಗ ಕಣ್ಮುಚ್ಚಿ ಬಚಾವಾದಳು. ಇಲ್ಲೀವರೆಗೆ ಸುಲೇಮಾನ್ ಬೇರಿ ವಿರುದ್ಧ ಚಕಾರ ಎತ್ತದಿದ್ದವನು ಈಗೇನಯ್ಯಾ ನಿನಗೆ ಅವನ ಮೇಲೆ?"

"ನಿನ್ನಗೇನಯ್ಯಾ ಗೊತ್ತಾಗ್ತದೆ ಹೆಣ್ತೀ ಕಳಕೊಂಡೋರ ತಾಪತ್ರಯ. ಅಂತಾ ಹಣ್ತೀ ಮನೇಲಿಟ್ಟುಕೊಂಡೇ ನಿನ್ನ ಪೊಗರು ತಡೆಯೋಕಾಗ್ತಿಲ್ಲ. ನಿನ್ನ ಪೀಳಿಗೆ ಬಸ್‌ಸ್ಟಾಂಡಲ್ಲೆಲ್ಲಾ ಓಡಾಡ್ತಿವೆ. ಅದಿರ್‍ಲಿ ಸುಲೇಮಾನೆ ಬೇರಿ ನಿನ್ನ ಮಂಡಿ ಎದುರೇ ಇನ್ನೊಂದು ಏಲಕ್ಕಿ ಮಂಡಿ ತೆರೀತಾನಂತೆ. ತಿಳುಕೋ! ನಾನು ಬಂದಿರೋದು ನನ್ನ ಹೆಂಗಸರ ತೆವಲಿಗಲ್ಲಾ ಕೃಷ್ಣಪ್ಪ. ನನ್ನ ಜೊತೆ ಪ್ರಿನ್ಸಿಪಾಲ್ ವೆಂಕಟರಾಯರೂ ಬಂದಿದ್ದಾರೆ. ಈಗ ಕಾಲೇಜಲ್ಲಿ ಯಕ್ಷಗಾನ ನಡೆಯೋದಕ್ಕೆ ಬಿಡದೆ ಕೊನೆಗೆ ಪೋಲೀಸ್ನೋರು ಬಂದು ದೊಂಬಿ ನಿಲ್ಲಿಸಿದರಂತೆ. ಎಲ್ಲಿಗೆ ಬಂತು ನಮ್ಮ ಹಣೆಬರ. ನೀನು ನಿನ್ನ ಗ್ರಾಮದಲ್ಲಿ ಅಂಗೈಯಗಲ ಜಾಗ ಕೊಡೋಕೆ ಅಳ್ತಿದೀಯ. ಅಲ್ಲಿ ಸುಲೇಮಾನ್ ಬೇರಿ ಊರಿಗೆ ಊರನ್ನೇ ನುಂಗಾಕ್ತಿದ್ದಾನೆ. ನೋಡಿಕೊಂಡು ಕೂತಿದ್ದೀರಿ."

ಕೃಷ್ಣೇಗೌಡನ ವರ್ಮಕ್ಕೆ ಆಚಾರಿಯ ಒಂದೊಂದು ಮಾತೂ ತಾಗತೊಡಗಿದವು. ಹೆಗಸರಿಗಾಗಿ ಆಚಾರಿ ತನ್ನೆಲ್ಲಾ ಬುದ್ಧಿಶಕ್ತ ವಾಕ್‌ಶಕ್ತಿಗಳನ್ನು ಕೃಷ್ಣೇಗೌಡನ ಮೇಲೆ ಪ್ರಯೋಗಿಸಿದ. ಈ ಬ್ರಾಹ್ಮಣನ ಪ್ರಚಂಡ ನಾಲಿಗೆ ಬಡಪಾಯಿ ಕೃಷ್ಣೇಗೌಡನ ಬುದ್ಧಿಶಕ್ತಿ ತತ್ತರಿಸತೊಡಗಿತು.

"ಸರಿ ಆಚಾರಿ, ನಾನು ಆಯ್ತಂದ್ರೂ ಇನ್ನೂ ಸುಮಾರು ಜನ ವಿಪಿ ಮೆಂಬರುಗಳೂ ತಾಶೀಲ್ದಾರರು ಎಲ್ಲಾ ಇದ್ದಾರಲ್ಲಯ್ಯ. ಅವರಿಗೆಲ್ಲಾ ಸಮಜಾಯಿಷಿ ಹೇಳೋದು ಹೇಗೆ? ಸುಲೇಮಾನ್ ಬೇರಿಗೆ ಮಾತ್ರ ಆ ಜಾಗ ಕೊಡಕೂಡದು ಅಂತ ತಕ್ರಾರು ಮಾಡಿ ಈಗ ಈ ಗೋಸಾಯಿಗಳಿಗೆ ಮಂಜೂರು ಮಾಡೋದಕ್ಕೆ ಹೋದರೆ ಏನಂತಾರೆ ಅವರೆಲ್ಲಾ" ಎಂದ ಕೃಷ್ಣೇಗೌಡ. ಅವನ ಮಾತಿನಲ್ಲಿ ಅವನದೇನೋ ಒಪ್ಪಿಗೆ ಇದ್ದಂತಿತ್ತು.

"ಅದಕೆಲ್ಲಾ ನಾನು ಮಾಡ್ತೀನಿ. ಅದಕ್ಕೇ ಸುಬ್ಬೇಗೌಡನನ್ನೂ ಪ್ರಿನ್ಸಿಪಾಲರನ್ನೂ ಕರಕೊಂಡು ಬಂದಿರೋದು. ಸರ್ಕಾರದೋರು ಬಡವರಿಗೆ ನಿವೇಶನ ಅಂತ ಒಂದು ಯೋಜನೆ ತಯ್ಯಾರು ಮಾಡಿದ್ದಾರೆ. ಅದನ್ನ ಹಿಡುಕೊಂಡು ತಾಶೀಲ್ದಾರನ್ನ ಬಗ್ಗಿಸಬಹುದು. ಮಿಕ್ಕೋರ ಹತ್ರ ಪ್ರಿನ್ಸಿಪಾಲರನ್ನ ಕಳಿಸ್ತೀನಿ" ಆಚಾರಿ ಸ್ಥಳದಲ್ಲೇ ಯೋಚನೆ ಮಾಡಿ ಮುಂದಿನ ಯೋಜನೆಯ ನೀಲ ನಕ್ಷೆಕೊಟ್ಟ. ಆಚಾರಿಯ

ಪ್ರಚಂಡ ಬುದ್ಧಿಯನ್ನು ಎಂದೋ ತಿಳಿದಿದ್ದ ಕೃಷ್ಣಪ್ಪ ಆಚಾರಿಯ ಯೋಜನೆಗೆ ಮೆಚ್ಚಿ ತಲೆಯಾಡಿಸಿದ.

ಕೋಣೆಯಿಂದ ಕೃಷ್ಣಪ್ಪಗೌಡನ ಜೊತೆಗೆ ಹೊರಬಂದ ಆಚಾರಿ ಪ್ರಿನ್ಸಿಪಾಲರಿಗೆ "ಎಲ್ಲಾ ಮಾತಾಡಿದ್ದೇನೆ. ಮುಂದಿನ ಕೆಲಸ ಏನಿದ್ರೂ ನೀವೇ ಮಾಡಬೇಕು. ವಿಷಯ ನಿಮಗೆ ತಿಳಿಸ್ತೀನಿ. ವೆಂಕಟೇಶ್ವರನ ಕೃಪೆ, ಏನಿದ್ದರೂ ಸರಿಹೋಗ್ತದೆ" ಎಂದ.

ಹಿಂದೂ ಗೊತ್ತಿಲ್ಲದ ಮುಂದೂ ಗೊತ್ತಿಲ್ಲದ ಪ್ರಾಚಾರ್ಯ ಮಹಾಶಯ ತನ್ನ ಹೆಡ್ಡತನ ಮುಚ್ಚಿಕೊಳ್ಳಲು ತಲೆಯಾಡಿಸಿ ಆಚಾರಿಯೊಂದಿಗೆ ಎದ್ದು ಹೊರಟ.





# ಅಧ್ಯಾಯ ೨೪

ಬ್ರೀಡರ್ ಮಹಮದ್ ನಿಜಕ್ಕೂ ಚಿಂತೆಗೊಳಗಾಗಿದ್ದ. ಜೋಗಿಹಾಳರ ನಿಧನಾನಂತರ ಆ ಕೇಸಿನಲ್ಲಿ ಅವನನ್ನು ಸಿಕ್ಕಿಹಾಕಿಸಲು ಅನೇಕರು ಪ್ರಯತ್ನ ಮಾಡಿದರು. ಅದು ಅವನ ಮನಸ್ಥೈರ್ಯವನ್ನು ತೀರಾ ಕಲಕಿತ್ತು. ಹೇಗಾದರು ಮಾಡಿ ಇಲ್ಲಿಂದ ವರ್ಗ ಮಾಡಿಸಿಕೊಳ್ಳಬೇಕೆಂದು ಅವನು ಪ್ರಯತ್ನಿಸಿದ್ದ. ಆದರೆ ಶಾಸಕರಿಂದ ಹಿಡಿದು ಎಲ್ಲಾ ಪ್ರಭಾವಿ ವ್ಯಕ್ತಿಗಳೂ ಆತನನ್ನು ಗುಮಾನಿಯಿಂದ ನೋಡುವವರೇ ಆಗಿದ್ದರು. ಹಾಗಾಗಿ ಅವನು ತನ್ನ ಜಾತಿ ಬಾಂಧವ್ಯವನ್ನು ಉಪಯೋಗಿಸಬೇಕಾಗಿ ಬಂದಿತ್ತು. ಸುಲೇಮಾನ್ ಬೇರಿ ಆತನಿಗೆ ಕತ್ತಾರಿನಲ್ಲಿ ಕೆಲಸ ಕೊಡಿಸುತ್ತೇನೆ. ಈ ದೇಶವನ್ನೇ ಬಿಟ್ಟು ಹೋಗು. ಅಲ್ಲಿ ಕೈತುಂಬ ಸಂಬಳ ದೊರೆಯುತ್ತದೆ ಎಂದು ಭರವಸೆ ಕೊಟಿದ್ದ. ಆದಕ್ಕಾಗಿ ಮಹಮದ್ದ ವೀಸಾ ಪಾಸ್‌ಪೋರ್ಟ್ ಇತ್ಯಾದಿಗಳನ್ನೆಲ್ಲಾ ಮಾಡಿಸಿದ್ದ. ಆದರೆ ಕತ್ತಾರಿನಲ್ಲಿ ಇನ್ನೂ ಕೆಲಸದ ಭರವಸೆ ದೊರೆಯದೆ ಆತ ಸದ್ಯಕ್ಕೆ ದೇಶ ಬಿಡುವ ಗಳಿಗೆ ಹತ್ತಿರಾಗಿರಲಿಲ್ಲ.

ಆದರೆ ಈ ನಡುವೆ ಕೆಸರೂರಿನ ಪರಿಸ್ಥಿತಿ ಹದಗೆಡುತ್ತಲೇ ಹೋಯ್ತು. ಮಸೀದಿಯವರಿಗೂ ವೆಂಕಟೇಶ್ವರ ಭಕ್ತರಿಗೂ ಮಸೆದಾಟ ಜೋರಾಗತೊಡಗಿತು. ಮಹಮದ್ ನಿರ್ಲಿಪ್ತನಾಗಿರಲು ತೀರಾ ಹೆಣಗಬೇಕಾಯ್ತು. ಕತ್ತಾರಿಗೆ ಹೇಗುವ ಯೋಜನೆಯ ದೆಸೆಯಿಂದಲೇ ಮಹಮದ್ ಮದುವೆಯನ್ನೂ ಕೂಡ ಆಗದೆ ಕುಳಿತಿದ್ದ. ಇಂಥ ಸನ್ನಿವೇಶದಲ್ಲಿ ಮಹಮದ್ ಹಠಾತ್ತಾಗಿ ಭಯ ಚಕಿತನಾಗುವಂಥ ಒಂದು ಸಂದರ್ಭ ಒದಗಿತು.

ಮಹಮದ್ ಸಂಜೆ ಇವನ್ನೇ ಚಿಂತಿಸುತ್ತಾ ಬರುತ್ತಿರಬೇಕಾದರೆ ಹಿಂದಿನಿಂದ ಏನೋ ನೆರಳು ಬಂದಂತಾಯ್ತು. ಯಾರೆಂದು ತಿರುಗಿ ನೋಡಬೇಕೆನ್ನುವಷ್ಟರಲ್ಲಿ ಹಿಂದಿನಿಂದ "ಹುಷಾರ್ ಕತ್ತು ತಿರುಗಿಸಿದರೆ ನಿನ್ನ ತಲೆ ಹಾರುತ್ತೆ" ಎಂದು ದನಿ ಎಚ್ಚರಿಸಿತು. ಬೆನ್ನಿನ ಬಳಿ ಚೂರಿಯ ಮೊನಚು ತಾಗಿದ್ದು ಮಹಮದ್‌ಗೆ ಚೆನ್ನಾಗಿ ಗೊತ್ತಾಯ್ತು. ಮಹಮದ್ ತನ್ನ ಕೊನೆಗಾಲ ಸನ್ನಿಹಿತವಾಯ್ತೆಂದೆನ್ನಿಸಿತು. ಅಲ್ಲಾಡದೆ ನಿಂತ.



ಬೆನ್ನ ಹಿಂದಿನ ದನಿ ಉರ್ದುವಿನಲ್ಲಿ "ಏನೋ ಮುಸಲ್ಮಾನ್ ಆಗಿ ಮುಸಲ್ಮಾನ್‌ಗೆ ದ್ರೋಹ ಬಗೀತೀಯಾ? ನಿನಗೆ ಕತ್ತಾರಲ್ಲಿ ಕೆಲಸ ಬೇಕು ಬೆಹರಿಂಗ್‌ನಲ್ಲಿ ಕೆಲಸ ಬೇಕು. ಇಲ್ಲಿ ಮಾತ್ರ ನಮಕ್ ಹರಾಮ್ ಕೆಲಸ ಮಾಡ್ತೀಂಯಾ?" ಎಂದಿತು. ಮಹಮದ್‌ಗೆ ಇವನ್ಯಾವನೋ ಸುಲೇಮಾನ್ ಬೇರಿ ಕಡೆಯವನೇ ಇರಬೇಕೆಂದು ಅನುಮಾನ ಬಂತು. "ನಾವ್ಯಾಕೆ ಮುಸಲ್ಮಾನ್‌ಗೆ ದ್ರೋಹ ಬಗೆಯಲಿ. ನಾನು ಯಾರಿಗೂ ದ್ರೋಹ ಬಗೆದಿಲ್ಲ. ಯಾರ ತಂಟೆಗೂ ಹೋಗಿಲ್ಲ" ಎಂದ.

"ಹಾಗೋ! ಹಾಗಾದರೆ ಒಂದು ವಿಷಯ ಕೇಳ್ತೀನಿ ನಿಜ ಹೇಳು."

"ಗೊತ್ತಿದ್ದರೆ ಗೊತ್ತಿದ್ದನ್ನು ಹೇಳ್ತೀನಿ."

" ಆ ಅಂಗಾಡಿ ಯಾಕೆ ಬಂದಿದ್ದಾನೆ ಬೊಗಳು."

"ಅಂಗಾಡಿ ಏಲಕ್ಕಿ ಬೋರ್ಡಿನ ಇಂಟೆಲಿಜೆನ್ಸ್ ಆಫೀಸರು. ಏಲಕ್ಕಿ ರಿಸರ್ಚ್ ಏನು ನಡೀತಿದೆ. ಮಾರ್ಕೆಟಿಂಗ್ ಹೇಗಿದೆ ತನಿಖೆ ಮಾಡೊದಕ್ಕೆ ಬಂದಿದ್ದಾರೆ."

"ಏನೋ? ಸುಳ್ಳು ಹೇಳ್ತಿ! ಸುಳ್ಳು ಹೇಳಿದರೆ ನಿನ್ನ ಪ್ರಾಣ ಹೋಯ್ತಂತ ತಿಳಿ. ಸುಲೇಮಾನ್ ಬೇರಿ ಬಗ್ಗೆ ಅವನು ಏನೂ ಕೇಳಲಿಲ್ಲವೆ?"



"ಇಲ್ಲ."

"ಮನ್ನಾ ಜಂಗ್ಲಿ ಮರ ಕಡಿದು ಸಾಗಿಸಿರೋದನ್ನ ತನಿಖೆ ಮಾಡೋದಕ್ಕೆ ಬಂದಿಲ್ಲವ?"

"ಇಲ್ಲ."

"ಏಯ್ ಸುಳ್ಳೇಳ್ತೀಯಾ? ಸಾಯ್ತೀಯ ನೀನು."

"ಇಲ್ಲ ಖುರಾನ್ ಮೇಲೆ ಆಣೆ."

"ಇಲ್ಲಿ ನೋಡು, ನೀನು ನಮ್ಮೋನು. ಅವನು ಯಾಕೆ ಬಂದಿದಾನಂತ ನಿನಗೂ ಗೊತ್ತಿಲ್ಲದೆ ಇರಬಹುದು. ಅವನು ಸುಲೇಮಾನ್ ಬೇರಿ ವಿಷಯ ಎತ್ತಿದರೆ ಕೂಡಲೇ ನಮಗೆ ತಿಳಿಸಬೇಕು.."

"ಹೇಗೆ ತಿಳಿಸೋದು? ಯಾರು ನೀವು? ಎಲ್ಲಿ ಇರುತ್ತೀರು?"

"ಹಹ್ಹಾ ಹುಚ್ಚ! ಅದೆಲ್ಲಾ ನಿನಗ್ಯಾಕೆ. ನಾವು ಕೇಳಬೇಕಾದ ಕಡೆ ಕೇಳ್ತೀವಿ. ನೀನು ಸುಳ್ಳು ಹೇಳಿದೇ ಅಂದರೆ ಮುಗೀತು ನಿನ್ನ ಕತೆ."

"ಗೊತ್ತಿದ್ದರೆ ಗೊತ್ತಿದ್ದಷ್ಟು ಹೇಳ್ತೀನಿ"

"ಸರಿ ಜ್ಞಾಪಕ ಇಟ್ಟುಕೋ. ದ್ರೋಹ ಮಾಡಿದೆ ಅಂದರೆ ಈ ಚೂರಿ ನಿನ್ನ ಎದೆ ಒಳಗೆ" ಎಂದು ಬೆನ್ನ ಹಿಂದಿನ ವ್ಯಕ್ತಿ ಚೂರಿಯನ್ನೊಮ್ಮೆ ನೋವಾಗುವಂತೆ ಬೆನ್ನಿಗೆ ಒತ್ತಿತ್ತು. ಮಹಮದ್ ಮಾತಾಡಲಿಲ್ಲ. ಅವನಿಗೆ ಕತ್ತಾರೂ ಬೇಡವಾಗಿತ್ತು. ಬೆಹರಿಂಗೂ ಬೇಡವಾಗಿತ್ತು. ಒಮ್ಮೆ ಕೆಸರೂರಿನಿಂದ ಪಾರಾದರೆ ಸಾಕೆನ್ನಿಸಿತ್ತು.

"ಸರಿ ನೆಟ್ಟಗೆ ಹಿಂದಕ್ಕೆ ತಿರುಗದೆ ಇನ್ನೂರು ಹೆಜ್ಜೆ ಹೋಗು. ಈ ವಿಷಯ ಹಾರಿಗಾದರೂ ತಿಳಿಸಿದರೆ ನಿನ್ನ ಖತಂ ಮಾಡಬೇಕಾಗುತ್ತೆ" ಎಂದಿತು ಬೆನ್ನ ಹಿಂದಿನ ದನಿ.

ಬದುಕಿದೆಯಾ ಬಡಜೀವವೇ ಎಂದುಕೊಂಡ ಮಹಮದ್ ಜೀವನಾಭಿಮುಖವೆನ್ನುವಂತೆ ಸರಸರ ಮುಂದುವರಿದ: ಹೆಜ್ಜೆ ಎಣಿಕೆಯನ್ನೂ ಮಾಡಲಿಲ್ಲ ತಿರುಗಲೂ ಇಲ್ಲ. ನಿಜವಾಗಿಯೂ ಅವನಿಗನ್ನಿಸಿದ್ದು ಓಡಬೇಕೆಂದು.

ತುಂಬ ದೂರ ಹೋದನಂತರ ಹಿಂದೆ ಯಾರೂ ಬರುತ್ತಿಲ್ಲವೆಂದು ಖಾತರಿ ಮಾಡಿಕೊಂಡು ಮಹಮದ್ ನಿಂತು ಹಿಂದಿರುಗಿ ನೋಡಿದ. ಸನಿಹದಲ್ಲಿ ಯಾರೂ ಕಾಣಿಸಲಿಲ್ಲ. ರಸ್ತೆ ಖಾಲಿ ಇತ್ತು. ಆದರೆ ತನಗೆ ಚೂರಿ ತೋರಿಸಿ ನಿಲ್ಲಿಸಿದ ಜಾಗದಲ್ಲಿ ಯಾರೋ ನಿಂತಂತೆ ಕಂಡಿತು. ಆತ ಮೆಲ್ಲಗೆ ತನ್ನ ಕಡೆಗೇ ನಡೆದು ಬರುತ್ತಾ ಇದ್ದ. ಮಹಮದ್‌ಗೆ ತನ್ನ ಅಧೀರೆಯಿಂದ ಅವಮಾನವಾದಂತೆನ್ನಿಸಿತು. ಹಾಗೇ ನಿಂತುಕೊಂಡು ರಸ್ತೆಯಲ್ಲಿ ನಡೆದು ಬರುತ್ತಾ

ಇರುವವನು ಯಾರಿರಬಹುದೆಂದು ನಿರೀಕ್ಷಿಸಿದ. ನಡೆದು ಬರುತ್ತಾ ಇರುವ ವ್ಯಕ್ತಿ ಹತ್ತರಾದಂತೆ ಮಹಮದ್‌ಗೆ ತವಕ ಹೆಚ್ಚಾಗತೊಡಗಿತು. ಓಡಿ ಹೋಗೋಣವೆಂದೆನ್ನಿಸಿತು.

ಆ ವ್ಯಕ್ತಿ ತೀರಾ ಹತ್ತಿರಾದಂತೆ ಎಲ್ಲೋ ಅವನ್ನನು ನೋಡಿದಂತೆ ನೆನಪು ಮಹಮದ್‌ಗೆ! ಆ ವ್ಯಕ್ತಿ ಸುಮ್ಮನೆ ತನ್ನ ಪಾಡಿಗೆ ತಾನು ತನ್ನ ಯೋಚನೆಗಳಲ್ಲೇ ಲೀನವಾಗಿ ಮಹಮದ್ ಎದುರೇ ಸಾಗಿಹೋದ. ಮಹಮದ್‌ಗೆ ತನ್ನ ಬೆನ್ನ ಹಿಂದೆ ಚೂರಿ ಹಿಡಿದು ಮಾತಾಡಿದವನಿಗೂ ಇವನಿಗೂ ಯಾವ ಸಂಬಂಧವೂ ಇಲ್ಲವೆಂದೆನ್ನಿಸಿತು. ಆದರೆ "ಇವನು ಯಾರು? ಎಲ್ಲೋ ನೋಡಿದ್ದಂತೂ ಖಾತರಿ! ಆದರೆ ಎಲ್ಲಿ?"

ಇದ್ದಕ್ಕಿದ್ದಂತೆ ಅವನ ಪರಿಚಯ ಮಹಮದ್‌ಗೆ ಹೊಳೆಯತೊಡಗಿತು. ಅವನೇ ಮೆಜಿಶಿಯನ್ ಮುತ್ತು! ಎಂಟಮಾಲಜಿ ಸಿದ್ದಪ್ಪ, ಕೆಸರೂರಿನಲ್ಲಿ ಇವರಿಂದ ಆಗುತ್ತಿದ್ದ ಪರಿಸರ ವಿನಾಶದ ಬಗ್ಗೆ ಜೋಗಿಹಾಳರಲ್ಲಿಗೆ ಅನೇಕ ಪುಕಾರುಗಳನ್ನು ಮಾಡಿದ. ಈ ಗೋಸಾಯಿಗಳು ಸಂಶೋಧನ ಕೇಂದ್ರದ ಬಳಿ ಇದ್ದ ಕಾಡಿನ ಹಕ್ಕಿಗಳನ್ನೂ ಕಾಡುಕೋಳಿಗಳನ್ನೂ ಹಿಡಿದು ಮಿಲ್ಟ್ರೀಹೋಟೆಲುಗಳಿಗೆ ಮಾರುತ್ತಿದ್ದರು. ಜೊತೆಗೆ ಎಲ್ಲಿಗೋ ರಫ್ತು ಮಾಡಲು ಕೆಸರೂರಿನ ಆಸುಪಾಸಿನಲ್ಲಿದ್ದ ದೊಡ್ಡ ಜಾತಿ ಕಪ್ಪೆಗಳನ್ನೆಲ್ಲಾ ಹಿಡಿದು ತೊಡೆ ಕತ್ತರಿಸಿ ಸಾಗಿಸತೊಗಿದ್ದರು. ಇವರ ಕೆಸರೂರಿನ ಪರಿಸರಕ್ಕೆ ಮಾಡುತ್ತಿದ್ದ ಹಾನಿಯನ್ನು ಸಿದ್ದಪ್ಪ ಸವಿವರವಾಗಿ ಅಭ್ಯಾಸ ಮಾಡಿ ಇವರನ್ನು ಮೊದಲು ಇಲ್ಲಿಂದ ಓಡಿಸಬೇಕೆಂದು ಅರಣ್ಯಾಧಿಕಾರಿಗಳಿಗೆ ಪೋಲೀಸು ಇಲಾಖೆಗೆ ದೂರು ಕೊಟ್ಟಿದ್ದ. ಮತ್ತೆ ಇವರಿಗೂ ಸಿದ್ದಪ್ಪನಿಗೂ ಜಟಾಪಟಿ ಆರಂಭವಾಗಬಹುದೆಂದು ಮಹಮದ್ ಯೋಚಿಸಿದ.

ಹಾಗಾದರೆ ತನ್ನ ಬೆನ್ನ ಹಿಂದೆ ಚೂರಿ ಹಿಡಿದು ಬೆದರಿಸಿದ ವ್ಯಕ್ತಿ ಯಾರು? ಮುತ್ತುವಂತೂ ಅವನು ನಡೆದುಕೊಂಡ ರೀತಿಯಲ್ಲಿ ಅವನ ಮುಖಭಾವದಲ್ಲಿ ಅವನೇ ಬೆದರಿಸಿದವನೆಂದು ಊಹಿಸಲಸಾಧ್ಯವಾಗಿತ್ತು. ಹಾಗಾದರೆ ತನ್ನನ್ನು ಬೆದರಿಸಿದವನು ಬೇರೊಬ್ಬನಾದರೆ ಆತ ಮುತ್ತುವನ್ನು ಕಂಡೇ ತನ್ನನ್ನು ಬಿಡುಗಡೆ ಮಾಡಿದ್ದನೆ? ಆದರೆ ಮುತ್ತು ನಡೆದುಹೋದ ರೀತಿಯಲ್ಲಿ ಅವನ ಮುಖಭಾವದಲ್ಲಿ ಚೂರಿ ಹಿಡಿದು ಬೆದರಿಸಿದವನನ್ನು ಅವನು ನೋಡಿದಂತೆಯೂ ಕಾಣಲಿಲ್ಲ.

ಮಹಮದ್‌ಗೆ ಏನೂ ಅರ್ಥವಾಗಲಿಲ್ಲ. ಯಾವುದೂ ಬಗೆಹರಿಯಲಿಲ್ಲ. ಆದರೆ ಮಹಮದ್‌ಗೆ ಒಂದು ವಿಷಯ ಮಾತ್ರ ಸ್ಪಷ್ಟವಾಯ್ತು. ಕೆಸರೂರಿನ ಜನ ತಮ್ಮ ಬಗ್ಗೆ ಉದಾಸೀನದಿಂದಿಲ್ಲ. ತಮಗೇ ಗೊತ್ತಿಲ್ಲದಂತೆ ತಾವು ಕೆಸರೂರಿನ



ಸಮಾಜದ ಮರ್ಮಕ್ಕೆ ತಾಗುವಂಥ ಏನೋ ಕೆಲಸ ಮಾಡಿದ್ದೇವೆ ಎಂದು.

ಮಹಮದ್‌ಗೆ ಚೂರಿ ತೋರಿಸಿ ಬೆದರಿಸಿದುದರ ಹಿನ್ನೆಲೆ ಸಾಕಷ್ಟು ಸರಳವಾದುದಾಗೇ ಇತ್ತು. ಪಾಟೀಲರು ಮತ್ತು ಅವರ ಶಿಷ್ಯರ ಮಿತ್ರವೃಂದವನ್ನು ಕೆಸರೂರಿನ ಎರಡೂ ಪಕ್ಷಗಳು ಎಂದೂ ಆಲಿಪ್ತರ ಗುಂಪೆಂದು ತಿಳಿದೇ ಇರಲಿಲ್ಲ. ಎರಡೂ ಪಕ್ಷದವರು ಇವರನ್ನು ಪರಸ್ಪರ ವಿರೋಧಿಗಳ ಗುಂಪೆಂದೇ ಅನುಮಾನದಿಂದ ನೋಡುತ್ತಿದ್ದರು. ಆದ್ದರಿಂದಲೇ ಪಾಟೀಲರಿಗೆ ಕಾಲೇಜಿನ ಸಮಾರಂಭದಲ್ಲಿ ವೆಂಕಟೇಶ್ವರ ಭಕ್ತರಿಂದ ಧಿಕ್ಕಾರ ಬಿದ್ದುದು. ಆದರೆ ಅಂಗಾಡಿ ಎಂದೊಬ್ಬ ಅಪರಿಚಿತ ಕೆಸರೂರಿಗೆ ಆಗಮಿಸುತ್ತಲೇ ಸುಲೇಮಾನ್ ಬೇರಿ ಗುಂಪು ಕೊಂಚ ಜಾಗರೂಕತೆಯಿಂದ ಗಮನಿಸತೊಡಗಿತು. ಆತ ಇಂಟಲಿಜೆನ್ಸ್ ಆಫೀಸರ್ ಎಂದು ತಿಳಿದಮೇಲಂತೂ ಸುಲೇಮಾನ್ ಬೇರಿ ಕಡೆಯವರಿಗೆ ಗಾಬರಿಯಾಯ್ತು. ಅವರಿಗೆ ತಾವು ಕೇಂದ್ರ ಸರ್ಕಾರದ ಅಧೀನದಲ್ಲಿದ್ದ ಮನ್ನಾ ಜಂಗ್ಲಿಯಿಂದ ಸಾಗುವಾನಿ, ಬೀಟೆ, ಹೊನ್ನೆ ನಂದಿ ಮುಂತಾದ ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ಮರಗಳನ್ನು ಕಡಿದು ಕಳ್ಳಸಾಗಾಣಿಕೆ ಮಾಡಿದ್ದನ್ನು ತನಿಖೆ ಮಾಡಲು ಈತ ಬಂದಿರಬಹುದೇ ಎಂದು ಶಂಕಿಸಿದರು. ಆದ್ದರಿಂದಲೇ ಮಹಮದ್‌ನಿಂದ ವಿಷಯ ತಿಳಿದುಕೊಳ್ಳಲು ಅವರು ಯತ್ನಿಸಿದ್ದು. ಮಹಮದ್ ನೀಡಿದ ವಿವರಣೆಯಿಂದ ಅವರಿಗೆ ಯಾವ ಸಮಾಧಾನವೂ ಆಗಲಿಲ್ಲ. ಆದರೆ ಅಂಗಾಡಿ ಜಯರಾಂ ರಾಮಚಂದ್ರ ಮುಂತಾದವರ ನಡವಳಿಕೆಗಳೂ ಅವರಿಗೆ ಅರ್ಥವಾಗಲಿಲ್ಲ. ಜೊತೆಗೆ ರಾಮಚಂದ್ರನ ಶಿಷ್ಯರಾದ ರಮೇಶ ರಫಿ ಮುಂತಾದವರೂ ಕೂಡ ಎರಡು ಗುಂಪಿಗೂ ಅರ್ಥವಾಗದ ರೀತಿಯಲ್ಲಿ ವ್ಯವಹರಿಸುತ್ತಿದ್ದರು. ಈ ಗುಂಪಿನ ಗೂಢ ಚಟುವಟಿಕೆಗಳ ಅರ್ಥ ಅರಿಯದೆ ತಮ್ಮ ದುಷ್ಕೃತ್ಯಗಳ ಸರಣಿಯಲ್ಲಿ ಯಾವುದನ್ನು ಹಿಡಿಯಲು ಇವರು ಪ್ರಯತ್ನಿಸುತ್ತಿದ್ದಾರೆ ಎಂದು ಅಳುಕಿನ ಮನದಲ್ಲಿ ಮೆಲುಕುತ್ತಾ ನಿಗಾ ಇಟ್ಟಿದ್ದರು. ಈ ನಡುವೆ ಸಾಹಿತಿ ಜಯರಾಮನ ಕಲ್ಪನೆಯ ಕಥೆ ಪರಿಸ್ಥಿತಿಯನ್ನು ಇನ್ನಷ್ಟು ಜಟಿಲಗೊಳಿಸಲು ಸಹಾಯಕವಾದುದು ಒಂದು ವಿಧಿ ವಿಲಾಸ.

## ಅಧ್ಯಾಯ ೨೫

"ಜಯರಾಂ ಹೇಳಿದ ಕತೆ ಹೆಚ್ಚು ಕಡಿಮೆ ಸತ್ಯ ಆಗುವಂತೆಯೇ ತೋರುತ್ತಿದೆ ರಾಮಚಂದ್ರ. ಬಹುಶಃ ಮನುಷ್ಯನ ಚರ್ಯೆಗಳು ಪೂರ್ವ ನಿರ್ದೇಶಿತ ಎನ್ನುವ ವಾದವೆ ಸತ್ಯವೇನೋ ಅಂತ ನನಗನ್ನಿಸುತ್ತದೆ! ಜಯರಾಮನ ಕತೆಯ ಕೆಲವೊಂದು ನ್ಯೂನತೆಗಳನ್ನು ನಾನು ಪತ್ತೆ ಮಾಡಿಲ್ಲದಿದ್ದರೆ ಜೋಗಿಹಾಳರ ಖೂನಿ ಪಿತೂರಿಯಲ್ಲಿ ಜಯರಾಂ ಕೂಡ ಓರ್ವ ಸದಸ್ಯನೇನೋ ಎಂದು ನನಗೆ ಅನುಮಾನವೇ ಬಂದುಬಿಡುತ್ತಿತ್ತು. ವಾಸ್ತವ ಸಂಗತಿಗಳ ಆಧಾರದ ಮೇಲೆ ಒಬ್ಬ ಕಲಾವಿದರ ಸತ್ಯಕ್ಕೆ ಇಷ್ಟೊಂದು ಹತ್ತಿರಾಗಿ ಘಟನಾವಳಿಗಳನ್ನು ಜೋಡಿಸಬಲ್ಲ ಎನ್ನುವುದು ನಂಬಲಾರದಂಥ ಆಶ್ಚರ್ಯಕರ ಸಂಗತಿ!" ಅಂಗಾಡಿ ಟಿಬಿಯಲ್ಲಿ ಕುಳಿತುಕೊಂಡು ರಾಮಚಂದ್ರನೊಡನೆ ಮಿಕ್ಕ ಸ್ನೇಹಿತರ ಬರವನ್ನು ಕಾಯುತ್ತಾ ಹರಟಿದ. ಜಯರಾಮನ ಕತೆ ಅಂಗಾಡಿಗೆ ಬಹುಪಾಲು ಸತ್ಯಕ್ಕೆ ಹತ್ತಿರಾಗಿ ಸಾಗಿದಂತೆ ಕಂಡಿತು. ಜಯರಾಮನ ಸೃಷ್ಟಿ ಶಕ್ತಿ ಅಲ್ಲಾವುದ್ದೀನನ ಅದ್ಭುತ ದೀಪದಂತೆ ಕಂಡಿತ್ತು ಅಂಗಾಡಿಗೆ. ರಾಮಚಂದ್ರ ಯಾವೊಂದು ತೀರ್ಮಾನಕ್ಕೂ ಬರದೆ ಸಿಗರೇಟು ಹೊಗೆ ಬಿಡುತ್ತಾ ಸುಮ್ಮನೆ ಕುಳಿತಿದ್ದ.

ಕೊಂಚ ಹೊತ್ತಾದ ನಂತರ ರಾಮಚಂದ್ರ ಅಂಗಾಡಿ ಕಡೆ ತಿರುಗಿ "ನೀವು ಕಮ್ಯುನಿಸ್ಟ್ ಆಗಿದ್ದಿರಾ ಅಂಗಾಡಿ?" ಎಂದು ಕೇಳಿದ.

ರಾಮಚಂದ್ರನ ಪ್ರಶ್ನೆಯಿಂದ ಚಕಿತನಾದ ಅಂಗಾಡಿ "ಇದೇನು ಈ ರೀತಿ ಕೇಳುತಿದ್ದೀರಿ? ರಾಜಕೀಯಕ್ಕೂ ಇದಕ್ಕೂ ಏನು ಸಂಬಂಧ?" ಎಂದು ಕೇಳಿದ.

"ಸಂಬಂಧ ಹೇಳ್ತಿಣಿ. ನೀವು ಮಾರ್ಕ್ಸ್‌ವಾದಿ ಆಗಿದ್ದಿರಾ ಹೇಳಿ."

"ನಾನು ಮಾರ್ಕ್ಸ್‌ವಾದಿಯಾಲೀ, ಕಮ್ಯುನಿಸ್ಟ್ ಪಕ್ಷವನಾಗಲೀ ಅಲ್ಲ. ನಾನು ಬಂಗಾಳದಲ್ಲಿ ಸಿಬಿಐ ಕೆಲಸದಲ್ಲಿದ್ದಾಗ ಅಲ್ಲಿನ ಮಾರ್ಕ್ಸ್‌ವಾದಿಗಳ ನಿಕಟ ಪರಿಚಯ ಇತ್ತು. ಮಾರ್ಕ್ಸ್ ಸಿದ್ಧಾಂತಗಳ ಬಗ್ಗೆ ತಿಳುವಳಿಕೆ ಇದೆಯೇ ಹೊರತು ಆ ಪಕ್ಷದ ಜೊತೆ ಏನೂ ಸಂಬಂಧ ಇಲ್ಲ. ಅದಿರಲಿ ನಿಮಗೇಕೆ ಇದ್ದಕ್ಕಿದ್ದಂತೆ ಆ ಬಗ್ಗೆ ಕುತೂಹಲ ಉಂಟಾಯ್ತು?"

"ಏನಿಲ್ಲ ಅಂಗಾಡಿ. ನಾನು ನಂಬಿರುವ ತತ್ವಗಳೂ ಸಿದ್ಧಾಂತಗಳೂ ನಮ್ಮ



ದೃಷ್ಟಿ ಮತ್ತು ಅರಿವಿನ ಮೇಲೆ ಗಾಢವಾದ ಪರಿಣಾ ಬೀರುತ್ತವೆ. ಮಾರ್ಕ್ಸ್ ಇಡೀ ಮನುಷ್ಯನ ಚರಿತ್ರೆಯನ್ನು ಕೆಲವು ಚಾರಿತ್ರಿಕ ನಿಯಮಗಳಿಗೆ ಅನುಸಾರವಾಗಿ ವಿಕಾಸಗೊಂಡಿದೆ ಅಂತ ವಿಶ್ಲೇಷಿಸಿದ. ಆಂದರೆ ಮನುಷ್ಯಪ್ರಜ್ಞೆ ಸ್ವಾತಂತ್ರ್ಯದ ಭ್ರಮೆಯಲ್ಲಿ ಕೆಲವು ನಿಯಮಗಳಿಗೆ ಅನುಸಾರವಾಗಿ ಅಧೀನವಾಗಿ ವರ್ತಿಸುತ್ತೆ ಅಂತ ಹೇಳಿದ. ಕೆಲವು ಸಂಗತಿಗಳನ್ನು ಹೇಳಿದರೆ ಜಯರಾಮನ ಕಲ್ಪನೆ ಕರಾರುವಾಕ್ಕಾಗಿ ಮುಂದಿನದನ್ನು ಕಲ್ಪಿಸುತ್ತೆ ಎನ್ನುವ ನಿಮ್ಮ ನಂಬಿಕೆಗೆ ಮಾರ್ಕ್ಸ್ ವಾದದ ಪ್ರಭಾವವಿರಬಹುದು."

"ಛೆಛೆ! ರಾಮಚಂದ್ರ ನೀವು ಪ್ರೊಫೆಸರ್. ಈ ತತ್ವ ಸಿದ್ಧಾಂತಗಳನ್ನೆಲ್ಲಾ ಆಳವಾಗಿ ಅಭ್ಯಾಸ ಮಾಡಿದೀರ. ನಾನು ಅಷ್ಟೊಂದು ಆಳವಾಗಿ ಯಾವ ಸಿದ್ಧಾಂತವನ್ನೂ ಅಭ್ಯಾಸ ಮಾಡಿಲ್ಲ. ನಾನು ಮೂಲತಃ ಪತ್ತೇದಾರ ಅಷ್ಟೆ. ಪತ್ತೇದಾರನಿಗಿರಬೇಕಾದ ಸ್ವಾಭಾವಿಕ ಅನ್ವೇಷಣೆಯ ಕುತೂಹಲ ಮಾತ್ರ ನನಗೆ ಇರೋದು. ಅಷ್ಟೇ ಹೊರತು ಯಾವ ರಾಜಕೀಯ ಸಿದ್ಧಾಂತದ ಪ್ರತಿಪಾದನೆಯೂ ನನ್ನ ಉದ್ದೇಶ ಅಲ್ಲ" ಎಂದು ಅಂಗಾಡಿ ರಾಮಚಂದ್ರನಿಗೆ ವಿವರಣೆ ನೀಡುತ್ತಿರಬೇಕಾದರೆ ಜಯರಾಮ, ಹೆಗ್ಡೆ, ಸಿದ್ದಪ್ಪ, ಮಹಮದ್ ಟಿಬಿ ಮೆಟ್ಟಿಲು ಹತ್ತಿ ಬಂದರು. ಹೆಗ್ಡೆ ಜಯರಾಮನೊಡನೆ ಏನನ್ನೋ ರಭಸದಿಂದ ವಾದಿಸುತ್ತಿದ್ದ.

ಜಯರಾಮ "ಹೋಗ್ರಯ್ಯ ಹೋಗಿ, ಒಂದು ಕತೆ ಹೇಳಿದ ಮೇಲೆ ಮುಗಿದುಹೋಯ್ತು. ಆ ಕತೆ ಚೆನ್ನಾಗಿದೆಯೋ ಇಲ್ಲವೋ ಹೇಳೋದಷ್ಟೆ ವಿಮರ್ಶಕನ ಕೆಲಸ. ಅದು ಬಿಟ್ಟು ಅದನ್ನು ಹೀಗೆ ತಿದ್ದು. ಇದು ಹೀಗಿರಬೇಕು ಅಂದರೆ ನಾನು ಒಪ್ಪೋಲ್ಲ" ಎಂದ.

"ಹಾಗಲ್ಲ ಜಯರಾಮ್ ವೈರಸ್‌ಗಳೂ ಫಂಗಸ್‌ಗಳೂ ಗಾಳಿಯಲ್ಲಿ ಭೂಖಂಡಗಳನ್ನೇ ದಾಟಿಕೊಂಡು ಬರ್ತವೆ. ಅವನ್ನು ತಂದು ಯಾರು ಹುಟ್ಟು ಹಾಕಬೇಕಾಗಿಲ್ಲ ಅನ್ನೋದು ಒಂದು. ಇನ್ನೊಂದು ಕೆಸರೂರಿನ ಖಾಯಿಲೆ ಹಬ್ಬಿಸೋದಕ್ಕೆ ಜೋಗಿಹಾಳರನ್ನು ಖೂನಿ ಮಾಡಬೇಕಾದ ಅವಶ್ಯಕತೆ ಗ್ವಾಟೇಮಾಲಾದ ವಾಣಿಜ್ಯ ಸಮುದಾಯಕ್ಕೆ ಇಲ್ಲ ಅನ್ನೋದು ಇಲ್ಲಿ ಮುಖ್ಯ" ಎಂದು ಹೆಗ್ಡೆ ತನ್ನೆರಡು ತಕರಾರುಗಳನ್ನು ಮತ್ತೆ ಎಲ್ಲರಿಗೂ ತಿಳಿಯುವಂತೆ ಪುನರುಚ್ಚರಿಸಿದ.

ಅಂಗಾಡಿ "ಒಂದು ನಿಮಿಷ ತಡೀರಿ ಹೆಗ್ಡೆ. ನೀವು ಉತ್ತರಿಸಿ. ಕೆಸರೂರಿನ ಖಾಯಿಲೆ ಗ್ವಾಟೆಮಾಲ ಒಂದರಲ್ಲೇ ಇರೋದು ಅನ್ನೋದನ್ನ ಒಪ್ತೀರಾ?" ಎಂದ.

"ಹೌದು."

"ಹಾಗಾದರೆ ಗ್ವಾಟೆಮಾಲಾದಲ್ಲಿಯೂ ಏಲಕ್ಕಿಗೆ ಕೆಸರೂರು ಖಾಯಿಲೆ ತಗುಲಿ ನಾಶವಾಗಬೇಕಲ್ಲ."

"ಇಲ್ಲ, ಕೆಸರೂರಿನ ಖಾಯಿಲೆ ವೈರಸ್‌ಗಳನ್ನು ಗಿಡದಿಂದ ಗಿಡಕ್ಕೆ ಹಬ್ಬಿಸೋದಕ್ಕೆ ಅಗತ್ಯವಾದ ಏಫಿಡ್ಸ್ ತಿಗಣೆಗಳು ಗ್ವಾಟೆಮಾಲಾದ ಶೀತದ ದೆಸೆಯಿಂದ ಅಲ್ಲಿ ಇಲ್ಲ. ಹಾಗಾಗಿ ಈ ರೋಗ ಪ್ರಸಾರವಾಗೋದು ತುಂಬಾ ನಿಧಾನ. ಎಷ್ಟು ನಿಧಾನ ಅಂದರೆ ಅದೊಂದು ನಿರುಪದ್ರವಿ ಖಾಯಿಲೆ ಎನ್ನುವಷ್ಟು."

"ಹಾಗಾದರೆ ಆ ಖಾಯಿಲೆ ನಮಾವಶೇಷವಾಗದೆ ಹೇಗೆ ಉಳಿದಿದೆ ಅಲ್ಲಿ?"

"ಈ ವೈರಸ್ಸು ಏಲಕ್ಕಿ ಗಿಡಗಳಿಗೆ ಬರುವ ಫಂಗಸ್ ರೋಗಗಳನ್ನು ಆಶ್ರಯಿಸಿ ಅವುಗಳ ಪರಾಗಗಳಿಂದ ಪ್ರಸಾರಗೊಳ್ಳುತ್ತದೆ ಅಂತ ಒಂದು ಬಲವಾದ ಶಂಕೆ."

"ಅಂದರೆ ಆ ರೋಗದ ಜೀವಂತ ಸ್ಪೋರ್‌ಗಳಿರೋ ಸ್ಲೈಡ್‌ಗಳನ್ನು ಜೋಗಿಹಾಳರಿಗೆ ಅಭಿಪ್ರಾಯಕ್ಕೆ ಕಳಿಸಿದ್ದಾರೆ. ಪ್ರೊಜೆಕ್ಟರ್ ಆಸ್ಫೋಟನೆಯಿಂದ ಅದು ಇಲ್ಲಿ ಹಬ್ಬಿತು ಅಂತ ತಾನೆ ಜಯರಾಂ ಹೇಳೋದು."

"ಅಂತ ಜಯರಾಂ ಕಲ್ಪನೆ! ಆದರೆ ನಾವು ಒಪ್ಪೊ ಮೊದಲು ತುಂಬಾ ಸಂದೇಹಗಳಿಗೆ ಉತ್ತರಿಸಬೇಕಾಗುತ್ತೆ. ಅಲ್ಲೀವರೆಗೆ ಇದೊಂದು ಊಹಾಪೋಹದ ಸುಳ್ಳಿನ ಕಂತೆ" ಹೆಗ್ಡೆ ಅಂಗಾಡಿ ಒಂದೇ ಸಮ ಮಾತಾಡಿದರು.

ಅಂಗಾಡಿ ತಕ್ಷಣ ಗಂಭೀರನಾದ. ಅಂಗಾಡಿ ಮುಖದಲ್ಲಾದ ಬದಲಾವಣೆ ಎಲ್ಲರಿಗೂ ಗೊತ್ತಾಯ್ತು. "ನೋಡಿ ಹೆಗ್ಡೆ, ಜಯರಾಂ ಹೇಳಿದ ಕಲ್ಪನೆಯನ್ನು ನೀವು ಸೀರಿಯಸ್ಸಾಗಿ ಸುಳ್ಳಿನ ಕಂತೆ ಅಂತ ಹೇಳ್ತಿಲ್ಲಾ ಎಂದು ತಿಳಿದಿದ್ದೀನಿ. ಅದನ್ನು ನೀವು ಸೀರಿಯಸ್ಸಾಗಿ ಹೇಳ್ತಿರೋದಾದರೆ ನೀವೇ ಅದಕ್ಕೆ ಮೊದಲು ಅನೇಕ ಸಂದೇಹಗಳಿಗೆ ಸಮಾಧಾನ ಹೇಳಬೇಕಾಗುತ್ತೆ ಗೊತ್ತೋ" ಎಂದ.

ಹೆಗ್ಡೆ ತನ್ನ ಮೇಲೆ ತಕ್ರಾರುಗಳು ತಿರುಗಿ ಬಿದ್ದುದನ್ನು ನೋಡಿ ಗಾಬರಿ ಬಿದ್ದ. ಅದನ್ನು ನೋಡಿ ರಾಮಚಂದ್ರ ನಕ್ಕ.

"ಜೋಗಿಹಾಳರದು ಕೊಲೆ ಅನ್ನೋದು ನಿಜ. ಜಯರಾಮ್ ಕತೆ ಹೇಳಿದ ಮೇಲೆ ನಾನು ಸಿರಸಿಗೆ ಹೋಗಿ ಜೋಗಹಾಳರ ಲ್ಯಾಬ್ ಟೆಕ್ನೀಷಿಯನ್ ಹತ್ತಿರ ಮಾತಾಡಿದೆ. ಜೋಗಿಹಾಳರಿಗೆ ಗ್ವಾಟೆಮಾಲಾದಿಂದ ಸ್ಲೈಡ್‌ಗಳು ಬಂದದ್ದು ನಿಜ. ಅವು ತೀರಾ ಮಬ್ಬಾಗಿದ್ದುದರಿಂದ ಪ್ರೊಜೆಕ್ಟ್ ಬಲ್ಬಿನಲ್ಲಿ ಸರಿಯಾಗಿ ಪ್ರೊಜೆಕ್ಟ್ ಆಗ್ತಿರಲಿಲ್ಲವಂತೆ. ಅದಕ್ಕೆ ಜೋಗಿಹಾಳರು ಹಾಲೋಜಾನ್ ಬಲ್ಬು ಬೇಕೂ ಅಂತ ಹುಡುಕಾಡ್ತಿದ್ದರಂತೆ! ಯರೋ ಆ ಸಂದರ್ಭ ಸೃಷ್ಟಿಸಿದವರೇ ಜೋಗಿಹಾಳರಿಗೆ ಹಾಲೋಜಾನ್ ಬಲ್ಬನ್ನು ಸಪ್ಲೈ ಮಾಡಿದ್ದಾರೆ. ನಮ್ಮ ತನಿಖೆಯಲ್ಲಿ ಇದು ಒಂದು ಅತ್ಯಂತ ಮುಖ್ಯ ಅಂಶ ತಿಳಿದುಕೊಳ್ಳಿ" ಎಂದು ಗಂಭಿರವಾಗಿ ಅಂಗಾಡಿ ಹೇಳಿದ.



ಆದರೆ ಹೆಗ್ಡೆಯ ಹಲವು ಸಂಶಯಗಳು ಆತನ ಮಟ್ಟಿಗಂತೂ ನಿಜವಾದವಾಗಿದ್ದವು. "ಸರಿ ಅಂಗಾಡಿ. ನಿಮಗೆ ನಿಮ್ಮ ಸಾಕ್ಷಾಧಾರಗಳು ಪೂರಕವಾಗಿ ಎಷ್ಟೇ ದೊರೆತಿದ್ದರೂ ನನ್ನ ಅನುಮಾನಕ್ಕೆ ಸಮಾಧಾನ ಹೇಳೊವರೆಗೆ ಬೆನ್ನಿಫಿಟ್ ಆಫ್ ಡೌಟ್ ಇದ್ದೇ ಇರ್ತದೆ. ಜೋಗಿಹಾಳರ ಕೊಲೆ ಏಕೆ ಮಾಡಬೇಕು. ವೈರಸ್ ರೋಗ ಹಬ್ಬಿಸೋದೊಂದೇ ಉದ್ದೇಶವಾದರೆ ಅದಕ್ಕೆ ಜೋಗಿಹಾಳರನ್ನು ಕೊಲೆ ಮಾಡೋ ಅಗತ್ಯ ಇಲ್ಲವೇ ಇಲ್ಲ. ಇದಕ್ಕೆ ಉತ್ತರ ದೊರೆತ ಹೊರತು ನಿಮ್ಮ ತನಿಖೆ ಅಪೂರ್ಣ ಆಗೋದು ಖಂಡಿತ" ಎಂದ ಹೆಗ್ಡೆ.

ಜಯರಾಂ ತುಂಬಾ ಹೊತ್ತು ಇವರೆಲ್ಲರ ತೊಡಕಿನ ವಾದ ಕೇಳಿ ಕೊನೆಗೆ "ನೋಡಿ ಅಂಗಾಡಿ, ಹೆಗ್ಡೆ ಹೇಳೊ ಮಾತಿನಲ್ಲಿ ಸತ್ಯಾಂಶ ಇದೆ. ನೀವು ನನ್ನ ಕತೆಗೆ ಮೂಲಾಧಾರವಾಗಿ ತಿಳಿಸಿದ ಸಂಗತಿಗಳಲ್ಲಿ ಯಾವುದೋ ಮುಖ್ಯಾಂಶ ಬಿಟ್ಟು ಹೋಗಿದೆ. ಜೋಗಿಹಾಳರನ್ನು ಕೊಲೆ ಮಾಡಬೇಕಾದಂಥ ಗುರುತರವಾದ ಕಾರಣ ಬೇರಾವುದೋ ಇರಲೇಬೇಕು. ಅದಿಲ್ಲದಿದ್ದರೆ ನನ್ನ ಕಥೆ ಖಂಡಿತ ಊಹಾಪೋಹ. ಜೋಗಿಹಾಳರ ಸಾವು ಕೇವಲ ಆಕಸ್ಮಿಕ" ಎಂದ.

ಅಂಗಾಡಿ ಜಯರಾಮನ ಕಥೆಯನ್ನು ಕೇವಲ ಊಹಾಪೋಹ ಎಂದು ತಳ್ಳಿ ಹಾಕಲಂತೂ ಸಿದ್ಧನಿರಲಿಲ್ಲ. ಒಳ್ಳೆ ಅಂತರರಾಷ್ಟ್ರೀಯ ಕೇಡಿಗಳ ಜಾಲ ಒಂದನ್ನು ಪತ್ತೆ ಮಾಡಬಹುದಾದ ಸುಸಮಯ ಬಿಟ್ಟುಕೊಡಲು ಅವನಿಗೆ ಮನಸ್ಸೆ ಇರಲಿಲ್ಲ. ಜೊತೆಗೆ ಈಗಾಗಲೇ ಅವನು ಜಯರಾಮನ ಕತೆಗೆ ಪೂರಕವಾದ ಹಲವಂಶಗಳನ್ನು ಒಟ್ಟು ಮಾಡಿ. ಆದ್ದರಿಂದ ಅವನಿಗೆ ಹೆಗ್ಡೆ ದೊಡ್ಡ ಪೇಚನ್ನು ತಂದಿಟ್ಟಿದ್ದ.

"ಜೋಗಿಹಾಳರು ರಿಸರ್ಚ್ ಮಾಡುತ್ತಿದ್ದರಲ್ಲ. ಅದರಲ್ಲಿ ಮುಖ್ಯವಾದ್ದು ಒಂದೇ ಒಂದು, ಕೆಸರೂರಿನ ಹೈಬ್ರಿಡ್ ಏಲಕ್ಕಿ ತಳಿ. ಆದರೆ ಅದರ ಬೀಜದಿಂದ ನಾಟಿ ಮಾಡಿದ ಒಂದು ಎಕರೆ ಪ್ಲಾಟು ಈಗಲೂ ಇದೆ. ಅವು ಯಾವ ರೀತಿಯಲ್ಲೂ ಗಣನೀಯವಾದ ಗಿಡಗಳಲ್ಲ ಅಂತ ಪಾಟೀಲರೂ, ಬ್ರೀಡರ್ ಮಹಮದ್ ಇಬ್ಬರೂ ಹೇಳ್ತಾರೆ!" ಎಂದು ಹೇಳಿ ಯೋಚಿಸುತ್ತಾ ಕುಳಿತ.

ಬ್ರೀಡರ್ ಮಹಮದ್, ಅಂಗಾಡಿ ಹೋದನಂತರ ಪಾಟೀಲರು ಕೆಸರೂರು ಹೈಬ್ರೀಡ್ ಬಗ್ಗೆ ವ್ಯಾಪಕ ತನಿಖೆ ಹಚ್ಚಿಕೊಂಡು ಕುಳಿತಿದ್ದಾರೆಂದೂ ಮತ್ತೆ ಮತ್ತೆ ಆ ಬೀಜಗಳಿಗೆ ಮೂಲವಾದ ತಾಯಿಗಿಡ ಯಾವುದೆಂದು ಕೇಳಿದರೆಂದೂ ಹೇಳಿದ. ಅಂಗಾಡಿ ಶಾಂತಗೌಡರಿಂದ ಎಕರೆಗೆ ಒಂದು ಟನ್ನು ಏಲಕ್ಕಿ ಕೊಡುವ ತಳಿ ಎನ್ನುವ ಸುದ್ದಿ ತಂದು ತಿಳಿಸಿದಾಗಿಂದ ಪಾಟೀಲರು ತುಂಬಾ ಸೀರಿಯಸ್ಸಾಗಿ ಜೋಗಿಹಾಳರ ನೋಟ್ಸುಗಳ ತಪಾಸಣೆ ಆರಂಭಿಸಿದ್ದಾರೆಂದು ತಿಳಿಸಿದ. ಶಾಂತಗೌಡರನ್ನು ಮಾತಾಡಿಸಿ ವಿಷಯ ತಿಳಿಯಲು ಪ್ರಯತ್ನಿಸಿದರೆಂದೂ ಆದರೆ ಶಾಂತಗೌಡರ ಸ್ಥಿತಿ ತುಂಬಾ ಚಿಂತಾಜನಕವಾಗಿರೋದರಿಂದ ಡಾಕ್ಟರು ಅವರನ್ನು ಮಾತಾಡಿಸಲು ಯಾರಿಗೂ ಅವಕಾಶ ಕೊಡಲಿಲ್ಲವೆಂದೂ ಹೇಳಿದ.

"ಇದೊಳ್ಳೆ ಚಿದಂಬರ ರಹಸ್ಯ ಆಯ್ತಲ್ಲಾ ಈ ಕೆಸರೂರು ಹೈಬ್ರಿಡ್ ಅನ್ನೊದು" ಎಂದು ಗೊಣಗುತ್ತಾ ಅಂಗಾಡಿ ತಲೆ ಕೆರೆದುಕೊಂಡ. ಮಹಮದ್ ಆ ಮಾತು ಕೇಳಿ "ಅಂಗಾಡಿ, ಬೆಳಿಗ್ಗೆ ಪಾಟೀಲರು ಇದೇ ಮಾತು ಹೇಳಿದರು, ಚಿದಂಬರ ರಹಸ್ಯ ಅಂತ. ಜೋಗಿಹಾಳರ ನೋಟ್ಸುಗಳನ್ನೆಲ್ಲಾ ಅಭ್ಯಾಸ ಮಾಡ್ತಾ ನಾಳೆ ನಾಳಿದ್ದಿನಲ್ಲಿ ಈ ಚಿದಂಬರ ರಹಸ್ಯ ಬಿಡಿಸ್ತೀನಿ ನೋಡಿ. ಏನು ಮಾಡಲಿ ಆ ಶಾಂತಗೌಡರು ಈ ಬಗ್ಗೆ ನಾಕು ಮಾತಾಡಿದ್ದರೆ ನನ್ನ ಕೆಲಸ ತುಂಬಾ ಸುಲಭ ಆಗ್ತಿತ್ತು ಅಂದರು" ಎಂದ.

ಅಂಗಾಡಿ "ಸರಿ ಜಯರಾಂ ಇಲ್ಲಿ ಯಾರಿಂದ ಈ ಕೊಲೆ ನಡೆದಿರಬಹುದು ಅನ್ನೋದನ್ನ ಅಸ್ಪಷ್ಟವಾಗಿ ಬಿಟ್ಟು ಬಿಟ್ಟಿದ್ದೀರಲ್ಲಾ. ಮಿಕ್ಕೆಲ್ಲಾವನ್ನೂ ವಿವರವಾಗಿ ಹೇಳಿ ಇದನ್ನ ಹಾಕೆ ಹಾಗೆ ಬಿಟ್ಟಿರಿ. ನನ್ನ ಮುಖ್ಯ ವಿಮರ್ಶೆ ನಿಮ್ಮ ಕಥೆ ಬಗ್ಗೆ ಇದು" ಎಂದು ಜಯರಾಮನತ್ತ ತಿರುಗಿ ಹೇಳಿದ.

"ನನಗೂ ಕೊನೆಗೆ ಹಾಗೇ ಅನ್ನಿಸಿತು ಅಂಗಾಡಿ. ಇದು ಅಂತಿಮವಾಗಿ ಆಪಾದನೆ ಹೊರಿಸೋ ವಿಷಯ ನೋಡಿ. ಹಾಗಾಗಿ ನಿಧಾನವಾಗಿ ಕಥೆ ಕಲ್ಪಿಸಿದೆ. ಜೊತೆಗೆ ಈಗ ತಾನೇ ನೀವು ಹೇಳಿದ ಹಾಲೋಜನ್ ಬಲ್ಪಿನ ವಿಷಯದಿಂದ ನನ್ನ ಕತೆ ಇನ್ನಷ್ಟು ಸ್ಪಷ್ಟವಾಗಿ ಮುಂದುವರಿಯಬಲ್ಲದು. ಅದು ನಡೆದದ್ದು ಮೆಜೆಶಿಯನ್ ಮುತ್ತು ಮುಖಾಂತರ" ಜಯರಾಮ ನಿರ್ಯೋಚನೆಯಿಂದ ನುಡಿದ.

ಸಿದ್ದಪ್ಪ ಅಪ್ರತಿಭನಾಗಿ "ಏನ್ರಿ ಜಯರಾಂ? ನೀವು ನಿಮ್ಮ ಕಲ್ಪನೆಯನ್ನು ಜವಾಬ್ದಾರಿಯುತವಾಗಿ ಹರಿಯಬಿಡಿ. ನಿಮ್ಮ ತೀರ್ಮಾನದ ಅಂತಿಮ ಪರಿಣಾಮ ಏನು ಅನ್ನೋದನ್ನು ನೀವು ಅರಿತಿದ್ದೀರಾ?" ಎಂದ.



"ನೋ ನೋ ಕಾಲ್ಪನಿಕ ಕತೆಯಲ್ಲಿ ಜವಾಬ್ದಾರಿಯ ಪ್ರಶ್ನೆ ಬರೋದೇ ಇಲ್ಲ. ಜವಾಬ್ದಾರಿ ಇದ್ದೋರು ಯಾರು ಈ ತರ ಸಾಹಿತಿಯ ಕಲ್ಪನೆಯೊಡನೆ ಚೆಲ್ಲಾಟವಾಡುವ ಕೆಲಸಕ್ಕೆ ಹೋಗೊದೇ ಇಲ್ಲ. ನನ್ನ ಕಲ್ಪನೆ ಹೇಳುತ್ತೆ ಇದನ್ನು ಮೆಜಿಶಿಯನ್ ಮುತ್ತು ಮುಖಾಂತರ ಮಾಡಿಸಿದ್ದಾರೆ ಅಂತ. ಮೆಜಿಶಿಯನ್ ಮುತ್ತು ಹಾಸನದ ಪ್ರವಾಸಿ ಹೋಟೆಲಿನ ಎದುರು ಪ್ರವಸಿಗಳಿಗೆ ಮ್ಯಾಜಿಕ್ ತೋರಿಸುತ್ತಾ ಇರ್ತಾನೆ. ವಿದೇಶೀಯ ಅನೇಕ ತಂಡಗಳು ಬೇಲೂರು ಹಳೇಬೀಡು ನೋಡಲು ಬರ್ತಾರೆ. ವಿದೇಶಿಯರಿಗೆ ಸುಲಭವಾಗಿ ಸಿಗುವ ಭಾರತೀಯ ಮುತ್ತು ಅಲ್ಲವೆ? ಅವರಿಂದ ಮುತ್ತು ಬಣ್ಣದ ಫಿಲ್ಮುಗಳು ಕ್ಯಾಮರಾಗಳು ಚರ್ಮದ ಚೀಲಗಳು ಪೆನ್‌ಗಳು ವಾಚುಗಳು ಎಲ್ಲವನ್ನೂ ಕೊಂಡು ಹೊರಗಡೆ ಮಾರುತ್ತಾನೆ. ಗೂಢಚರ್ಯೆಗೆ, ಒಳಸಂಚಿಗೆ ಇವನಿಗಿಂತ ಉತ್ತಮ ವ್ಯಕ್ತಿಯೇ ಇಲ್ಲ" ಜಯರಾಂ ಕತೆ ಮುಂದುವರೆಸಿದ.

"ಜೋಗಿಹಾಳರ ಅಪಘಾತದ ಸಮಯದಲ್ಲಿ ಮೆಜೆಶಿಯನ್ ಮುತ್ತು ಇಲ್ಲಿದ್ದನೋ" ಅಂಗಾಡಿ ಕೇಳಿದ.

"ಹೌದು, ಅವರಿಂದ ಪರಿಸರ, ವನ್ಯಮೃಗಗಳ ನಾಶ ಎಲ್ಲ ಆಗ್ತಿದೆ ಅಂತ ಈ ಗೋಸಾಯಿಗಳ ವಿರುದ್ಧ ಸಿದ್ದಪ್ಪ ಒಂದು ಯುದ್ದವೇ ಆರಂಭಿಸಿದ್ದ" ಹೆಗ್ಡೆ ಹೇಳಿದ.

"ಅಷ್ಟೇ ಅಲ್ಲ" ಎಂದ ಮಹಮದ್. ಎಲ್ಲ ಅವನತ್ತ ತಿರುಗಿದರು. ಮಹಮದ್‌ನ ಮುಖ ನೋಡಿ ಎಲ್ಲ ಗಾಬರಿಯಾದರು. "ಅಷ್ಟೇ ಅಲ್ಲ" ಎಂದು ಮತ್ತೊಮ್ಮೆ ಮಹಮದ್ ಹೇಳಿ ಸುಧಾರಿಸಿಕೊಳ್ಳತೊಡಗಿದ. ಅವನ ಮುಖ ಬಿಳಿಚಿಕೊಂಡಿತ್ತು. ತುಟಿ ನಡುಗುತ್ತಿದ್ದವು. ಸುತ್ತ ಕುಳಿತಿದ್ದವರೆಲ್ಲ ಅವನ ಅವಸ್ಥೆಯನ್ನು ಕಂಡು ಕಕ್ಕಾಬಿಕ್ಕಿಯಾದರು. ಆಟ ಎಂದು ಆರಂಭಿಸಿದ ಪ್ರಯೋಗ ಒಂದು ಬರುಬರುತ್ತಾ ಗಾಢವಾಗತೊಡಗಿತ್ತು. "ಏನು ಮಹಮದ್, ಇಷ್ಟೊಂದು ಉದ್ವೇಗ?" ಎಂದು ಅಂಗಾಡಿ ಕೇಳಿದ್ದಕ್ಕೆ ಒಂದು ಕ್ಷಣ ತಡೆಯಿರೆಂದು ಮಹಮದ್ ಸನ್ನೆ ಮಾಡಿದ.

ಮಹಮದ್ ಕೊಂಚ ಚೇತರಿಸಿಕೊಂಡು ಹೇಳಿದ.

"ಜಯರಾಂ ನೀವು ಹೇಳ್ತಿರೋದು ಯಾರೋ ನನಗೆ ಕತೆ ತರ ಕಾಣ್ತಿಲ್ಲ. ಅಲ್ಲಾ ನಿಮ್ಮ ಬಾಯಲ್ಲಿ ಏನನ್ನೋ ಹೇಳಿಸ್ತಿದ್ದಾರೆ. ಆ ಮೆಜಿಶಿಯನ್ ಮುತ್ತು ಮತ್ತೆ ಬಂದಿದ್ದಾನೆ. ಈವತ್ತು ನೋಡಿದೆ. ಅದೂ ಒಂದುವಿಚಿತ್ರ ಪರಿಸ್ಥಿತೀಲಿ. ಇದು ನನ್ನ ಪ್ರಾಣ ಹೋಗೋ ವಿಷ್ಯ. ನೀವು ಯಾರಿಗೂ ಹೇಳಬಾರದು ಅಷ್ಟೆ"

ಎಂದು ಅವರನ್ನು ಕೇಳಿಕೊಂಡು ಅವನ ಬೆನ್ನಿಗೆ ಚೂರಿ ತೋರಿಸಿ ಅಂಗಾಡಿ ವಿಷಯ ಕೇಳಿದ್ದು, ಅನಂತರ ಮುತ್ತು ಕಂಡಿದ್ದು ಎಲ್ಲಾ ಹೇಳಿದ. ಆದರೆ ಚೂರಿ ತೋರಿಸಿ ಬೆದರಿಸಿದವರು ಬೇರೆಯವನಿರಬೇಕೆಂಬ ತನ್ನ ಸಂಶಯವನ್ನೂ ತಿಳಿಸಿದ.

ಎಲ್ಲರೂ ಶಂಕೆ ಕಾತರಗಳಿಂದ ಮಹಮದ್ ಹೇಳಿದ ಕತೆ ಕೇಳಿದರು. ಮಹಮದ್ ಇದನ್ನೆಲ್ಲಾ ಹೇಳುವಾಗ ಭೀತಿಯಿಂದ ಸಣ್ಣಗೆ ನಡುಗುತ್ತಿದ್ದ.

ಜಯರಾಂ ಎಲ್ಲಾ ಕೇಳಿದ ನಂತರ “ಇನ್ನೊಂದು ವಾಸ್ತವ ತುಣುಕು ಸಿಕ್ಕಿದೆ. ಮಿತ್ರರೆ. ನನ್ನ ಕತೆ ಇನ್ನೊಂದು ಹೆಜ್ಜೆ ಮುಂದುವರಿಸಿ ಭೂತಕಾಲದಿಂದ ವರ್ತಮಾನಕ್ಕೆ ತಂದುಬಿಡುತ್ತಿದ್ದೇನೆ. ಮೆಜಶೀಯನ್ ಮುತ್ತು ಮತ್ತು ಯಾಕೆ ಬಂದಿದ್ದಾನೆ? ಅಂಗಾಡಿಯನ್ನು ಕೊಲ್ಲಲಾಗಲೀ ಮಹಮದ್ ಕೊಲ್ಲಲಾಗಲಿ ಅಲ್ಲ. ನನ್ನ ಕತೆ ನಿಜವಾಗಿಯೂ ವಾಸ್ತವಕ್ಕೆ ತೀರಾ ಹತ್ತಿರಾಗಿ ಸಾಗಿಬರುತ್ತಿರೋದು ನಿಜವಾದರೆ ಈ ಸಾರಿ ಅವನ ಗುರಿ ಯಾರು ಗೊತ್ತೆ? ಪ್ರೊಫೆಸರ್ ಪಾಟೀಲ್. ಕೆಸರೂರು ಹೈಬ್ರೀಡಿನ ಚಿದಂಬರ ರಹಸ್ಯ ಪಾಟೀಲರು ಬಿಡಿಸೊದಕ್ಕೆ ಮೊದಲು ಪಾಟೀಲರ ಕತೆ ಮುಗಿಯುತ್ತದೆ.”

ಜಯರಾಂ ಮಾತು ಕೇಳಿ ಎಲ್ಲರಿಗೂ ಆಕಾಶ ಕಳಚಿ ತಲೆ ಮೇಲೆ ಬಿದ್ದಂತಾಯ್ತು. ಮಹಮದ್ ಬೆನ್ನಿಗೆ ಚೂರಿ ತೋರಿಸಿ ಬೆದರಿಸಿದರೆಂದು ಕೇಳಿದಾಗಲೇ ಎಲ್ಲರಿಗೂ ಈ ಕತೆ ಯಾಕೋ ಆಟ ಎಂದು ಶುರು ಮಾಡಿದ್ದು ವಿಕೋಪಕ್ಕೆ ಹೋಗುತ್ತಿದೆ. ಈ ಕತೆ ಕೇವಲ ಕತೆಯಾಗಿ ಉಳಿಯದೆ ಕೆಸರೂರಿನ ಜೀವಸ್ಪಂದನದಲ್ಲಿ ಏನನ್ನೋ ಕಲಕುತ್ತಿದೆ ಎಂದೆನಿಸಿತ್ತು. ಈಗ ಜಯರಾಮನ ಕತೆಯ ಅಂತ್ಯ ಕೇಳಿ ಈ ಕತೆ ತಮ್ಮ ಕುತ್ತಿಗೆಯನ್ನೇ ಸುತ್ತಿ ಬರುತ್ತಿದೆ ಎಂದುಕೊಂಡರು.

“ಹಾಗಾದರೆ ಈ ವಿಷಯ ಮೊದಲು ನಾವು ಪಾಟೀಲರಿಗೆ ತಿಳಿಸಬಿಡೋದು ಒಳ್ಳೆದಲ್ಲವೇ?” ಮಹಮದ್ ಹೇಳಿದ.

ಅವರೆಗೂ ಸುಮ್ಮನೆ ಇವರ ಮಾತುಕತೆಗಳನ್ನೆಲ್ಲಾ ಕೇಳುತ್ತಾ ಕುಳಿತಿದ್ದ ರಾಮಚಂದ್ರ ಒಂದು ಬಗೆಯ ವಿಷಾದದಲ್ಲಿ ಹೇಳಿದ “ಸಾಕು ಮಾರಾಯ ನಿನ್ನ ಕತೆ. ನಿನ್ನನ್ನು ಕತೆ ಹೇಳು ಅಂತ ಕೇಳಿದ್ದಕ್ಕೆ ನೀನ್ಯಾಕೋ ನಮ್ಮ ಮೇಲೆ ಮುಯ್ಯಿ ತೀರಿಸಿಕೊಳ್ಳೋ ಹಾಗೆ ಕಾಣ್ತಿದೆ ಕಣಯ್ಯ. ಈಗ ನಿನ್ನ ಕತೆ ಸರ್ವಾಂಗ ಸಂಪೂರ್ಣ ಆಗಬೇಕಾದರೆ ಪಾಟೀಲರ ಬಲಿಯಾಗಬೇಕು! ಎಲ್ಲಿಗೆ ತಂದಿಟ್ಟೆ ನೋಡು! ಪಾಟೀಲರ ಹತ್ತಿರ ಹೋಗಿ ಏನು ಹೇಳ್ತೀರಿ? ಜಯರಾಂ ಹೀಗೊಂದು ಕತೆ ಹೇಳಿದಾನೆ ಅದರಲ್ಲಿ ಕೊನೆಯಲ್ಲಿ ನೀವು ಖೂನಿಯಾಗ್ತೀರಿ ಅಂತಾನ? ಸ್ವಲ್ಪ



ಯೋಚನೆ ಮಾಡಿ. ನಾವು ಮಾಡ್ತಿರೋದೆಲ್ಲ ಈ ಕಥೆಯ ವಲಯದಿಂದ ಅಚೆ ಇರೊರಿಗೆ ಎಂಥಾ ಮಂಗಾಟವಾಗಿ ಕಾಣಬಹುದೂ ಅಂತ? ನಮ್ಮ ಪ್ರಯೋಗ ಪರೀಕ್ಷೆಗಳ ಹುಚ್ಚಾಟನೆಲ್ಲ ನಾವು ನಾಲ್ಕೈದು ಜನದೊಳಗೆ ಇಟ್ಟುಕೊಳ್ಳೊದು ವಾಸಿ ಅಂತ ಕಾಣ್ತದೆ.”

ಜಯರಾಮ “ಅಯ್ಯಾ ರಾಮಚಂದ್ರ ಕಥೆ ವಲಯದ ಹೊರಗಿರೋರಿರಲಿ ಕಥೆ ಹೇಳಿದ ನನಗೇ ಮಂಗಾಟವಾಗಿ ಕಾಣ್ತದೆ ಕಣಯ್ಯ ಆಗಾಗ. ಆದರೆ ಅಂಗಾಡಿ ಅದಕ್ಕೆ ಪುರಾವೆ ಒದಗಿಸುತ್ತಾ ಇರೋದು, ಮಹಮದ್ ಹೇಳಿದ್ದು, ಎಲ್ಲಾ ನೋಡಿದರೆ ಈ ಕಥೆ ವಲಯದಿಂದ ಹೊರತೆ ಇರೋರು ಕೆಸರೂರಿನಲ್ಲಿ ಕಡಿಮೆ ಜನ ಅಂತ ಅನ್ನುತ್ತೆ” ಎಂದ.

“ನನಗೆ ಮಂಗಾಟ ಅಂತ ಅನ್ನಿಸೋದಿಲ್ಲ ರಾಮಚಂದ್ರ. ಯಾಕೆಂದರೆ ನನಗೆ ಒಂದು ಉದ್ದೇಶ ಇದೆ. ನನ್ನ ಮಟ್ಟಿಗೆ ಇದೊಂದು ಉದ್ದೇಶಪೂರ್ವಕ ಪ್ರಯೋಗ. ಹೇಗೂ ನಾನು ಈ ತನಿಖೆಯಲ್ಲಿ ಮುಂದುವರೆಯಲಾರದ ಸ್ಥಿತೀಲಿದ್ದೆ. ಈಗ ಈ ಕಥೆ ಸುಳ್ಳಾದರೂ ನನಗೆ ಪ್ರಯೋಜನ. ನಿಜ ಆದರೂ ನನಗೆ ಪ್ರಯೋಜನ” ಎಂದ ಅಂಗಾಡಿ.

ರಾಮಚಂದ್ರ ಜಯರಾಮನತ್ತ ತಿರುಗಿ ಕೇಳಿದ “ನಿನ್ನ ಉದ್ದೇಶ ಏನಯ್ಯ ಈ ನಿನ್ನ ಕತೆ ಹೇಳಿ ಗಾಬರಿಗೊಳಿಸುತ್ತಿರುವ ಕಾರುಬಾರಿನ ಹಿಂದೆ?”

“ಕ್ವೆಸ್ಟ್ ಫಾರ್ ಟ್ರೂತ್. ಸತ್ಯಾನ್ವೇಷಣೆ. ನನ್ನದು ನಿಜವಾದ ಅರ್ಥದಲ್ಲಿ ಚಿದಂಬರ ರಹಸ್ಯವನ್ನು ಭೇದಿಸುವುದು. ಜೋಗಿಹಾಳರು ಖೂನಿಯಾದರೋ ಇಲ್ಲವೋ ಅನ್ನುವ ಅಂಗಾಡಿಯ ಸತ್ಯಾನ್ವೇಣೆಗಿಂತ ಭಿನ್ನವಾದದು. ಕೆಸರೂರಿನ ಹೈಬ್ರೀಡ್ ರಹಸ್ಯ ಭೇದಿಸುವ ಪಾಟೀಲರ ಸತ್ಯಾನ್ವೇಷಣೆಗಿಂಥ ಭಿನ್ನವಾದದ್ದು. ಜೀವನದ ಸ್ವರೂಪ ಏನು? ಅನುಭವ ಮತ್ತು ಅವುಗಳಿಗೆ ಮೂಲಾಧಾರವಾದ ಮಾನವನ ನಡವಳಿಕೆಗಳ ಸ್ವರೂಪ ಏನು? ಇದೆ ನನ್ನ ಚಿದಂಬರ ರಹಸ್ಯ.”

“ಹಾಗಂದರೆ ಇದು ಸಾಹಿತ್ಯಕ್ಕೆ ಸಂಬಂಧಿಸಿದ ಪ್ರಶ್ನೆ ಅಲ್ಲ.”

“ಅಲ್ಲ, ನನ್ನ ಪ್ರಶ್ನೆ ನೀನು ಎತ್ತಿದ್ದೀಯಲ್ಲ ಮನುಷ್ಯ ಪ್ರಜ್ಞೆ ನಿಜವಾಗಿ ಸ್ವತಂತ್ರವೋ? ಅಥವ ಅದೊಂದು ಭ್ರಮೆಯೋ? ಇಡೀ ಗ್ರಹತಾರೆ ನಿಹಾರಿಕೆಗಳ ಈ ವಿಶ್ವವೆಲ್ಲಾ ತಮ್ಮ ತಮ್ಮ ನಿಯಮಕ್ಕೆ ಬದ್ಧವಾಗಿ ವರ್ತಿಸುತ್ತಿವೆ. ಪ್ರತಿಯೊಂದು ಅಣು ಪರಮಾಣುವಿನಲ್ಲೂ ಎಲೆಕ್ಟ್ರಾನ್‌ಗಳು ಪ್ರೋಟಾನ್‌ಗಳೂ ತಮ್ಮ ನಿಯಮಗಳ ಸರಹದ್ದಿನಲ್ಲಿ ಸುತ್ತುತ್ತಿವೆ. ಅಂಥವರಲ್ಲಿ ಇದರಿಂದ ಹೊಮ್ಮಿದ ಈ ಪ್ರಜ್ಞೆ ನಿಯಮಾತೀತವೆ? ನಿಜವಾಗಿಯೂ ಸ್ವತಂತ್ರವೆ? ಇದು ನಿಜಕ್ಕೂ ನನ್ನನ್ನು ಇದಕ್ಕಿಂತ

ಅನ್ಯ ಉದ್ದೇಶ ಯಾವುದೂ ಇಲ್ಲ ಕಣಯ್ಯಾ" ಎಂದು ತನ್ನ ಉದ್ದೇಶವನ್ನು ಸಂಕ್ಷಿಪ್ತವಾಗಿ ವಿವರಿಸಿದ ಜಯರಾಂ.

"ಅದಿರಲಯ್ಯ, ಈಗ ನಿನ್ನ ಜ್ಞಾನಯೋಗ ಮುಟ್ಟಿರೋ ಹಂತ ಯಾವುದು ನೋಡು. ನಿನ್ನ ಅನ್ವೇಷಣೆಯ ಸತ್ಯಾಸತ್ಯ ಪರೀಕ್ಷಿಸಲು ನಾವು ಪಾಟೀಲರ ಖೂನಿಯನ್ನು ನಿರೀಕ್ಷಿಸುತ್ತಾ ಕುಳಿತುಕೊಳ್ಳಬೇಕಾದ ಪರಿಸ್ಥಿತಿ ಬಂದಿದೆಯಲ್ಲಾ" ರಾಮಚಂದ್ರ ಕೇಳಿದ.

"ಛೆ!ಛೆ! ನಾವಿರೋದು ಯಾಕ್ರಿ ಇಂಟೆಲಿಜೆನ್ಸ್ ಆಫೀಸರು" ಎಂದ ಅಂಗಾಡಿ.

ಜಯರಾಮ "ರಾಮಚಂದ್ರ ಒಂದು ವಿಷಯ ಮರ್ತಿದೀಯ ಕಣಯ್ಯ ನೀನು. ನಾವೀಗ ಕತೆಯ ವರ್ತಮಾನಕ್ಕೆ ಬಂದಿದೀವಿ ಕಣಯ್ಯ. ನಿನಗೆ ಈಗ ನನ್ನ ಕತೆ ಗೊತ್ತಿರೋದಷ್ಟೇ ಅಲ್ಲವಯ್ಯಾ. ಈಗ ನೀನು ಕತೆಯ ಕತೆಯೂ ಗೊತ್ತಿರೋ ಪಾತ್ರಧಾರಿ ಅಲ್ಲೇನಯ್ಯಾ. ಪಾಟೀಲರನ್ನು ಸಾವಿನ ದವಡೆಯಿಂದ ಪಾರುಮಾಡೊ ನನ್ನ ಕತೆಯನ್ನೀಗ ನೀವು ಮುಂದುವರಸಬೇಕಾಗಿದೆ" ಎಂದ.

ರಾಮಚಂದ್ರ ದೊಡ್ಡದಾಗಿ ನಕ್ಕ. ಎಲ್ಲ ಅವನ ನಗು ನೋಡಿ ಚಕಿತರಾದರು. "ಜಯರಾಮ್ ನೀನು ಹೇಳಿದ ಕತೆ ನಂಬಿಕೊಂಡು ಹೋಗಿ ಪಾಟೀಲರನ್ನು ಪಾರು ಮಾಡೋದಿರಲಿ. ಅದಕ್ಕಲ್ಲಾ ನಾನು ಆ ಪ್ರಶ್ನೆ ಹಾಕಿದ್ದು. ಇಲ್ಲಿ ಇರೋ ದೊಡ್ಡ ಗೊಂದಲ ಏನೆಂದು ನಿನಗೆ ಇನ್ನೂ ಸ್ಪಷ್ಟವಾಗಿಲ್ಲ ಕಣೋ. ನಿನ್ನ ಕತೆ ಪ್ರಕಾರನೇ ನಂಬಿಕೊಂಡು ಹೋಗಿ ಪಾಟೀಲರನ್ನು ಸಾವಿನಿಂದ ಪಾರು ಮಾಡಿದೆವೂ ಅನ್ನು. ಅದರಿಂದ ಬರೋ ಇತ್ಯರ್ಥ ಇಷ್ಟೇ. ಮನುಷ್ಯ ಪ್ರಜ್ಞೆ ಅನ್ನೋದು ಸ್ವತಂತ್ರ. ಯಾವುದೇ ಒಂದು ವಿಧಿ ಅಥವಾ ನಿಯಮಗಳ ಪ್ರಕಾರ ಮಾನವ ಪ್ರಜ್ಞೆ ವರ್ತಿಸೋದು ಸುಳ್ಳು ಅಂತಾಗುತ್ತೆ. ಹೌದೋ ಅಲ್ಲವೋ."

"ಹೌದು ಹೌದು" ಎಂದರು ಎಲ್ಲ.

"ಹಾಗಾದರೆ ಮಾನವ ಪ್ರಜ್ಞೆ ಸ್ವತಂತ್ರ ಆದರೆ ಅದರ ವರ್ತನೆಗೆ ಒಂದು ನಿಯಮವೇ ಇಲ್ಲಾಂತ ಆದರೆ, ವಾಸ್ತವದ ತುಣುಕುಗಳನ್ನು ಸೇರಿಸಿ ಕರಾರುವಾಕ್ಕಾಗಿ ನಡೆದುದನ್ನು ಕಲಾವಿದ ಪುನಃ ಸೃಷ್ಟಿಸಬಹುದು ಅನ್ನೋದು ಸುಳ್ಳಾಗುತ್ತೇ. ನಿನ್ನ ಕತೆ ನಂಬಿದೋರೆಲ್ಲಾ ಮೂರ್ಖರು ಅಂತಾಗುತ್ತೆ."

"ನಾವು ಸುಮ್ಮನೆ ಇದ್ದರೋ?"ಅಂಗಾಡಿ ಕೇಳಿದ.

"ನಾವು ಸುಮ್ಮನಿದ್ದರೆ ನಾವು ಜಯರಾಮನ ಕತೆಯನ್ನು ಸೀರಿಯಸ್ಸಾಗಿ ನಂಬಿಯೇ ಇಲ್ಲಾಂತ ಆಗುತ್ತೇ."

ರಾಮಚಂದ್ರನ ವಾದ ತರ್ಕಗಳ ಮೃತ್ಯುಬಂಧದಲ್ಲಿ ಎಲ್ಲರಿಗೂ ತಲೆಚಿಟ್ಟು



ಹಿಡಿದುಹೋಯ್ತು. ಎಲ್ಲರೂ ಸುಮ್ಮನೆ ತಲೆ ಮೇಲೆ ಕೈ ಹೊತ್ತು ಚಿಂತಿಸುತ್ತಾ ಕುಳಿತರು. ಸುಮ್ಮನಿರಲಾರದೆ ಜಯರಾಮನಿಗೆ ಕತೆ ಹೇಳು ಅಂತ ಹೇಳಿ ಅನಂತರ ಆ ಕತೆಗೆ ಅವರೇ ತಬ್ಬಿಬ್ಬಾಗಿ ಗಾಬರಿ ಬಿದ್ದು ತಾವೇ ಸೃಷ್ಟಿಸಿದ ಚಕ್ರವ್ಯೂಹದೊಳಗೆ ಸಿಕ್ಕಿಕೊಂಡು ಕುಳಿತಿದ್ದರು.

"ನೋಡ್ರಿ ತರ್ಕ, ಇತಿಹಾಸ, ಜೀವನದ ಸ್ವರೂಪ. ಇದೆಲ್ಲಾ ಪ್ರತಿಯೊಬ್ಬನ ಜೀವನದ ಕೊಟ್ಟ ಕೊನೆಯಲ್ಲಿ ತೀರ್ಮಾನವಾಗೋದು. ಈಗ ನಾವೆಲ್ಲಾ ನಮಗೆ ಹೇಗನಿಸುತ್ತೋ ಹಾಗೆ ವರ್ತಿಸೋಣ. ನಮ್ಮ ವರ್ತನೆ ವರ್ತಮಾನದಿಂದ ಸರಿದು ಗತಕಾಲದ ಇತಿಹಾಸ ಆದನಂತರ ಅದರಿಂದ ಎಂಥ ತೀರ್ಮಾನ ಹೊಮ್ಮುತ್ತೋ ನೋಡೋಣ. ಏನ್ರೀ ಅಂಗಾಡಿ" ಎಂದು ಕಂಗಾಲಾಗಿ ಕುಳಿತಿದ್ದ ಅಂಗಾಡಿಗೆ ಜಯರಾಮ ಹೇಳಿ ರಾಮಚಂದ್ರನ ಬಗೆಹರಿಯದ ಜಟಿಲ ತರ್ಕಕ್ಕೆ ವಿರಾಮ ಹಾಕಿದ.

"ರೈಟ್ ಸಾರ್! ಕರೆಕ್ಟ್ ನೀವು ಹೇಳೋದು, ನಾನಂತೂ ನನಗೀಗ ತೋಚಿದ ಹಾಗೆ ಮಾಡುತ್ತೇನೆ. ಅದು ಮನುಷ್ಯನ ಮನಸ್ಸು ಸ್ವತಂತ್ರ ಅಂತನಾದರೂ ಪ್ರತಿಪಾದಿಸಲಿ. ವಿಧಿ ನಿಯಮಗಳ ಅಧೀನ ಅಂತಾನಾದರೂ ಪ್ರತಿಪಾದಿಸಲಿ" ಎಂದು ಅಂಗಾಡಿ ಸುಮ್ಮತಿ ಸೂಚಿಸಿದ.



# ಅಧ್ಯಾಯ ೨೬



ಆಚಾರಿಗೆ ಎಂಟಮಾಲಿಜಿಸ್ಟ್ ಸಿದ್ದಪ್ಪನ ಮೇಲೆ ಕಡುಕೋಪ ಬಂದಿತ್ತು. ಏಕೆಂದರೆ ಗೋಸಾಯಿಗಳನ್ನು ಕಂಡರೆ ಸಿದ್ದಪ್ಪ ಹೆಡೆ ಎತ್ತಿದ ನಾಗರಹಾವಿನಂತೆ ಆಡುತ್ತಿದ್ದ. ಸಿದ್ದಪ್ಪ ಇಡೀ ಕೆಸರೂರಿನ ವನಸಿರಿ ಹೇಗೆ ಹಲವಾರು ವರ್ಷಗಳಲ್ಲಿ ನಾಶವಾಗುತ್ತಾ ಬಂದಿತ್ತು ಎಂಬುದನ್ನು ಕಣ್ಣಾರೆ ಕಂಡವನಾಗಿದ್ದ. ಒಂದು ಕಡೆ ಸುಲೇಮಾನ್ ಬೇರಿಯಂಥ ಖದೀಮರು ಕೋಟಿಗಟ್ಟಲೆ ಲಾಭ ಮಾಡಲು ಕಾಡನ್ನು ಸೂರೆಹೊಡೆಯುತ್ತಿದ್ದರು. ಇನ್ನೊಂದು ಕಡೆ ಬಡವರು ಜೀವನಕ್ಕಾಗಿ ಅದನ್ನು ನಾಶಮಾಡುತ್ತಿದ್ದರು. ಸುಲೇಮಾನ್ ಬೇರಿಯಂತೆಯೇ ಗೋಸಾಯಿಗಳೂ ಅದರಲ್ಲಿ ಪಾಲುದಾರರಾಗಿದ್ದರು. ಊರು ಪಕ್ಕದ ಕಾಡುಗಳನ್ನು ಪೊದೆ ಪೊದರುಗಳನ್ನು ಸವರಿ ಸೌದೆ ಮಾಡಿ ತಂದು ಮಾರುತ್ತಿದ್ದರು. ಬಿದಿರು ವಾಟೆ ಇತ್ಯಾದಿಗಳನ್ನು ಕಡಿದು ಲಾರಿಗಳಲ್ಲಿ ಪೇಟೆಗಳತ್ತ ಸಾಗಿಸುತ್ತಿದ್ದರು. ಅದರೊಳಗೆ ಆಶ್ರಯ ಪಡೆದ ಮೊಲ, ಕೋಳಿ, ಕಾಡುಕುರಿಗಳನ್ನು ಗೋಣ್ಮುರಿದು ಮಾರಿದ್ದರು. ಮಳೆಗಾಲದಲ್ಲಿ ಈ ಬೋಳು ಬೋರೆಯ ಮೇಲ್ಮೈಯೆಲ್ಲಾ ತೊಳೆದು ಹೋಗಿ



ಅವು ಬರಿಯ ಬೆಣಚುಕಲ್ಲಿನ ಗುಡ್ಡಗಲಾಗತೊಡಗಿದ್ದವು. ಕೆಸರೂರಿನ ಸಮೀಪದ ನದಿಗಳ ಗುಂಡಿಗಳಿಗೆಲ್ಲ ನಾರು ಬೇರು ಕಾಯಿಗಳನ್ನು ಅರೆದು ಕಲೆಸಿಬಿಡುತ್ತಿದ್ದರು. ಸತ್ತ ಮೀನುಗಳನ್ನು ಅವರು ಒಯ್ದನಂತರ ದಿನಗಟ್ಟಲೆ ಗಿಡುಗ ಹದ್ದುಗಳು ಕ್ರಮೇಣ ಸಾಯುವ ಮೀನುಗಳಿಗಾಗಿ ನದಿಯುದ್ದಕ್ಕೂ ಹಾರಾಡುತ್ತಿರುತ್ತಿದ್ದುವು. ಅವರು ನೀರಿಗೆ ಕಲೆಸಿದ ವಿಷ ಹೋದಲ್ಲಿಯವರೆಗೂ ಮೀನುಗಳು ಸಾಯುತ್ತಲೇ ಇರುತ್ತಿದ್ದವು.

ಗೋಸಾಯಿಗಳ ವಿರುದ್ದ ಸಿದ್ದಪ್ಪನ ಹೋರಾಟ ಅವಿರತವಾಗಿ ನಡೆಯುತ್ತಲೇ ಇತ್ತು. ಅರಣ್ಯ ಇಲಾಖೆಯವರಿಗೂ ಪೋಲೀಸರಿಗೂ ಸಿದ್ದಪ್ಪನ ನಿರಂತರ ತಾಕೀತು ನಡೆದೇ ಇತ್ತು. ಅವರಿಗೆ ಈ ಬಾರಿ ಆಚಾರಿ ಖಾಯಂ ಜಾಗ ಕೊಡಿಸಲು ಯತ್ನಿಸುತ್ತಿರುವುದರ ಅರಿವಿರಲಿಲ್ಲ.

ಗೋಸಾಯಿಗಳ ವಿರುದ್ಧ ಸಿದ್ದಪ್ಪನದು ಕೆಸರೂರಿನಲ್ಲಿ ಒಂಟಿದನಿಯಾಗಿರಲಿಲ್ಲ. ತಮ್ಮ ಕೇರಿಯ ಪಕ್ಕದಲ್ಲೇ ಬಂದು ವಕ್ಕರಿಸಿದ್ದ ಈ ಶನಿಗಳನ್ನು ಕೆಸರೂರಿನ ಹರಿಜನರು ತೀವ್ರ ಅಸಹನೆಯಿಂದ ನೋಡುತ್ತಿದ್ದರು. ಅದಕ್ಕೆ ಕಾರಣ ಹರಿಜನ ಕೇರಿಯಿಂದ ಪ್ರತಿ ವರ್ಷ ಹಲವಾರು ಹೆಣ್ಣುಮಕ್ಕಳು ಓಡಿಹೋಗುತ್ತಿದ್ದುದು. ಇದಕ್ಕೆ ಈ ಗೋಸಾಯಿಗಳೇ ಮೂಲ ಎಂದು ಅವರಿಗೆ ಚೆನ್ನಾಗಿ ತಿಳಿದ ವಿಷಯವಾಗಿತ್ತು. ಗೋಸಾಯಿಗಳು ಊರೂರು ತಿರುಗುವವರಾದ್ದರಿಂದ ಅವರಿಗೆ ದೂರದ ಪೇಟೆಗಳ ಸೂಳೆಗೇರಿಗಳೆಲ್ಲ ಚೆನ್ನಾಗಿ ಪರಿಚಯ. ಗೋಸಾಯಿಗಳು ಆ ಹುಡುಗಿಯರಿಗೆ ಪೇಟೆಯ ಜೀವನದ ಆಸೆ ತೋರಿಸಿ ಅವರನ್ನು ಒಯ್ದು ಸೂಳೆಗೇರಿಗಳಿಗೆ ಸೇರಿಸಿ ಕಮೀಷನ್ ತೆಗೆದುಕೊಳ್ಳುತ್ತಿದ್ದರು. ಹೀಗೆ ಹೋದವರಲ್ಲಿ ಒಂದಿಬ್ಬರು ಹುಡುಗಿಯರು ಹಿಂದಿರುಗಿ ಬಂದವರು ತಾವು ಒಳ್ಳೆ ಸೀರೆ ಧರಿಸಿ ಟ್ರಿಮ್ಮಾಗಿದ್ದುದಲ್ಲದೆ, ತಂದೆ ತಾಯಿಗಳಿಗೆ ಉಡುಗೊರೆ ಹಾಗೂ ಕೊಂಚ ಹಣ ಕೊಟ್ಟಿದ್ದರು. ಇದರಿಂದಾಗಿ ಬಡತನದ ಬೇಗೆಯಲ್ಲಿ ನರಳುತ್ತಿದ್ದ ಅನೇಕ ಹರಿಜನ ಹುಡುಗಿಯರಿಗೆ ಗೋಸಾಯಿಗಳ ಆಗಮನ ಸಂತಸದ ಉತ್ಸಾಹ ತಂದಿತ್ತು. ಇವೆಲ್ಲದರಿಂದಾಗೇ ಹರಿಜನರಿಗೆ ಈ ಗೋಸಾಯಿಗಳ ಮೇಲೆ ಹಗೆತನ ಆರಂಭವಾಗಿದ್ದು. ಹರಿಜನರು ಗೋಸಾಯಿಗಳಿಗೆ ಅಲ್ಲಿ ಜಾಗ ಕೊಡಕೂಡದು. ಅವರಿಗೆ ನಮ್ಮ ಬಾವಿಯ ನೀರು ಮುಟ್ಟಗೊಡಿಸುವುದಿಲ್ಲ ಎಂದು ಪ್ರತಿಭಟಿಸಿ ಸಿದ್ದಪ್ಪನ ದನಿಗೆ ಇವರೂ ದನಿಗೂಡಿಸಿದರು.

ಅಂಗಾಡಿ ರಾಮಚಂದ್ರ ಇವರೆಲ್ಲ ಸಿದ್ದಪ್ಪ ಗೋಸಾಯಿಗಳ ಮೇಲೆ

ಕೋಪಗೊಂಡಿರುವುದಕ್ಕೆ ಜಯರಾಮನ ಕತೆ ಕಾರಣವೆಂದು ಊಹಿಸಿದರು. ಅದೂ ಒಂದು ಕಾರಣವಿರಬಹುದಷ್ಟೇ ಹೊರತು ಸಿದ್ದಪ್ಪನಿಗೆ ಇವರು ಇಡೀ ಪರಿಸರವನ್ನು ಹಾಳುಮಾಡುವ ಕ್ರಿಮಿ ಕೀಟಗಳಂತೆ ಕಾಣುತ್ತಿದ್ದರು. ಗೋಸಾಯಿಗಳು ಪಾಟೀಲರ ಕೊಲೆ ಮಾಡದಂತೆ ನೋಡಿಕೊಳ್ಳುವ ಉಸ್ತುವಾರಿ ಅಂಗಾಡಿ ವಹಿಸಿಕೊಂಡಿದ್ದರಿಂದ ಸಿದ್ದಪ್ಪ ಆ ಕಾರಣಕ್ಕಾಗಿ ಅವರ ಮೇಲೆ ಕತ್ತಿ ಮಸೆಯುತ್ತಿರಲಿಲ್ಲ.

ಆದರೆ ಈಚೆಗೆ ಇದೆಲ್ಲವನ್ನೂಎಚ್ಚರದಿಂದ ಗಮನಸಿತೊಡಗಿದ್ದವ ಇನ್ನೊಬ್ಬನಿದ್ದ. ಅವನೇ ಅಬ್ಬಾಸ್ ಬೇರಿ. ಅವನು ಸುಲೇಮಾನ್ ಬೇರಿಯ ಬಲಗೈ ಬಂಟ. ಅಷ್ಟೇ ಅಲ್ಲ ಅವನೇ ಎಲ್ಲ ವ್ಯವಹಾರಗಳನ್ನೂ ತಿಳಿದು ಕಾರ್ಯ ವಿಧಾನಗಳನ್ನೂ ಕುತಂತ್ರಗಳನ್ನೂ ರೂಪಿಸುತ್ತಿದ್ದವ. ಸುಲೇಮಾನ್ ಬೇರಿಯೊಬ್ಬ ಕೋಟ್ಯಾಧಿಪತಿ ಎಂದು ಎಲ್ಲರೂ ತಿಳಿದಿದ್ದರೂ, ಅವನಿಗೆ ಗೊತ್ತಿತ್ತು ಸುಲೇಮಾನ್ ಬೇರಿಯ ಸದ್ಯದ ಸೂಕ್ಷ್ಮ ಸ್ಥಿತಿ. ಅದಕ್ಕೇ ಅವನು ಸುಲೇಮಾನ್ ಬೇರಿಯಂತೆಯೇ ತೀರಾ ಆತಂಕದಿಂದ ಪರಿಸ್ಥಿತಿಯನ್ನು ಅವಲೋಕಿಸತೊಡಗಿದ್ದ. ಬ್ರೀಡರ್ ಮಹಮದ್‌ನಿಂದ ಅಂಗಾಡಿ ಬಂದುದೇಕೆಂದು ಅವನಿಗೆ ವಾರ್ತೆ ಮುಟ್ಟಿತಾದರೂ ಅವನಿಗೆ ಕೊಂಚವೂ ಅದರಿಂದ ಸಮಾಧಾನವಾಗಲಿಲ್ಲ. ಏಕೆಂದರೆ ಕೆಸರೂರಿನ ವಾತಾವರಣದಲ್ಲೇ ಏನೋ ಅಸಮಾಧಾನ ದ್ವೇಷಗಳು ಹೊಗೆಯಾಡುತ್ತಿತ್ತು. ಏನೋ ಒಂದು ಒತ್ತಡ ಮೆಲ್ಲಗೆ ಅಪಾಯಕಾರಿ ಮಟ್ಟಕ್ಕೆ ಶೇಖರಗೊಳ್ಳುತ್ತಾ ಹೋಗುತ್ತಿತ್ತು. ಇದನ್ನು ಒಂದು ಒತ್ತಡ ಮೆಲ್ಲಗೆ ಅಪಾಯಕಾರಿ ಮಟ್ಟಕ್ಕೆ ಶೇಖರಗೊಳ್ಳುತ್ತಾ ಹೊಗುತ್ತಿತ್ತು. ಇದ್ನನು ತಿಳಿಯಲು ಅರ್ಥಮಾಡಿಕೊಳ್ಳಲು ಅಬ್ಬಾಸ್ ಬೇರಿ ಪ್ರಯತ್ನಿಸುತ್ತಾ ಇದ್ದ. ಯಾರ್‍ಯಾರು ತಮ್ಮೊಡನಿಲ್ಲವೋ ಸಂಗಾತಿಗಳಲ್ಲವೋ ಅವರನ್ನೆಲ್ಲಾ ಅವನು ಸರಳವಾಗಿ ವೈರಿಗಳೆಂದೇ ಪರಿಗಣಿಸುತ್ತಿದ್ದ. ಆದ್ದರಿಂದಲೇ ಕೆಸರೂರಿನ ಆಲಿಪ್ತರಿಗೂ ನಿರ್ಲಿಪ್ತರಿಗೂ ಒಂದಲ್ಲ ಒಂದು ಕಾರಣದಿಂದ ಒಂದಲ್ಲ ಒಂದು ಗುಂಪಿಗೆ ಸೇರಬೇಕಾದ ಒತ್ತಡ ಒದಗುತ್ತಿತ್ತು. ಇಲ್ಲಾ ಸುಲೇಮಾನ್ ಬೇರಿಯ ಕೂಟಕ್ಕೆ ಶರಣಾಗುತ್ತಿದ್ದರು. ಇಲ್ಲವೇ ವೆಂಕಟೇಶ್ವರ ಭಕ್ತರ ಜೊತೆ ಸೇರುತ್ತಿದ್ದರು. ಅಬ್ಬಾಸ್ ಬೆರಿ ದಿನವೂ ಯೋಚಿಸುತ್ತಿದ್ದ. ಹೇಗೆ ಈ ಚದುರಂಗದ ದಾಳ ಮುನ್ನಡೆಸಲು? ಎಂದು.

ಅಂಗಾಡಿಯ ಶಂಕಾಸ್ಪದ ಆಗಮನ!

ಸಿದ್ದಪ್ಪ ಗೋಸಾಯಿಗಳ ವಿರುದ್ಧ ಗಲಾಟೆ ಆರಂಭಿಸಿದ್ದು!

ರಾಮಚಂದ್ರ ಹುಡುಗರ ಪಟಾಲಂ ಒಂದನ್ನು ಸಮಘಟಿಸಿರುವುದು!



ಹರಿಜನರು ಗೋಸಾಯಿಗಳ ಮೇಲೆ ರೂಷಗೊಂಡಿರುವುದು!

ಸರಳವಾಗಿದ್ದ ಕೆಸರೂರಿನ ಸಾಮಾಜಿಕ ಆತೃಪ್ತಿಗಳ ರಂಗಸ್ಥಳ ಇದ್ದಕ್ಕಿದ್ದಂತೆ. ಕ್ಲಿಷ್ಟಗೊಳ್ಳತೊಡಗಿತ್ತು. ಜೋಗಿಹಾಳರ ಸಾವನ್ನು ಕೆಸರೂರಿನ ಹೆಂಡದ ಕಂಟ್ರಾಕ್ಟರ್ ಮೇಲೆ ಎತ್ತಿ ಹಾಕಿ ಇಡೀ ತಾಲ್ಲೂಕಿನ ಅಬ್ಕಾರಿಯನ್ನು ತಾವು ಹಿಡಿದುಕೊಳ್ಳಲು ಸುಲೇಮಾನ್ ಬೇರಿ ಯತ್ನಿಸಿದಲ್ಲಿಂದ ಯಾಕೋ ಕೆಸರೂರಿನ ಪರಿಸ್ಥಿತಿ ನಿಯಂತ್ರಣ ತಪ್ಪುವಂತೆ ಕಾಣತೊಡಗಿತ್ತು ಅಬ್ಬಾಸ್ ಬೇರಿಗೆ. ಇವೆಲ್ಲಾ ಏನು? ಇವು ತಮಗೆ ಪೂರಕವೋ ಅಥವಾ ಮಾರಕವೋ? ಅಬ್ಬಾಸ್ ಬೇರಿ ಯಾವ ಬೀಗದ ಕೈ ಹಾಕಿ ತಿರುಪಿದರೂ ಬೀಗ ತೆಗೆದುಕೊಳ್ಳುವ ಮಟ್ಟಿಗೆ ಕಾಣಲಿಲ್ಲ.

ಗೋಸಾಯಿಗಳಿಗೆ ಮನೆದಳಕ್ಕೆ ಜಮೀನು ಕೊಡಿಸಬೇಕೆಂದು ಆಚಾರಿ ಓಡಾಡುತ್ತಿದ್ದಾನೆ! ಅದು ಡೆಪ್ಯೂಟಿ ಕಮಿಷನರಿಂದ ಸಹಿಯಾಗಿ ಬಂದರೆ ಮಂಜೂರಾಗುವುದೊಂದೇ ಬಾಕಿ! ಬಡವರಿಗೆ ನಿವೇಶನ ಮತ್ತು ಮನೆ ಅನ್ನೋ ಸರ್ಕಾರಿ ಕಾರ್ಯಕ್ರಮಕ್ಕೆ ಇದನ್ನೂ ಸೇರಿಸಿದ್ದಾರಂತೆ! ಇದು ಅಬ್ಬಾಸ್ ಬೇರಿಗೆ ಸಿಕ್ಕ ಮೊದಲ ಸುಳಿವು. ಇದರ ಹಿಂದೆ ಆಚಾರಿ ಓಡಾಡುತ್ತಿದ್ದಾನೆ ಎಂದಾಗಲೂ ಅಬ್ಬಾಸ್ ಬೇರಿಗೆ ಏನೂ ಅರ್ಥವಾಗಲಿಲ್ಲ. ಸೂಳೇಮಗನ ತೆವಲು ಈ ಮಟ್ಟಕ್ಕೆ ಹೋಗಿದೆಯೋ! ಎಂದು ಅಂದುಕೊಂಡ. ಆದರೆ ಒಬ್ಬೊಬ್ಬರಾಗಿ ಅವನ ಹಿಂದೆ ಯಾರ್‍ಯಾರು ಇದ್ದಾರೆ ಎಂದು ಗೊತ್ತಾದಂತೆ ಅಬ್ಬಾಸ್‌ಗೆ ವೈರಿ ಸಮೂಹದ ಚಲನವಲನಗಳು ಅರ್ಥವಾಗತೊಡಗಿದವು. ಇಡೀ ತಾಲ್ಲೂಕು ಬೋರ್ಡ್ ಎದುರಾಳಿಗಳ ಗುಂಪು. ಕೃಷ್ಣೇಗೌಡ, ತಮ್ಮಣ್ಣಗೌಡ, ಶಾಮಾನಾಯ್ಕ, ತಿಮ್ಮಪ್ಪಗೌಡ, ಕಾಲೇಜಿನ ಪ್ರಿನ್ಸಿಪಾಲ್! ಓಹೋ, ಇದು ಬಡವರಿಗೆ ಮನೆ ಕೊಡಿಸೋದಲ್ಲ! ಆಚಾರಿಯ ತೆವಲೂ ಅಲ್ಲ! ಈ ಕದೀಮರ ಕ್ರಮಬದ್ಧ ರಾಜಕಾರಣ. ತಾಲ್ಲೂಕು ಬೋರ್ಡು ಹಿಡಿದುಕೊಳ್ಳಲು ಒಕ್ಕಲಿಗರೂ, ಲಿಂಗಾಯತರೂ, ಬ್ರಾಹ್ಮಣರ ನೇತೃತ್ವದಲ್ಲಿ ಹೊರಟಿದ್ದಾರೆ. ಎಲಾ ಕೇಡಿ ಮಾದರ್‌ಚೋತ್‌ಗಳಾ! ಅಬ್ಬಾಸ್ ಬೇರಿ ಭಯ ರೋಷದಿಂದ ನಡುಗತೊಡಗಿದ. ಈ ಸಾರಿ ತಾಲ್ಲೂಕು ಬೋರ್ಡ್ ನಮ್ಮ ಸಾವು ಬದುಕಿನ ಪ್ರಶ್ನೆ ಎಂದು ಅನೇಕ ಸಾರಿ ಸುಲೇಮಾನ್ ಬ್ಯಾರಿ ಎಚ್ಚರಿಸಿದ್ದ. ಅದಕ್ಕೆ ಕಾರಣ ಕೇವಲ ರಾಜಕೀಯ ಅಧಿಕಾರದ ಆಕಾಂಕ್ಷೆ ಮಾತ್ರವಾಗಿಲಿಲ್ಲ. ಸುಲೇಮಾನ್ ಬೇರಿ ಈ ಬಾರಿ ಅತಿ ದೊಡ್ಡ ಜೂಜಿನಲ್ಲಿ ಹಣ ತೊಡಗಿಸಿದ್ದ. ಅವನ ಬಂಡವಾಳದ ಮುಕ್ಕಾಲು ಭಾಗವೆಲ್ಲ ಇದರಲ್ಲಿ ತೊಡಗಿತ್ತು. ಅವನು ಈ ಬಾರಿ ಇಡೀ ಜಿಲ್ಲೆಗೆ ಒದಗಿಸಲಾಗುವಷ್ಟು ತಾರೆ, ಆಲ, ಬಸರಿ ಮುಂತಾದ ಕಂತ್ರಿ ಮರಗಳಿಂದೆಲ್ಲ ಮರ ಮುಟ್ಟುಗಳನ್ನು ಕುಯ್ಯಿಸಿ ಬಾಗಿಲವಾಡ,

ಕಿಟಕಿ ಚೌಕಟ್ಟು, ರೀಪು, ಪಕಾಸು, ಹಲಗೆಗಳನ್ನು ಜನತಾ ಮನೆಗಳಿಗಾಗಿ ರೆಡಿ ಮಾಡಿಟ್ಟಿದ್ದು ಅಬ್ಬಾಸ್ ಬ್ಯಾರಿಯ ಸಾಮಿಲ್ಲಿನಲ್ಲಿ ಪರ್ವತದಂತೆ ಬಿದ್ದಿತ್ತು. ಈಗ ಗೆದ್ದರೆ ಎಂದೆಂದೂ ಗೆದ್ದಂತೆ ಈಗ ಸೋತರೆ ಎಂದೆಂದೂ ಸೋತಂತೆ. ಕೋಟಿಗಟ್ಟಲೆ ಹಣ ತೊಡಗಿಸಿಯಾಗಿತ್ತು. ಈಗ ವಿರೋಧಿಗಳು ತಾಲ್ಲೂಕು ಬೋರ್ಡು ಹಿಡಿದುಕೊಂಡರೆ ಅನಂತೆ ಇವನ್ನೆಲ್ಲಾ ಕಂತ್ರಿ ಮರ ಎಂದು ನಪಾಸ್ ಮಾಡಿಬಿಡೋದು ಅವರಿಗೆ ಅಸಾಧ್ಯವೇನಲ್ಲ. ಅನಂತರ ಇಡೀ ಜಿಲ್ಲೆಯಲ್ಲೇ ಪುಕಾರಾಗುತ್ತೆ. ಅದಕ್ಕೆಂದೇ ಕುಯ್ಯಿಸಿದ ಒಳ್ಳೆ ಮರಗಳೆಲ್ಲಾ ಎಲ್ಲ ಹೋಯ್ತು ಅಂತ ತನಿಖೆ ಆರಂಭ! ದೇವರೇಗತಿ! ಈ ಆಚಾರಿ, ಹಲಾಲುಖೋರ್ ಬ್ರಾಮಣ ಕುತ್ತಿಗೆಗೇ ತರುತ್ತಿದ್ದಾನೆ!

ಈ ರೀತಿ ಯೋಚಿಸುತ್ತಾ ಹೋದಂತೆ ಪಾಟೀಲರ ಗುಂಪಿನ ಚಟುವಟಿಕೆಗಳು ಅರ್ಥವಾಗಲು ಕಷ್ಟವಾಗುತ್ತಾ ಹೋಯ್ತು ಅಬ್ಬಾಸ್‌ಗೆ. ಅವನು ಎಷ್ಟು ತಲೆಕೆರೆದುಕೊಂಡರೂ ಇವರು ಏನು ಮಾಡುತ್ತಿದ್ದಾರೆ ಎಂದು ಹೊಳೆಯಲಿಲ್ಲ.

ಈ ಅರವತ್ತು ಎಪ್ಪತ್ತು ಜನ ಗೋಸಾಯಿಗಳ ಗುಂಪು ಕೆಸರೂರಿನ ರಾಜಕಾರಣಕ್ಕೆ ಅಷ್ಟೊಂದು ಮುಖ್ಯವೆ? ಮನಸ್ಸು ಮಾಡಿದರೆ ನಾವು ಒಂದು ನೂರು ಜನರನ್ನು ನಮ್ಮ ಕಡೆಗೆ ಮಾಡಿಕೊಳ್ಳೋದಕ್ಕೆ ಆಗೋದಿಲ್ಲವೆ! ಆದರೆ ಆ ಸೂಳೆಮಗ ಹರಕಲು ಕಚ್ಚೆ ಆಚಾರಿ ಎದುರಾಳಿಯಾಗಿರೋವರೆಗೆ ನಾವು ತೀರಾ ಹುಷಾರಾಗಿರಬೇಕು! ಎಂದುಕೊಂಡ ಅಬ್ಬಾಸ್ ಬೇರಿ.



# ಅಧ್ಯಾಯ ೨೭

"ಸಾರ್ ನಿಮ್ಮನ್ನ ಖೂನಿ ಮಾಡೋದಕ್ಕೆ ಒಂದು ಪ್ರಯತ್ನ ನಡೀತಿದೆಯಂತೆ ಸಾರ್!" ಎಂದು ಬ್ರೀಡರ್ ಮಹಮದ್ ಅಂಜುತ್ತಾ ಅಂಜುತ್ತಾ, ಫೈಲುಗಳನ್ನು ಬೆದಕುತ್ತಾ ಕುಳಿತಿದ್ದ ಪಾಟೀಲರಿಗೆ ಹೇಳಿದ. ಮಹಮದ್ದ ಆಫೀಸಿನೊಳಕ್ಕೆ ಬಂದಾಗ ಪಾಟೀಲರು ಮಹಮದ್ ಬಂದುದನ್ನು ಸರಿಯಾಗಿ ಗಮನಿಸಲಿಲ್ಲವೋ ಏನೋ! ತುಂಬಾ ಹೊತ್ತು ತಮ್ಮದೇ ಏನೋ ಕೆಲಸದಲ್ಲಿ ಮಗ್ನರಾಗಿದ್ದರು. ಈ ನಾಲ್ಕು ಮಾತುಗಳನ್ನಾಡಲು ಮಹಮದ್‌ಗಾದ ಕಸಿವಿಸಿ ಅಷ್ಟಿಷ್ಟಲ್ಲ. ತನ್ನ ಮಾತು ಕಿವಿಗೆ ಹಾಕಿಕೊಳ್ಳದೆ ತಮ್ಮ ಕೆಲಸದಲ್ಲೇ ಪಾಟೀಲರು ಮಗ್ನರಾಗಿದ್ದನ್ನು ಕಂಡು ಮಹಮದ್ ಬಂದ ದಾರಿಗೆ ಸುಂಕವಿಲ್ಲ ಎಂಬಂತೆ ಮೆಲ್ಲಗೆ ಸುಳಿವೇ ಕೊಡದೆ ಹಿಂದಕ್ಕೆ ಹೋಗಿಬಿಡೋಣ, ನನಗ್ಯಾಕೆ ಇವೆಲ್ಲ ವೃಥಾ ತರಲೆ ತಾಪತ್ರಯಗಳು! ಎಂದು ಬಾಗಿಲಲ್ಲೇ ನಿಂತು ಒಂದು ಸಾರಿ ಯೋಚಿಸಿದ.

ಆದರೆ ಮಾತು ಆಡಿಯಾಗಿದೆ! ಅದು ಅಕಸ್ಮಾತ್ ಪಾಟೀಲರ ಕಿವಿಗೆ ಬಿದ್ದಿದ್ದು ತಲೆಯೆತ್ತಿ ನೋಡಿದಾಗ ಯಾರೂ ಇಲ್ಲದಿದ್ದರೆ ಯಾವ ಅಶರೀರ ವಾಣಿ ಹೇಳಿತೆಂದು ಯೋಚಿಸುವುದಿಲ್ಲವೆ? ಅಥವಾ ಪಾಟೀಲರಿಗೆ ನಾನು ಬಂದಿದ್ದು ಗೊತ್ತಾಗಿದ್ದರೆ ಬಾಗಿಲ ಬಲಿ ಬಂದು ಹೀಗೆ ಹೇಳಿ ತಲೆ ಎತ್ತುವಷ್ಟರಲ್ಲಿ ಓಡಿಹೋದ ನನ್ನ ನಡವಳಿಕೆ ಬಗ್ಗೆ ಏನು ತಿಳಿದಾರು? ಮಾತಾಡಿದ ಮಹಮದ್ ತಲೆಯೊಳಗೆ ಪಾಟೀಲರು ತಲೆಯೆತ್ತುವಷ್ಟರಲ್ಲಿ ಇಷ್ಟೆಲ್ಲ ನುಗ್ಗಿ ಹೋಯ್ತು.

ಈ ಬಗೆಯ ಕಳವಳದಲ್ಲಿ ಕಾಲ ಹಾಕುವುದು, ಏನು ಮಾಡಿದರೆ ಹೇಗೋ ಎಂದು ಚಿಂತಾಕ್ರಾಂತನಾಗುವುದು ಅವನಿಗೆ ರಕ್ತಗತವಾಗಿತ್ತು. ಅವನು ಪೇಟೆಯಲ್ಲಿ ನಾಗರಿಕ ಸಮಾಜವೊಂದರಲ್ಲಿ ಬದುಕುತ್ತಿದ್ದರೂ ಗೊಂಡಾರಣ್ಯದಲ್ಲಿ ಕ್ರೂರ ಮೃಗಗಳ ನಡುವೆ ಸದಾ ಮೃತ್ಯುಭೀತಿಯಲ್ಲಿ ಬದುಕುತ್ತಿರುವ ಕ್ಷುದ್ರ ಜೀವಿಯಾಗಿದ್ದ. ಕೆಸರೂರಿನ ಅಲ್ಪಸಂಖ್ಯಾತರೆಲ್ಲರ ಪರಿಸ್ಥಿತಿಯೂ ಹೀಗೇ ಇತ್ತೋ ಏನೋ ಹೇಳಬರುವುದಿಲ್ಲ.

ಬ್ರೀಡರ್ ಮಹಮದ್‌ನನ್ನು ಸುಲೇಮಾನ್ ಬೇರಿ ಕಡೆಯವರು ಹೆದರಿಸಿದ್ದ ದಿನದಿಂದ ಮಹಮದ್‌ಗೆ ಗಾಬರಿಯಾಗಿತ್ತು. ಅನಂತರ ಜಯರಾಮನ ಕತೆ

ಕೇಳಿ ಅವನು ಚಿಂತಾಕ್ರಾಂತನಾಗಿದ್ದು. ಯೋಚಿಸಿದಂತೆ, ಯೋಚಿಸಿದಂತೆ ಜಯರಾಮನ ಕತೆ ಅನೇಕ ನೆನಪುಗಳನ್ನೂ ಸಂಗತಿಗಳನ್ನೂ ಮೈಗೂಡಿಸಿಕೊಂಡು ಸ್ನಿಗ್ಧವಾಗುತ್ತಾ ಹೋಯ್ತು. ಅವನಿಗೆ ಸಂಶೋಧನ ಕೇಂದ್ರಕ್ಕೆ ಬರುವ ಹೋಗುವವರೆಲ್ಲರೂ ಖೂನಿ ಮಾಡಲು ಬರುವವರಂತೆಯೇ ಕಾಣತೊಡಗಿದರು. ಜೊತೆಗೆ ತನ್ನ ತಲೆಯ ಮೇಲೆ ಅಪಾದನೆ ಹೊರಿಸಲು ಏನೇನು ಕಾದಿದೆಯೋ ಎಂಬ ಗಾಬರಿ ಬೇರೆ ಆತನಿಗೆ! ಆದ್ದರಿಂದ ಇದನ್ನು ಪಾಟೀಲರಿಗೆ ತಿಳಿಸದಿದ್ದರೆ ತಿಳಿದೂ ತಿಳಿಸದೆ ಇದ್ದುದರಿಂದ ಈ ಖೂನಿ ಕೂಟದಲ್ಲಿ ತಾನು ಭಾಗಿ ಎಂದು ಎಲ್ಲ ಹಿಂದೂಗಳೂ ಆಪಾದನೆ ಮಾಡಿಯೇ ಮಾಡುತ್ತಾರೆಂದು ದಿಗಿಲು ಶುರುವಾಯ್ತು. ಇದನ್ನು ಹೆಗ್ಡೆ ಸಿದ್ದಪ್ಪ ಇಬ್ಬರಿಗೂ ಹೇಳಿದರೆ "ಹೋಗಯ್ಯ ಹೋಗಯ್ಯ! ಆ ಸಿನಿಕ್ ಹತ್ರ ಹೇಳೋದಕ್ಕೆ ನಿನಗೇನು ತಲೆಗಿಲೆ ಕೆಟ್ಟಿದೆಯಾ?" ಎಂದರು.

ಪಾಟೀಲರು ಯಾಕೋ ಅವತ್ತು ತುಂಬಾ ಖುಷಿಯಲ್ಲಿದ್ದರು. ಜೋಗಿಹಾಳರ ನೋಟ್ಸುಗಳ ಅವರ ಅಧ್ಯಯನ ಒಂದು ಹಂತ ತಲುಪಿದಂತಿತ್ತು. ಕೆಸರೂರು ಹೈಬ್ರೀಡ್ ರಹಸ್ಯ ಅವರು ಭೇದಿಸಿಯಾಗಿತ್ತು. ಆದರೆ ಅದನ್ನು ಅವರು ಆಮೂಲಾಗ್ರ ತಿಳಿದನಂತರ ಹೇಳೋಣೆಂದು ಸುಮ್ಮನಿದ್ದರು. ಬ್ರೀಡರ್ ಮಹಮದ್ ಕಡೆಗೆ ತಿರುಗಿ ಏನು ಸಮಾಚಾರ ಎನ್ನುವಂತೆ ನೋಡಿದರು. ಮಹಮದ್ ಕಕ್ಕಾಬಿಕ್ಕಿಯಾಗಿ ಏನು ಹೇಳೋಣೆಂದು ತೋಚದೆ ತಡವರಿಸತೊಡಗಿದ. ಮುಂದೇನನ್ನು ಯಾವ ರೀತಿ ಹೇಳಬೇಕೆನ್ನುವುದೇ ಅವನಿಗೆ ಹೊಳೆಯಲಿಲ್ಲ.

ಪಾಟೀಲರು ಮಹಮದ್ ಬಾಯಿಂದ ಮಾತು ಹೊರಡಲೆಂದು ತುಂಬ ಹೊತ್ತು ಕಾದು ಅನಂತರ "ನಿನಗೆ ಹೇಗಯ್ಯ ಗೊತ್ತಾಯ್ತು ಈ ಸಮಾಚಾರ? ಯಾಕೆ ಹೀಗೆ ಬಿಳಿಚಿಕೊಳ್ತಿದೀಯ, ನಿನ್ನ ಮುಖ ನೋಡಿದರೆ ನಿನಗೇ ಯಾರೋ ಈ ಜವಾಬ್ದಾರಿ ವಹಿಸಿದ ಹಾಗೆ ಕಾಣುತ್ತಲ್ಲಾ" ಎಂದರು.

"ಅಲ್ಲಾ ಸಾರ್ ಹಾಗಂತ ನಮಗೆಲ್ಲಾ ಅನುಮಾನ ಬಂದಿದೆ ಸಾರ್" ಎಂದು ಮಹಮದ್ ಒಣಗಿದ ಬಾಯಿ ಒದ್ದೆ ಮಾಡಿಕೊಂಡು ಹೇಳಿದ.

"ನಿಮಗೆ ಅನುಮಾನ ಬಂದಿರಬಹುದು! ಆದರೆ ನನಗೆ ಖಾತ್ರಿ ಆಗಿದೆ! ಅದಿರ್‍ಲಿ ನಿಮಗೆಲ್ಲಾ ಅಂತ ಅಂದ್ಯಲ್ಲಾ ಯಾರು? ಏನು ಕತೆ, ಹುಟ್ಟಿದೋನು ಒಂದು ದಿನ ಸಾಯಬೇಕು. ಖಾಯಿಲೆ ಬರಹುದು ಖೂನಿ ಆಗಬಹುದು ಅದಕ್ಕೆ ಯಾಕೆ ನೀನು ಗಾಬರಿ ಆಗ್ತೀಯ?" ಎಂದರು ಪಾಟೀಲರು.

"ನಾವು ಅಂದರೆ ನಾನು, ಸಿದ್ದಪ್ಪ, ಹೆಗ್ಡೆ ಮುಂತಾದೋರಿಗೆಲ್ಲಾ ಸಾರ್.



ಇದರ ಹಿಂದೆ ಒಂದು ಕತೇನೆ ಇದೆ ಸಾರ್. ಕತೆ ಅಂದರೆ ನಿಜವಾದ ಕತೆ ಸಾರ್."

"ಒಹೋ ಹಾಗೋ! ಹೇಳಯ್ಯ ಕೇಳೋಣ" ಎಂದರು ಪಾಟೀಲರು. ಅವರಿಗೆ ಕೊಂಚವೂ ಗಾಬರಿ ಆದ ಹಾಗೆ ಕಾಣಲಿಲ್ಲ.

ಮಹಮದ್ ಕೊಂಚ ಸುಧಾರಿಸಿಕೊಂಡು ತನಗೆ ತಿಳಿದುದನ್ನೆಲ್ಲಾ ಪಾಟೀಲರಿಗೆ ಹೇಳಿದ. ಜಯರಾಮನನ್ನು ಅಂಗಾಡಿ ಕತೆ ಹೇಳುವಂತೆ ಕೇಳಿದ್ದು, ಆ ಕತೆ ಹೇಗೆ ಈಗ ತಮಗೆಲ್ಲಾ ಶನಿ ಹಿಡಿದಂತೆ ಪೀಡಿಸತೊಡಗಿದೆ. ಇತ್ಯಾದಿಗಳನ್ನೆಲ್ಲ ತಿಳಿಸಿದ. ಪಾಟೀಲರು ಕೊಂಚವೂ ವಿಚಲಿತರಾಗದೆ ಕತೆ ಕೇಳಿದರು. ಮಹಮದ್ ಕತೆ ಮುಗಿದನಂತರ ಕೇಳಿದರು "ಮಹಮದ್ ಮೊದಲಾಗಿ ನನಗೆ ಈ ಕತೆ ಬಗ್ಗೆ ನಂಬಿಕೇನೆ ಇಲ್ಲ. ಆದರೆ ನನಗೂ ಕೆಲವು ಮೂಲಗಳಿಂದ ಕೊಲೆ ಬೆದರಿಕೆ ಬಂದಿವೆ. ಆದರೆ ಒಂದು ತಿಳ್ಕೊಳಿ, ಇಟ್ ಈಸ್ ಟೂ ಲೇಟ್. ನನ್ನ ಕೊಂದರೂ ಪ್ರಯೋಜನವಿಲ್ಲ ಮಹಮದ್. ಪರಿಸ್ಥಿತಿ ಗಮನಿಸಿದರೆ ಈ ಜಯರಾಮನ ಕತೆ ನಿಜವಾಗಿರಬಹುದಾದ ಅತಿ ದೂರದ ಸಾಧ್ಯತೆ ಒಂದು ಮಿಂಚುತ್ತೆ! ಆದರೆ ಒಂದು ಜ್ಞಾಪಕ ಇಟ್ಟುಕೋ. ಇನ್ನು ನನ್ನ ಕೊಲ್ಲೋದರಿಂದ ಯಾವ ಉಪಯೋಗವೂ ಇಲ್ಲ. ಆ ಸಿದ್ದಪ್ಪನ್ನೂ ಹೆಗ್ಡೆನೂ ಕರಿ. ಜೋಗಿಹಾಳರ ನೋಟ್ಸುಗಳಿಂದ ನಾನು ತಿಳಿದ ಕೆಲವು ವಿಷ್ಯಾನ ನಿಮಗೂ ಹೇಳಿಬಿಡ್ತೇನೆ. ಆಮೇಲೆ ಸತ್ತರೆ ಕತ್ತೆಬಾಲ! ನೀವು ಕೆಲಸ ಮುಮದುವರೆಸಿ" ಎಂದರು. ಪಾಟೀಲರು ತಾನು ಹೇಳಿದ್ದನ್ನೆಲ್ಲಾ ಇಷ್ಟೊಂದು ಶಾಂತಾವಾಗಿ ತಣ್ಣಗೆ ತಗೊಂಡಿದ್ದನ್ನು ನೋಡಿ ಮಹಮದ್ ಮನಸ್ಸು ಒಂದು ರೀತಿ ತಿಳಿಯಾಗತೊಡಗಿತು.

ಮಹಮದ್ ಹೋಗಿ ಸಿದ್ದಪ್ಪನನ್ನೂ ಹೆಗ್ಡೆಯನ್ನೂ ಕರೆಕೊಂಡು ಬಂದ. ಅವರಿಬ್ಬರೂ ಮಹಮದ್‌ಗೆ "ನಿನ್ಯಾಕಯ್ಯ ಆ ಮನುಷ್ಯನಿಗೆ ಈ ವಿಷ್ಯ ತಿಳಿಸಿದೆ. ಮೊದಲೇ ಅವನೊಬ್ಬ ಸಿನಿಕ್ಕು," ಎಂದು ಗೊಣಗಾಡುತ್ತ ನಾವು ಬರೋದಿಲ್ಲ ಹೋಗು ಎಂದು ದಬಾಯಿಸಿದರು. ಅದಕ್ಕೆ ಮಹಮದ್ "ಇಲ್ರಪ್ಪಾ ಏನೋ ಹೇಳೋದಿದೆಯಂತೆ. ಬಹುಶಃ ಕೆಸರೂರಿನ ಹೈಬ್ರಿಡ್ ರಹಸ್ಯ ಹೇಳ್ತಾರೆನೋ ಗೊತ್ತಿಲ್ಲ!" ಎಂದ. "ನಿನ್ನ ತಲೆ, ಅದರಲ್ಲೆಂಥ ರಹಸ್ಯ ಇದೆ. ಬದನೆಕಾಯಿ, ನಮಗೆ ಗೊತ್ತಿಲ್ಲದೆ ಇರೋದು. ನಾವೆಲ್ಲಾ ಇದೊಂದು ಭಾರಿ ರಹಸ್ಯ ಅಂತ ಅಂದುಕೊಂಡು ಓಡಾಡಿದರೆ ಯಾವನೋ ತಲೆ ಕೆಟ್ಟೋನು ನಮ್ಮನ್ನಷ್ಟೂ ಜನರನ್ನು ಖೂನಿ ಮಾಡ್ತಾನಷ್ಟೆ! ಒಟ್ಟಿನಲ್ಲಿ ಈ ಹಾಳೂರಿನಲ್ಲಿ ಯಾರದೋ ಖೂನಿ ನಡೆಯೋದಕ್ಕೆ ನಾವೆಲ್ಲಾ ಏರ್ಪಾಟು ಮಾಡ್ತಿದಿವಿ ಅಂತ ಕಾಣ್ತದೆ!"

ಎಂದೆಲ್ಲಾ ಗೊಣಗಾಡಿಕೊಂಡೇ ಮಹಮದ್ ಜೊತೆ ಬಂದರು. ಬಂದವರೇ ಪಾಟೀಲರಿಗೆ "ಸಾರ್ ಆ ಜಯರಾಂ ಹೇಳಿದ ಕತೆ ಕಟ್ಟಿಕೊಂಡು ನಿಜಾಂತ ನಂಬಿ ನಿಮಗೆ ದಿಗಿಲು ಹುಟ್ಟಿಸಿದಾನೆ ಸಾರ್ ಮಹಮದ್ದು. ನೀವು ಅದನ್ನೆಲ್ಲಾ ಸೀರಯಸ್ಸಾಗಿ ತಗೋಬಾರ್ದು" ಎಂದು ಸಾಂತ್ವನ ನೀಡುವ ದನಿಯಲ್ಲಿ ಮಾತಿಗೆ ಆರಂಭಿಸಿದರು.

"ಹಾಗಲ್ಲ ಸಿದ್ದಪ್ಪಾ, ನನಗೆ ಈ ಬಗ್ಗೆ ನೀವು ಸಮಾಧಾನ ಹೇಳೋದು ಬೇಡ. ಹೆದರ್ಕೋಬೇಡಿ ಅಂತ ನನಗೆ ಧೈರ್ಯ ಹೇಳೋ ಅಷ್ಟು ಧೈರ್ಯ ಇದೆಯಲ್ಲಾ ನಿಮಗೆ. ಅದೇ ನನಗೆ ಸಂತೋಷ. ಎಲ್ಲಾ ಮಸೀದಿ ದೇವಸ್ಥಾನ ಕಟ್ಟಿಸಿಕೊಂಡು ಸಾಯ್ತಿರೋ ಊರಲ್ಲಿ ನಾವು ಮಾಡ್ತಿರೋ ಕೆಲಸಾನ ಸೀರಿಯಸ್ಸಾಗಿ ತಗೊಂಡು ಖೂನಿ ಮಾಡ್ತೀವಿ ಅಂತ ಹೆದರಿಸೋ ಅಷ್ಟು ಯಾರಾದರೂ ತಯ್ಯಾರಿದ್ರೆ ನೀವು ನಿಮ್ಮ ಸಂಶೋಧನೆ ಬಗ್ಗೆ ಹೆಮ್ಮೆ ಪಡಬೇಕು. ಯಾಕಂದ್ರೆ ನಿಮಗಿಂತ ಮೊದಲೇ ನನಗೆ ಫೋನಿನಲ್ಲಿ ಬೆದರಿಸಿದರು. ಸಾವಿನ ಭಯ ನನಗೇನು ಹೊಸದಲ್ಲ. ನನಗೆ ಹೃದಯದ ತೊಂದರೆ ಇದೆ ಅಂತ ಒಬ್ಬ ಡಾಕ್ಟರು ಹೆದರಿಕೆ ಹಾಕಿದರು. ಅವರು ಹೊಸದಾಗಿ ತಂದಿದ್ದ ಎಲೆಕ್ಟ್ರೋಕಾರ್ಡಿಯೋಗ್ರಾಂ ಕೆಲಸ ಮಾಡೊ ರೀತಿಯನ್ನು ನನಗೆ ತೋರಿಸೋದಕ್ಕೆ ಹೋಗಿ ಇದನ್ನು ಪತ್ತೆ ಮಾಡಿದ್ರು. ನೀನು ಯಾವಾಗ ಬೇಕಾದರು ಸಾಯಬಹುದು. ಅದಕ್ಕೇ ಹೆಚ್ಚು ಓಡಾಡಬೇಡ. ಉಪ್ಪು ತಿನ್ನಬೇಡ, ಸಕ್ಕರೆ ನೆಕ್ಕಬೇಡ, ದೂರದ ಪ್ರಯಾಣ ಮಾಡಬೇಡಾಂತ ಕಟ್ಟಾಜ್ಞೆ ಮಾಡಿದರು. ಅವರು ಹೇಳಿದಂತೆ ಮಾಡಿ ನಾನು ಒಂದು ಗೋರಿ ತೋಡಿಕೊಂಡು ಅದರೊಳಗೆ ಒಂಭತ್ತುವರ್ಷ ಮಲಗಬೇಕಿತ್ತು! ಎಲ್ಲಾದರೂ ಉಂಟೇನ್ರಯ್ಯಾ. ಸಾವಿನ ಭಯ ಹೋಗೋವರೆಗೂ ನೀವು ನಿಜವಾದ ಮನುಷ್ಯರಾಗೋಲ್ಲ ತಿಳ್ಕೊಳಿ. ಸತ್ರೆ ಸತ್ತೆ ಕತ್ತೆಬಾಲಾಂತ ಇಲ್ಲೀವರೆಗೆ ಬದ್ಕಿದೀನಿ ನೋಡಿ. ನಿಮಗೇನಾದ್ರೂ ಬುದ್ಧಿ ಸ್ಥಿಮಿತದಲ್ಲಿದೆಯೇನ್ರಯ್ಯ. ಜಯರಾಮ ಹೇಳಿದ್ದು ನೂರಕ್ಕೆ ನೂರರಷ್ಟು ಸತ್ಯಾಂತ ಆದರೂ, ಗಂಭಿರವಾಗಿ ಬದುಕಿ ಗಂಭೀರವಾಗಿ ಸಾಯೋಣ." ಸಿದ್ದಪ್ಪ, ಹೆಗ್ಡೆ, ಮಹಮದ್ ಮೂರು ಜನವೂ ಪಾಟೀಲರ ಈ ಪ್ರತಿಕ್ರಿಯೆಯಿಂದ ಅಪ್ರತಿಭರಾದರು. ಈ ಸಿನಿಕನ ಹೃದಯದೊಳಗೂ ಇರುವ ಧೈರ್ಯ ನೋಡಿ ಅವರಿಗೂ ಕೊಂಚ ತಾಕತ್ತು ಬಂದಂತಾಯ್ತು.

"ಹಾಗಲ್ಲಾ ಸಾರ್ ಆ ಕತೆ ಕೇಳದಿದ್ದರೆ ಹೇಗೋ ಎಲ್ಲಾ ಒಂತರಾ ನಡಕೊಂಡು ಹೋಗ್ತಿತ್ತು. ಆ ಕತೆ ಪ್ರಭಾವದಲ್ಲಿ ನಮಗೆ ಎಲ್ಲವೂ ಅದನ್ನು



ಪುಷ್ಟೀಕರಿಸೊ ಸಂಗತಿಗಳ ತರಾನೆ ಕಂಡು ತಲೆ ಕೆಡೋಕಾಗ್ತಿದೆ. ಏನ್ಮಾಡ್ತೀರಿ?" ಎಂದ ಹೆಗ್ಡೆ.

"ಯಾರ್ದಿವೆಲ್ಲಾ ಕಿತಾಪತಿ?"

"ಎಲ್ಲಾ ಆ ಶಾಮನಂದನ ಅಂಗಾಡಿ ಬಂದಿದ್ದಾರಲ್ಲಾ ಸಾರ್, ಅವರಿಂದಲೇ ಶುರುವಾಯ್ತು ನೋಡಿ. ಆಮೇಲೆ ಆ ರಾಮಚಂದ್ರ ಜಯರಾಮ ಇಬ್ಬರೂ ಸೇರಿ ಏನೇನೋ ಸಿದ್ಧಾಂತ ಹೇಳಿಕೊಳ್ತ ಮನುಷ್ಯ ಸ್ವತಂತ್ರನೋ ಅಥವಾ ವಿಧಿನಿಯಮಾಧೀನನೋ ಕಲಾಕೃತೀಲಿ ಪ್ರಯೋಗ ಮಾಡಿ ತಿಳೀತೀವಿ ಅಂತ ಶುರು ಮಾಡಿದರು. ದಿನಾ ಸಾಯಂಕಾಲ ಆ ಕತೆ ಪರಾಮರ್ಶೆ ಬೇರೆ ನಡಿತಾ ಇದೆ. ಏನೋ ಆಟ ಅಂತ ಶುರು ಮಾಡಿ ಈಗ ಪೀಕಲಾಟಕ್ಕೆ ಇಟ್ಟಕೊಂಡಿದೆ.

"ಓಹೋ, ಯಾವತ್ತೂ ತೀರ್ಮಾನ ಆಗದ ವಿಷಯ ತಗೊಂಡಿದೀರಿ! ಡೋಂಟ್‌ವರಿ, ಅಕಸ್ಮಾತ್ ಯಾರಾದ್ರೂ ಖೂನಿ ಮಾಡಿ ನಾನು ಸತ್ರೂ ಅದರಿಂದೇನೂ ಇತ್ಯರ್ಥ ಸಿಕ್ಕೋಲ್ಲ. ಅದಿರ್ಲಿ ಜೋಗಿಹಾಳ್ ಸಂಶೋಧನೆ ಮಾಡ್ತಿದ್ದ ಕೆಸರೂರು ಹೈಬ್ರಿಡ್ ವಿಷ್ಯ ಈಗ ಮಾತಾಡೋಣ. ಏಲಕ್ಕೀ ಗಿಡಾನ ನಾವು ಉತ್ಪಾದನೆ ಹೆಚ್ಚಿಸೋದಕ್ಕೆ ಆಗದ ಗಿಡಾಂತ ಗೋಡೆಗೆ ತಲೆ ಚಚ್ಚಿಕೋತ ಇದ್ದೆವಲ್ಲಾ! ಮುಂದೆ ದಾರಿ ಕಾಣದೆ ಕೂತಿದ್ವಲ್ಲಾ! ಈ ಸಮಸ್ಯೇನ ಜೋಗಿಹಾಳ್ ಹ್ಯಾಗೆ ಸಿಂಪಲ್ಲಾಗಿ ಬಿಡಿಸಿದಾರೆ ಕೊನೆಗೆ ಗೊತ್ತಾ! ಈ ಹೈಬ್ರಿಡ್ ಬೀಜ ತಂದು ಸಸಿ ಹಾಕಿದರಲ್ಲಾ ಅದೂ ಕೂಡ ಎಲ್ಲಾ ಗಿಡಗಳ ತರಾನೇ ವರ್ತಿಸಿದ್ದು ನಿಮಗೆಲ್ಲಾ ಗೊತ್ತಲ್ಲಾ! ಹಾಗಾಗಿ ಬೀಜದಿಂದ ಅದನ್ನು ಅಭಿವೃದ್ಧಿ ಮಾಡೋದಕ್ಕೆ ಆಗೋಲ್ಲಾಂತ ಆ ದಿಕ್ಕಿನಲ್ಲಿ ಸಂಶೋಧನೆ ನಿಲ್ಲಿಸಿದ್ರು, ಅಲ್ವೆ ಮಹಮದ್?" ಎಂದರು ಪಾಟೀಲರು.

"ಹೌದು ಸಾರ್ ನಮಗಂತೂ ನಾವು ಮಾಡಿದ್ದು ವೃಥಾ ಶ್ರಮ ಆಯ್ತಲ್ಲಾಂತ ತುಂಬಾ ಬೇಸರ ಆಯ್ತು."

"ಸರಿ ನೀನು ಹೇಳೋದು. ಇದಕ್ಕೊಂದು ಭಾಳ ಸರಳ ಸುಲಭ ಮಾರ್ಗ ಇತ್ತು. ನೋಡು ನಮಗ್ಯಾರಿಗೂ ಈವತ್ತಿನವರೆಗೂ ಹೊಳೀಲಿಲ್ಲ. ನಮ್ಮ ಸಾಂಪ್ರದಾಯಕ ಯೋಚನಾ ಮಾರ್ಗವೇ ಇದಕ್ಕೆ ಅಡ್ಡಿ!"

"ಏನ್ ಸಾರ್ ಅದು" ಎಂದ ಕುತೂಹಲದಿಂದ ಸಿದ್ಧಪ್ಪ.

"ತಡೀರಿ ಹೇಳ್ತೀನ್ರಯ್ಯಾ ಏನು ಅಷ್ಟರೊಳಗೆ ಯಾರಾದರೂ ಖೂನಿ ಮಾಡ್ತಾರಂತ ಗಾಬರಿನೋ! ಜೋಗಿಹಾಳರು ಗ್ವಾಟೆಮಾಲಾದಲ್ಲಿ ಮಾಡಿರೋ ನೋಟ್ಸು ನೋಡಿ. ಅದರಲ್ಲಿ ಅವರು ಹೇಗೆ ಗ್ವಾಟೆಮಾಲಾದಲ್ಲಿ ನಮಗಿಂತ ಹೆಚ್ಚು ಬೆಳೀತಾರೆ ಅಂತ ಸಂಶೋಧನೆ ಮಾಡಿದರು. ಯಾಕೆಂದರೆ ಅವರು

ಗ್ವಾಟೆಮಾಲಾದಿಂದ ಏಲಕ್ಕಿ ಬೀಜ ತರಿಸಿ ಭಾರತದಲ್ಲಿ ಪ್ರಯೋಗ ಮಾಡಿದ್ದರು. ಅವೂ ಇತರ ಗಿಡಗಳಂತೆಯೇ ವರ್ತಿಸಿದ್ದವು. ಇದರಿಂದಲೇ ಜೋಗಿಹಾಳರಿಗೆ ಸಂಶಯ ಆರಂಭವಾದದ್ದು. ಅಲ್ಲಿ ಅವರಿಗೆ ಒಂದು ಅತ್ಯಂತ ಮುಖ್ಯ ಸಂಗತಿ ಬೆಳಕಿಗೆ ಬಂತು. ಏನೆಂದರೆ ಗ್ವಾಟೆಮಾಲಾದಲ್ಲಿ ಏಲಕ್ಕಿ ಬೀಜದಿಂದ ಗಿಡ ಮಾಡಿ ನೆಡೋದೇ ಇಲ್ಲ! ಅನ್ನೋದು. ಏಲಕ್ಕಿ ಗಿಡ ಬಳೆ ಶುಂಠಿ ತರ ಬುಡದಿಂದ ಕಂದು ಬರೋ ಗಿಡ ನೋಡಿ! ಹಾಗಾಗಿ ಅವರು ಕಂದುಗಳನ್ನೇ ಕಿತ್ತು ನಮ್ಮ ಬಾಳೆ ಕೃಷಿ ತರ ನೆಡುತ್ತಾರೆ. ಅವು ಥೇಟ್ ತಾಯಿ ಗಿಡದಂತೆಯೇ ವರ್ತಿಸುತ್ತವೆ. ಕಂದು ಕಿತ್ತು ನೆಡೋನು ಸಾಧಾರಣ ಏನ್ಮಾಡ್ತಾನೆ? ಅದಷ್ಟು ಒಳ್ಳೊಳ್ಳೇ ಗಿಡಗಳನ್ನೇ ಆರಿಸಿಕೋತಾನೆ. ಹಾಗಾಗಿ ಸ್ವಾಭಾವಿಕವಾಗೇ ಗ್ವಾಟೆಮಾಲಾದಲ್ಲಿ ತಳಿಗಳು ಒಳ್ಳೆಯವೇ ಹೆಚ್ಚಾಗುತ್ತಾ ಕಚಡಾಗಿಡಗಳು ಪ್ರಸಾರವಿಲ್ಲದೆ ನಶಿಸುತ್ತಾ ಇವೆ! ಸ್ವಾಭಾವಿಕವಾಗೇ ಅವರ ಉತ್ಪಾದನೆ ಏರುತ್ತಾ ಹೋಗ್ತಿದೆ! ಇದೆಲ್ಲಾ ನೀವು ಒಂದನ್ನ ಯಾವ ದೃಷ್ಟಿಯಿಂದ ನೋಡ್ತೀರ ಅನ್ನೋದರ ಮೇಲೆ ನಿಂತಿದೆ. ಗ್ವಾಟೆಮಾಲಾದ ರೈತ ಏಲಕ್ಕೀನ ತನ್ನಿಂದ ತಾನೆ ಬೇರು ಬಿಳಲು ಬಿಟ್ಟು ಗಡ್ಡೆಯಿಂದ ಹಬ್ಬಿಕೊಳ್ತಾ ಹೋಗೋ ಗಿಡದಂತೆ ನೋಡಿದ. ಭಾರತದ ರೈತ ಏಲಕ್ಕೀನ ಹೂವು ಕಾಯಿ ಹಣ್ಣು ಬಿಟ್ಟು ಅದರ ಬೀಜಬಿದ್ದು ಪ್ರಸಾರ ಆಗೋ ಹಣ್ಣು ಬಿಡೋ ಗಿಡದ ಹಾಗೆ ನೋಡಿದ. ಜೋಗಿಹಾಳರು ಕೆಸರೂರು ಹೈಬ್ರೀಡನ್ನು ಆ ರೀತಿ ನೋಡಲು ತೀರ್ಮಾನಿಸಿದರು. ಕೆಸರೂರು ಹೈಬ್ರೀಡ್ ಅಂತ ಜೋಗಿಹಾಳರು ಕರೆಯೋ ಗಿಡ ವರ್ಷಕ್ಕೆ ಸರಾಸರಿ ಒಂದು ಕೆಜಿ ಏಲಕ್ಕಿ ಬಿಡ್ತಿತ್ತಂತೆ. ಆ ಲೆಕ್ಕದಲ್ಲೇ ಅದು ಎಕರೆಗೆ ಒಂದು ಟನ್ ಏಲಕ್ಕಿ ಉತ್ಪಾದಿಸೋ ಗಿಡಾಂತ ಪ್ರತೀತಿ ಹಬ್ಬಿದ್ದು!"

"ಸಾರ್ ಇದೊಂದು ವಿಷಯ ಸಂಪೂರ್ಣ ನಮಗೆ ತಿಳೀಲಿಲ್ಲ ನೋಡಿ. ಇದನ್ನು ಹೇಳಿದರೆ ಜಯರಾಮ, ಅಂಗಾಡಿ ಇಬ್ರೂ ಕತೆ ಪರಿಪೂರ್ಣ ಆಯ್ತು ಅಂತ ಹಿರಿಹಿರಿ ಹಿಗ್ಗಿಬಿಡ್ತಾರೆ. ನಿನ್ನೆ ಜೋಗಿಹಾಳರನ್ನ ಖೂನಿ ಮಾಡೋ ಅಂಥ ಗುರುತರ ಕಾರಣ ಯಾವುದು ಎಂದು ತಲೆ ಕೆರೆದುಕೊಳ್ತಾ ಎಲ್ಲರಿಗೂ ತಲೆ ಕೆಡಿಸಿದ್ದರು. ಈಗ ನೀವು ಅದನ್ನು ಸಂಶೋಧನೆ ಮಾಡಿದಿರಿ" ಎಂದ ಸಿದ್ದಪ್ಪ.

"ಸಿದ್ದಪ್ಪಾ, ಸಾವಿನ ನೆರಳಲ್ಲಿ ಸಾಹಸದ ಕೆಲಸ ಮಾಡೋದರಂಥ ಸಂತೋಷ ಇನ್ನೊಂದಿಲ್ಲ! ಬ್ರಿಟಿಷರು ಆವಾಗ ಬಂದು ಭಾರತದಲ್ಲಿ ಕಾಫಿ ತೋಟ ಮಾಡಿದರಲ್ಲ ಅವರ ಕತೆ ಓದು ಗೊತ್ತಾಗುತ್ತೆ. ಅವರೇನು ಹೂವಿನ



ಹಾದಿಯಲ್ಲಿ ಜೀವನ ಸಾಗಿಸಲಿಲ್ಲ. ಇಲ್ಲಿ ಪ್ರತಿ ಹೆಜ್ಜೆಗೂ ಸಾವು ಬದುಕಿನ ಹೋರಾಟ ನಡೆಸಿದ್ದಾರೆ ಕಣಯ್ಯ.

"ಅದಿರಲಿ ಸಾರ್ ಆ ಕೆಸರೂರು ಹೈಬ್ರಿಡ್ ತಾಯಿಗಿಡ ಎಲ್ಲಿದೆ? ಅದು ತಿಳೀದೆ ಇದ್ರೆ ನೀವು ಇಷ್ಟೆಲ್ಲಾ ಮಾಡಿದ್ದು ವ್ಯರ್ಥ ಆಗುತ್ತಲ್ಲಾ" ಎಂದ ಮಹಮದ್.

"ಅದನ್ನ ಪತ್ತೆ ಮಾಡದೆ ಬಿಡೋದುಂಟೇನಯ್ಯಾ. ಆ ಜೋಗಿಹಾಳರ ನೋಟ್ಸು ಡೈರಿಗಳನ್ನು ಇನ್ನೂ ಕೊಂಚ ನೋಡೋದಿದೆ. ನೋಡಿ ಪತ್ತೆ ಮಾಡೆ ಮಾಡ್ತೇನೆ. ಅದಿರ್ಲಿ ಈ ದೃಷ್ಟಿ ಇದೇ ನೋಡು, ಜೀವನಾನೇ ಆಗ್ಲಿ ಒವಂದು ಗಿಡಾನೆ ಆಗ್ಲಿ, ನೀವು ಹೇಗೆ ನೋಡ್ತೀರ ಅನ್ನೋದು ಮುಖ್ಯ. ಅದರ ಮೇಲೆ ನಿಮ್ಮ ಫಲಿತಾಂಶ ನಿಂತಿದೆ! ಇದು ನಾನು ಹೇಳೋ ಮಾತಲ್ಲ. ಜೋಗಿಹಾಳ್ ಅವರ ನೋಟ್ಸಿನಲ್ಲಿ ಬರಕೊಂಡಿರೋ ಮಾತು.

"ಹುಡುಕೋಣ ಕೆಸರೂರು ಹೈಬ್ರೀಡ್ ಗಿಡಾನ! ಈಗಲೂ ನನ್ನ ಖೂನಿ ಮಾಡಿ ಜೋಗಿಹಾಳರ ಸಂಶೋಧನ ನಿಷ್ಫಲ ಮಾಡಿಬಿಡಬಹುದಲ್ಲವೇ? ಅಂತೂ ನಮ್ಮ ಕೆಸರೂರಿನ ಮುಠ್ಠಾಳರಿಗೆ ನನ್ನ ಸಂಶೋಧನ ಮೌಲ್ಯ ಗೊತ್ತಾಗದಿದ್ರೂ ಪರಿದೇಶದೋರಿಗಾದ್ರೂ ಗೊತ್ತಾಯ್ತಲ್ಲಾ. ಅದೇ ಸಂತೋಷ ಹ್ಹಹ್ಹಹ, ನಿಮ್ಮ ಜಯರಾಮನ ಕತೆ ಪ್ರಕಾರ!" ಎಂದು ದೀರ್ಘವಾಗಿ ಮಾತಾಡಿದ ಪಾಟೀಲರು ನಕ್ಕರು. ಮೂವರಿಗೂ ಈ ಸಿನಿಕ ವಿಲಕ್ಷಣ ವ್ಯಕ್ತಿ ಎಂದೆನಿಸಿತು.

"ಏನ್ ಸಾರ್, ಎಕರೆಗೆ ಒಂದು ಟನ್ನು ಅಂದರೆ!" ಎಂದ ಮಹಮದ್.

"ಜೋಗಿಹಾಳರು ನೋಟ್ಸಿನಲ್ಲಿ ಬರೀತಾರೆ ಈ ಕೃಷಿ ಪ್ರಕಾರ ಒಂದೊಂದು ಏಲಕ್ಕಿ ತೋಟಾನು ಚಿನ್ನದಗಣಿ ಆಗುತ್ತೆ ಅಂತ. ಇದರದ್ದೊಂದು ಇಪ್ಪತ್ತೈದು ಸಸಿ ಮಾಡಿಕೊಂಡು ಬೆಳೆಸಿದರೆ ಒಂದು ಸರ್ಕಾರಿ ನೌಕರಿ ಸಂಬಳ ಬರ್ತದಲ್ಲಾ" ಎಂದರು ಪಾಟೀಲರು.

"ಅವರ ರೋಗ ನಿರೋಧಕ ಶಕ್ತಿ ಬಗ್ಗೆ ಮಾಡಿರೋ ನೋಟ್ಸು ನೋಡ್ತಿದೀನಿ. ಆ ಗಿಡ ಎಲ್ಲಿದೆ ಯಾವುದು ಅಂತ ಸೂಚನೆ ಸಿಕ್ಕಕೂಡಲೆ ತಿಳಿಸ್ತೀನಿ. ಆದರೆ ನೋಡಿ ಜಯರಾಂಕತೆ ಪ್ರಕಾರ ಇದನ್ನೆಲ್ಲಾ ತಿಳ್ಕೊಂಡಿರೋ ನಿಮ್ಮನ್ನೂ ಖೂನಿ ಮಾಡಬೇಕಾಗುತ್ತೆ ವಿದೇಶಿ ಏಜೆಂಟರು ಅನ್ನೋದನ್ನು ಮರೀಬೇಡಿ ಹಹ್ಹಹ್ಹ" ಎಂದು ನಕ್ಕರು.

ಕೇಳುತ್ತಿದ್ದ ಮೂವರಿಗೂ ಕೊಂಚ ದಿಗಿಲಾಯ್ತು!

# ಅಧ್ಯಾಯ ೨೮

“ಏನಯ್ಯಾ ಆಚಾರಿ? ನನಗೆ ಮನೆ ಒಳಗೂ ತಾಪತ್ರಯ. ಮನೆಮೇಲೂ ತಾಪತ್ರಯ. ಮನೆ ಹೊರಗೂ ತಾಪತ್ರಯ. ಇಲ್ಲಿ ಈ ಸೂಳೇಮಗ ಸುಲೇಮಾನ್ ಬೇರಿ ನನ್ನ ವ್ಯವಹಾರಕ್ಕೆ ಕೊಡಲಿ ಹಾಕೋದಕ್ಕೆ ನೋಡ್ತಿದಾನೆ. ಅತ್ತಲಾಗಿ ಮನೆ ಮೇಲೆ ಕಲ್ಲು ಬೀಳ್ತವೆ! ತೋಟದಲ್ಲಿ ದೆವ್ವದ ಕಾಟ! ನಾನು ತವರು ಮನೆಗೆ ಹೋಗ್ತೀನಿ ಅಂತ ಹೆಣ್ತಿ ಕೂತಿದ್ದಾರೆ. ಹಗಲು ಹೊತ್ತೇ ರಣ ಓಡಾಡೊದು ಕಾಣ್ತಂತೆ ಅವಳಿಗೆ. ತೋಟದ ಆಳುಗಳೂ ದೆಯ್ಯ ಓಡಾಡ್ತವೆ ಅಂತ ಒಬ್ಬೊಬ್ರೇ ಕೆಲಸಕ್ಕೆ ಬರೋದಿ ಬಿಡ್ತಿದ್ದಾರೆ. ಮನಃಶಾಂತಿ ಅನ್ನೋದೆ ಇಲ್ವಲ್ಲಯ್ಯಾ ನನಗೆ” ಎಂದು ಏಲ್ಕಕಿ ಮಂಡಿಯಲ್ಲಿ ಕುಳಿತುಕೊಂಡು ಕೃಷ್ಣೇಗೌಡ ಆಚಾರಿಗೆ ಗೋಳು ತೋಡಿಕೊಂಡ.

“ಸುಲೇಮಾನ್ ಬೇರಿ ವಿಷ್ಯ ನನಗೆ ಬಿಡು. ಆ ಗೋಸಾಯಿಗಳಿಗೆ ಜಾಗ ಕೊಟ್ಟು ಓಟುದಾರರ ಪಟ್ಟಿಗೆ ಸೇರಿಸು. ಆಮೇಲೆ ಅದರ ತಮಾಷೆ ನೊಡುವಿಯಂತೆ. ಅದಿರ್‍ಲಿ ದೆವ್ವದ ಕಾಟಕ್ಕೆ ಮಾತ್ರ ನೀನು ಏನಾದರೂ ಮಾಡಲೇಬೇಕು. ಅದನ್ನು ಮಾತ್ರ ಉದಾಸ್ನ ಮಾಡಬೇಡ ಕೃಷ್ಣಪ್ಪ. ನಮ್ಮ ಸಂಶೋಧನ ಕೇಂದ್ರದ ಪಾಟೀಲರನ್ನು ಕೇಳು. ಅವರು ಅದೇನೋ ಮಂತ್ರ ತಂತ್ರ ಮಾಡ್ತಾರಂತೆ! ಕೇಳಿನೋಡು! ಮಂತ್ರ ಹಾಕಿ ವಿಷ ತೆಗೀತಾರಂತೆ, ಇದಕ್ಕೂ ಏನಾದರೂ ಮಂತ್ರ ತಂತ್ರ ಇರಬಹುದು.!

“ಹೇಗಯ್ಯಾ ಅದು, ಆ ಮನುಷ್ಯನಿಗೆ ದೇವರಲ್ಲಿ ನಂಬಿಕೇನೆ ಇಲ್ವಂತೆ. ನಮ್ಮ ದೇವಸ್ಥಾನದ ಕೆಲಸಕ್ಕೆಲ್ಲಾ ತೊಂದೆ ಕೋಡ್ತಿದಾನಂತೆ!”

“ಅವರು ಏನಾದರೆ ನಿನಗೇನಯ್ಯಾ. ಈ ಭೂತ ಜಕಣಿ ಬಿಡಿಸೊರು ವಾಮಾಚಾರದೊರು ಇವರೆಲ್ಲಾ ದೇವರನ್ನ ನಂಬೊರಲ್ಲ ಕಣಯ್ಯ; ಮನುಷ್ಯರಲ್ಲಿ ದೇವಗಣ ರಾಕ್ಷಸಗಣ ಅಂತ ಎರಡು ತರ ಇದಾವೆ. ಇವರೆಲ್ಲಾ ರಾಕ್ಷಸ ಗಣದೋರು. ದೇವರನ್ನ ವಿರೋದಿಸ್ತಾನೆ ಮೋಕ್ಷಕ್ಕೆ ಹೋಗ್ತಾರೆ. ಅದನ್ನು ಯಾಕೆ ನೀನು ತಲೇಗೆ ಹಚ್ಕೋತೀಯಾ! ನಿನ್ನ ತಲೆ ಮೇಲೆ ಕಲ್ಲು ಬೀಳೋದು ನಿಂತರೆ ಸಾಕಲ್ಲ ನಿನಗೆ! ನೀನು ಉದಾಸ್ನ ಮಾಡಿ ಇದು ಹಿಂಗೇ ಮುಂದುವರಿದರೆ



ರಾತ್ರಿ ಬೀಳ್ತಿರೋದು, ಬೆಳಿಗ್ಗೇನೆ ಬೀಳ್ತದೆ. ಆಮೇಲೆ ಮನೇಲಿದ್ದ ಸಾಮಾನು ಎದ್ದೆದ್ದು ಬೀಳ್ತವೆ. ಅನ್ನದಲ್ಲಿ ಪಾಯಿಖಾನೆ, ಬೆಂಕಿ ಹತ್ಕೊಳೋದು, ಹೀಗೇ ತರಾನುತರದ ತೊಂದ್ರೆ ಆರಂಭವಾಗುತ್ತೆ” ಎಂದ ಆಚಾರಿ. ಕೃಷ್ಣಪ್ಪ ಗೌಡನಿಗೆ ಪುಕ್ಕಲು ಹೆಚ್ಚಾಗಿ ದಿಗಿಲಿನಿಂದ ಅವನ ಮುಖ ಪೆಚ್ಚಾಯ್ತು.

ಆಚಾರಿ ಮಂತ್ರಾಲೋಚನೆ ಮುಗಿಸಿ ಎದ್ದು ಹೋಗುತ್ತಿದ್ದಂತೆಯೇ ಅವನು ಪಾಟೀಲರನ್ನು ನೋಡಬೇಕೆಂದು ತೀರ್ಮಾನಿಸಿಕೊಂಡ. ಆದರೆ ಕೃಷ್ಣಪ್ಪ ಹೊರ ಹೋಗಬೇಕೆಂದು ಯೋಚಿಸಿಕೊಂಡು ಎದ್ದಾಗ ಕೆಸರೂರಿನ ಇನ್ನೊಬ್ಬ ಕೀಚಕ ಆಗಮಿಸಿದ. ಕೆಸರೂರಿನ ತಮ್ಮಣ್ಣಗೌಡನೂ ಬ್ಯಾಂಕ್ ಕಾರ್ಯದರ್ಶಿ ರಾಮಾಚಾರಿಯೂ ಕರಟಕ ದಮನಕರೆಂದು ಪ್ರಖ್ಯಾತರಗಿದ್ದರು. ಕೆಸರೂರಿನ ಯಾವ ತರ್ಲೆತಕರಾರುಗಳ ಮೂಲಗಳನ್ನು ಹುಡುಕಿದರೂ ಅದು ಇವರ ಬಳಿ ಬಂದು ನಿಲ್ಲುತ್ತಿತ್ತು. ತಮ್ಮಣ್ಣಗೌಡ ಕೃಷ್ಣಪ್ಪನಹೆಚ್ಚು ಮೋರೆ ನೋಡಿ “ಏನಯ್ಯ ಸಮಾಚಾರ?” ಎಂದು ಕೇಳಿದ. ಕೃಷ್ಣಪ್ಪ ಆಚಾರಿಗೆ ಹೇಳಿದುದನ್ನೆಲ್ಲಾ ಮತ್ತೆ ತಮ್ಮಣ್ಣನಿಗೂ ವರದಿ ಮಾಡಿ ಗೋಳಾಡಿದ. ಪಾಟೀಲರನ್ನು ನೋಡಹೊರಟಿರುವುದನ್ನೂ ಅವನಿಗೆ ಹೇಳಿದ. ಅದಕ್ಕೆ ತಮ್ಮಣ್ಣಗೌಡ ಅಸಡ್ಡೆಯಿಂದ ಅದರಿಂದೇನೂ ಪ್ರಯೋಜನವಿಲ್ಲೆಂದು ಅವಜ್ಞೆ ಮಾಡಿ, ಇದೆಲ್ಲಾ ನಮ್ಮೂರ ಹರಿಜನರ ಕೆಲಸವೆಂದೂ, ಹರಿಜನರ ಧರ್ಮಗುರುವಿನಂತಿದ್ದ ಹೊಲೇರ ಮಾಯಿಯನ್ನು ಛೂ ಬಿಟ್ಟು ಅವರು ಈ ಕೆಲಸ ಮಾಡಿಸುತ್ತಿದ್ದಾರೆಂದೂ ಕರಾರುವಕ್ಕಾಗಿ ಎಲ್ಲ ತಿಳಿದವನಂತೆ ಬೊಗಳಿದ. ಮೊದಲೇ ಸಮಸ್ಯೆಗಳ ನಡುವೆ ತಲೆ ಕೆಡೆಸಿಕೊಂಡು ಕುಳಿತಿದ್ದ ಕೃಷ್ಣಪ್ಪನನ್ನು ತಮ್ಮಣ್ಣ ಸಂಪೂರ್ಣ ದಿಕ್ಕು ತಪ್ಪಿಸಿದ್ದ.

ಈ ರೀತಿ ತಮ್ಮಣ್ಣ ಹರಿಜನರ ಮೇಲೆ ಕತ್ತಿ ಮಸೆಯಲು ಕಾರಣ ಕೆಲವೇ ಗಂಟೆಗಳ ಹಿಂದೆ ಅವನು ಉದ್ಭವ ವೆಂಕಟೇಶ್ವರ ಸ್ವಾಮಿ ಭಕ್ತಾಗ್ರಣಿಗಳಲ್ಲಿ ಒಬ್ಬನಾದ ರಾಮಾಚಾರಿಯ ಸಂಗಡ ಹರಿಜನರ ಕೇರಿಗೆ ಭೇಟಿ ಕೊಟ್ಟುದ್ದೇ ಆಗಿತ್ತು. ರಾಮಾಚಾರಿ ಯಾವತ್ತೂ ಹರಿಜನರ ಕೇರಿಗೆ ಹೋದವನೇ ಅಲ್ಲ. ಆದರೆ ಹರಿಜನರೆಲ್ಲಾ ಸಾಬರ ಜಾತಿಗೆ ಸೇರಲು ಮಸಲತ್ತು ಮಾಡುತ್ತಿದ್ದಾರೆ ಎನ್ನುವ ವದಂತಿ ಇವನ ಕಿವಿಗೆ ಬಿತ್ತು. ಆ ವರ್ತಮಾನ ಇವನಿಗೆ ಬಂದುದು ಇನ್ನೊಂದು ರಾಷ್ಟ್ರೀಯ ಬ್ಯಾಂಕ್ ಮೇನೇಜರ್ ಶ್ರೀನಿವಾಸರಾಯರ ಬಾಯಿಂದ. ಶ್ರೀನಿವಾಸರಾಯ ಸರ್ಕಾರದ ಆದೇಶದ ಮೇಲೆ ಹರಿಜನ ಗಿರಿಜನರಿಗೆ ಸಾಲ ನೀಡಬೇಕೆಂಬ ನಿರ್ಬಂಧಕ್ಕೆ ಸಿಕ್ಕಿದ್ದ. ಅವನೂ ಮತ್ತು ಕೆಸರೂರಿನ ವೆಟರ್ನರಿ ಡಾಕ್ಟರೂ ಸೇರಿ ಒಂದಷ್ಟು ಜನ ಹೊಲೆಯರನ್ನು ಹಿಡಿದು ಪುಸಲಾಯಿಸಿ

ಹೆಬ್ಬೆಟ್ಟು ಒತ್ತಿಸಿಕೊಂಡು ಒಂದಷ್ಟು ಹಂದಿಮರಿಗಳನ್ನು ಕೊಡಿಸಿ ಮಿಕ್ಕ ಡಿ.ಎ.ಆರ್. ಸಾಲವನ್ನೆಲ್ಲಾ ಗುಳುಂ ಮಾಡಿದ್ದರು.

ಹೊಲೆಯರು ಇವರಿಬ್ಬರೂ ಪುಸಲಾಯಿಸಿ ಸಾಲಕ್ಕೆ ಹಂದಿ ಮರಿ ಕೊಡಿಸಿದ್ದನ್ನು ನೋಡಿ ಅದನ್ನು ಮುಫತ್ತೆಂದೇ ತಿಳಿದು ಸಾಲದ ಯಾವ ಕಂತನ್ನೂ ತೀರಿಸುವ ಗೋಜಿಗೆ ಹೋಗಲಿಲ್ಲ. ಅನೇಕ ದಿನ ಕಳೆದ ನಂತರ ಮೇನೇಜರ್ ಶ್ರೀನಿವಾಸರಾಯನಿಗೆ ಏಕೆ ಡಿ.ಐ.ಅರ್. ಸಾಲ ಒಂದು ದಮ್ಮಡಿಯೂ ಹಿಂದಕ್ಕೆ ಬಂದಿಲ್ಲೆಂದು ವಿವರಣೆ ಕೇಳಿ ಮೇಲಿನಿಂದ ನೋಟೀಸು ಬಂತು. ಶ್ರೀನಿವಾಸರಾಯ ಹರಿಜನರಿಗೆ ತಗಾದೆ ಶುರು ಮಾಡಿದ. ಹರಿಜನರು ಅದನ್ನು ಅಷ್ಟೊಂದು ಮನಸ್ಸಿಗೆ ಹಾಕಿಕೊಳ್ಳಲಿಲ್ಲ. ಆದರೆ ಮೇನೇಜರು ಸಾಲದ ಕಂತು ತೀರಿಸುತ್ತೀರೋ ಇಲ್ಲಾ ಹಂದಿಗಳನ್ನು ಒಯ್ದು ಹರಾಜು ಹಾಕಿಸಲೋ ಎಂದು ಬೆದರಿಸಿದಾಗ ಮಾತ್ರ ಗಾಬರಿಯಾದರು. ಇಂಥ ಅತ್ಯುತ್ತಮ ಖಾದ್ಯ ಪದಾರ್ಥವನ್ನು ಶ್ರೀನಿವಾಸರಾಯ ಹೊತ್ತೊಯ್ಯಾನೆಂದು ಆತ ಮತ್ತೊಮ್ಮೆ ತಗಾದೆಗೆ ಬರುವುದರೊಳಗೆ ತಿಂದು ತೇಗಿದರು. ಮೇನೇಜರು ಮತ್ತೊಮ್ಮೆ ಕೇರಿಗೆ ಹೋದಾಗ ನಾವೆಲ್ಲಾ ಸಾಬರ ಜಾತಿಗೆ ಸೇರಬೇಕೆಂದಿದ್ದೇವೆ. ಅದಕ್ಕೆ ಕೇರಿಯ ಒಳಗೆ ಹಂದಿಗಳು ನಿಷಿದ್ಧ ಅಂತೆ. ಹಂದಿಗಳನ್ನೆಲ್ಲಾ ಕಾಡಿಗೆ ಓಡಿಸಿ ಬಿಟ್ಟೆವು ಎಂದು ಥೋಂಗಿ ಹೊಡೆದರು. ಅವರಿಗೆಲ್ಲಾ ಸುಲೇಮಾನ್ ಬೇರಿ ಕಡೆಯವರು ತಮ್ಮನ್ನು ಅವರ ಜಾತಿಗೆ ಸೇರಿಸಿಕೊಳ್ಳಲು ಯೋಚಿಸುತ್ತಿದ್ದಾರೆ. ಎಂಬ ಗಾಳಿ ಗುಸುಗುಸು ತಲುಪಿತ್ತೇ ವಿನಃ ಅವರೇನೂ ಆ ಬಗ್ಗೆ ಚಿಂತಿಸಿರಲಿಲ್ಲ. ಹಂದಿಗಳು ಮಾಯವಾದುದಕ್ಕೊಂದು ವಿಧ್ಯುಕ್ತ ವಿವರಣೆ ಬೇಕಿತ್ತು. ಅದಕ್ಕೋಸ್ಕರ ಒಂದು ಕಾರಣ ಹುಡುಕಿ ಹೇಳಿದರಷ್ಟೆ. ಶ್ರೀನಿವಾಸರಾಯನೂ ವೆಂಕಟೇಶ್ವರ ಭಕ್ತರ ಗುಂಪಿನವನಾದ್ದರಿಂದ ಅದನ್ನು ರಾಮಾಚಾರಿಗೆ ಹೇಳಿದ. ರಾಮಾಚಾರಿ ಕೆಸರೂರಿನ ಬೆರಳೆಣಿಕೆಯಷ್ಟಿದ್ದ ಬ್ರಾಹಣರ ಮುಂದಾಳು. ಅವರ ಬ್ರಾಹ್ಮಣ್ಯ ಉಳಿಸಲು ಕಟಿಬದ್ಧನಾಗಿ ನಿಂತಿದ್ದವ. ಜಾತಿ ಜಾತಿಗಳನ್ನು ಒಂದರ ಮೇಲೊಂದು ಎತ್ತಿಕಟ್ಟಿ ಬ್ರಾಹ್ಮಣರ ಹಿತಾಸಕ್ತಿ ಕಾಪಾಡುವುದರಲ್ಲಿ, ಬ್ರಾಹ್ಮಣರ ವಿರುದ್ಧ ಶೂದ್ರರು ಎಗರಿ ಬಿದ್ದಾಗ ಶೋಷಣೆ ಮಾಡುತ್ತಿದ್ದವರು ಒಕ್ಕಲಿಗರು ಲಿಂಗಾಯ್ತರೇ ಎಂದು ಹರಿಜನರನ್ನು ಅವರ ಮೇಲೆ ಎತ್ತಿ ಕಟ್ಟಿದ, ಬೇಸಾಯಗಾರರೆಲ್ಲಾ ಒಟ್ಟಾದಾಗ ಇವರೆಲ್ಲಾ ಭೂ ಮಾಲೀಕರು, ಭೂರಹಿತ ಕೃಷಿ ಕಾರ್ಮಿಕರನ್ನು ಶೊಷಿಸುತ್ತಿದ್ದಾರೆಂದು ಕಮ್ಯೂನಿಸ್ಟ್ ಪಕ್ಷ ಒಂದನ್ನು ಮಾಡಿ ಭೂರಹಿತರನ್ನೂ ತೋಟದ ಆಳುಗಳನ್ನೂ ಬೇಸಾಯಗಾರರ ಮೇಲೆ ಎತ್ತ ಕಟ್ಟಿದ.



ಈ ಸಾರಿ ಇವನ ಜಗದ್ಗುರುಗಳು ಬಂದಾಗ ಏನಾದರೂ ಮಾಡಿ ಅವರನ್ನು ಹೊಲಗೇರಿಗೆ ಕರಕೊಂಡು ಹೋಗಿ ಹರಿಜನರನ್ನು ಅವರ ಕಾಲಿಗೆ ಬೀಳಿಸಬೇಕೆಂದು ಯೋಚಿಸಿದ್ದ. ಇದರಿಂದ ಹರಿಜನರನ್ನು ತಮ್ಮ ತೆಕ್ಕೆಗೆ ಹಾಕಿಕೊಂಡು ತಾಲ್ಲೂಕು ಬೋರ್ಡ್ ಚುನಾವಣೆಗಳಲ್ಲಿ ಮುಂದಾಗಬೇಕೆಂದು ಅವನ ಆಸೆ. ಆದರೆ ಶೂದ್ರರಲ್ಲಿ ಜಗಳ ಹಚ್ಚಿಹಾಕುವುದರಲ್ಲಿ ಅವನು ಸಫಲನಾದರೂ ಅವರ ಎಲ್ಲ ಗುಂಪುಗಳೂ ಬ್ರಾಹಣರನ್ನು ಗುಮಾನಿಯಿಂದ ನೋಡುವುದನ್ನು ಬಿಡಲೇ ಇಲ್ಲ. ಹೀಗಾಗಿ ವೆಂಕಟೇಶ್ವರಸ್ವಾಮಿ ಭಕ್ತರ ಗುಂಪಿಗೆ ಸೇರಿಕೊಂಡ ಅವನು ಆ ಮೌಢ್ಯದ ಸಹಾಯದಿಂದ ಒಂದಷ್ಟು ಮಡ್ಡ ಗೌಡರನ್ನು ಬಲೆಗೆ ಹಾಕಿಕೊಂಡಿದ್ದ. ಆದರೆ ತಾಲ್ಲೂಕು ಬೋರ್ಡ್ ಅಧ್ಯಕ್ಷತೆ ಬಂದಾಗ ಈ ಗೌಡರು ಕೈಕೊಡುತ್ತಾರೆಂಬ ಗುಮಾನಿ ಮಾತ್ರ ಅವನಿಗೆ ಇದ್ದೇ ಇತ್ತು. ಅದಕ್ಕೇ ಹರಿಜನರನ್ನು ಕೈಬಿಡಬಾರದು ಎಂದುಕೊಂಡು ಈ ಹಾರವ, ಮೂರ್ಖ ಶಿಷ್ಯನಾದ ತಮ್ಮಣ್ಣನನ್ನು ಕರೆದುಕೊಂಡು "ಹೊಲೆಯರು ಸಾಬರ ಜಾತಿಗೆ ಸೇರ್ತಾರಂತೆ! ಇದನ್ನು ಏನಾದರೂ ಮಾಡಿ ತಡೆಯಬೇಕು. ವಿಷಯ ಮೊದಲು ತಿಳಿದು ಬರೋಣ ಬಾ" ಎಂದು ಅವನೊಡನೆ ಕೆಸರೂರಿನ ಹೊಲೆಗೇರಿ ಕಡೆ ಹೊರಟ.



ಈ ಕುತಂತ್ರಿ ಹಾರವನೂ ಮೂರ್ಖ ಗೌಡನೂ ಹೊಲೆಗೇರಿ ಕಡೆಗೆ ಪಾದ ಬೆಳೆಸಿದ್ದು ಹರಿಜನರಿಗೆ ಕುತೂಹಲ ತಂದಿತು. ಅದಕ್ಕೆ ಅವರು ಸಾಬರ ಜಾತಿಗೆ ಸೇರುತ್ತೇವೆಂದು ಹೇಳಿದ ಸುಳ್ಳೇ ಕಾರಣ ಎಂದು ತಿಳಿದ ಕೂಡಲೇ "ಓಹೋ ಈ ಜಾತಿ ಬಿಡೋದರಲ್ಲಿ ಏನೋ ಒಂದು ಮಹತ್ವದ್ದು ಇದೆ" ಎಂದೆನ್ನಿಸಿತು ಅವರಿಗೆ. ಅದಕ್ಕೇ ಅವರು ಆ

ವದಂತಿಯನ್ನು ಇವರೆದುರು ಅಲ್ಲಗಳೆಯುವುದಕ್ಕೆ ಹೋಗಲೇ ಇಲ್ಲ. "ನಿಮ್ಮ ದೇವಸ್ಥಾನಕ್ಕೆ ನಮ್ಮನ್ನು ಸೇರಿಸ್ಕೋತಿರಾ! ನಿಮ್ಮ ಮನೆ ಒಳಗೆ ನಮ್ಮನ್ನು ಬಿಟ್ಕೋತಿರಾ? ನಮ್ಮನ್ನ ಮುಟ್ಟಿಸ್ಕೋತೀರಾ?" ಎಂದೆಲ್ಲಾ ಪ್ರಶ್ನೆ ಕೇಳಿ ಕಿಚಾಯಿಸತೊಡಗಿದರು. ರಾಮಾಚಾರಿ "ಮುಟ್ಟಿಸ್ಕೋಬೌದು! ಮುಟ್ಟಿಸ್ಕೋಬಾರ್ದಂತ ಏನೂ ಇಲ್ಲ. ಅವೆಲ್ಲಾ ಹಳೇ ಕಂದಾಚಾರ ಅಲ್ಲೇನ್ರಯ್ಯ, ಮುಕ್ಯ ನೀವು ಸ್ವಲ್ಪ ಶುಚಿಯಾಗಿ ಇರೋದನ್ನ ಕಲೀಬೇಕು. ಸುಮ್ಮ ಸುಮ್ಮನೆ ಒಬ್ಬರು ಮತ್ತೊಬ್ರನ್ನ ಮುಟ್ಟೋದು ಆಂದರೆ ಏನ್ರಯ್ಯ? ನಿಮ್ಮ ಹೆಣ್ತೀರನ್ನ ಯಾವನೋ ದಾರಿಹೋಕ ಬಂದು ಮುಟ್ಟಿದರೆ ನೀವು ಸುಮ್ನೆ ಬಿಡ್ತೀರಾ? ಆ ತರಾನೇ ಬಂದವು ಈ ಕಟ್ಲೆಕಾನೂನು ಆಚಾರ ಎಲ್ಲಾ. ದೇವಸ್ಥಾನದ ಒಳಗೆ ಪೂಜಾರಿ ಬಿಟ್ಟು ಇನ್ನು ಯಾರ್ನೂ ಬಿಡಬಾರದು ಅಂತ ಮಾಡಿದೀವಿ. ಯಾಕಂತ ಕಾರಣ ತಿಳೀದೇ ನೀವು ಮಾತಾಡ್ತೀರಿ. ನಿಮಗೇ ನಮಗೇ ಕ್ಷೇಮ ಅಂತಲ್ವೆ? ದೇವರಿಗೆ ಮೈಲಿಗೆ ಆದರೆ ನಿಮಗೆ ತೊಂದ್ರೇನೋ! ದೇವರಿಗೋ! ನಮಗೇ ನಮಗೇ ತಾನೆ! ಅದಕ್ಕೆ ಸ್ವಲ್ಪ ತಿಳಿದು ಮಾತಾಡಿ" ಇತ್ಯಾದಿಯಾಗಿ ಅಡ್ಡಗೋಡೆ ಮೇಲಿನ ದೀಪದಂತೆ ಮಾತಾಡತೊಡಗಿದ. ಅವನು ಮುಖ್ಯವಾಗಿ ಬಂದದ್ದು ಈ ಹರಿಜನರ ಮನಸ್ಸಿನ ಮರ್ಮ ತಿಳಿಯೋದಕ್ಕೆ ಹೊರತು, ಯಾವ ಆಶ್ವಾಸನೆಯನ್ನೂ ಕೊಡೋದಕ್ಕಲ್ಲ. ಹರಿಜನರು ಇದೇ ಸಮಯ ಎಂದು ನಮಗೆ ನೀವು ಏನೆಲ್ಲಾ ಅನ್ಯಾಯ ಮಾಡಿದ್ದೀರಿ ಎಂದು ಸವರ್ಣೀಯರ ವರ್ತನೆಗಳನ್ನೆಲ್ಲಾ ಪಟ್ಟಿ ಮಾಡಿ ಹೇಳತೊಡಗಿದರು. ಇದನ್ನೆಲ್ಲಾ ಕೇಳುತ್ತಾ ಕೇಳುತ್ತಾ ರಾಮಾಚಾರಿ ಹಿಂದೆ ನಿಂತಿದ್ದ ಗೌಡನಿಗೆ ಸಿಟ್ಟು ಏರತೊಡಗಿತು. ರಾಮಾಚಾರಿಯಂಥ ಮಹಾನುಭಾವನಿಗೆ ಇವರು ಈ ರೀತಿ ಚುಡಾಯಿಸಬಹುದೇ? ಎಂದು.

"ಹೌದ್ರೋ ಬಡ್ಡಿಮಕ್ಳ, ನೀವು ಹೇಳಿದ್ದೆಲ್ಲಾ ನಿಜಾನೆ! ಯಾರಲ್ಲಾಂದೋರು? ನರಮನುಷ ಇರೋಕಡೆ ನಡೆಯೋವೆ ಅವೆಲ್ಲಾ. ಹಂಗಂತಾ ನಿವು ಜಾತೀನೇ ಬಿಡ್ತೀವಿ ಅಂತಿರೇನ್ರೋ? ಅದು ಮಾಡಿದಿವಿ, ಇದು ಮಾಡಿದಿವಿ ಅಂತೀರಲ್ಲಾ, ನಿಮ್ಮ ತಾತ ಮುತ್ತಾತನ ಕಾಲದಿಂದ ಅನ್ನಾ ಕೊಟ್ಟು ಸಾಕಿದ್ದು ಯಾಕೆ ನಿಮ್ಮ ಬಾಯಾಗೆ ಬರೋಲ್ಲ" ಎಂದು ಏರುದನಿಯುಲ್ಲಿ ವಾದಕ್ಕೆ ಇಳಿದ. ಹರಿಜನರಿಗೆ ಅನ್ಯಾಯ ಮಾಡಿದರೂ ಸಹ ಹರಿಜನರೊಡನೆ ಸಮಾನ ಮಾಧ್ಯಮ ಮತ್ತು ಸಂಬಂಧಗಳನ್ನು ಉಳಿಸಿಕೊಂಡಿದ್ದವನು ಅವನೇ. ಹರಿಜನರ ಮಾತುಗಳಿಗೆ ಸ್ಪಂದಿಸುತ್ತಿದ್ದುದು ಅವನ ಹೃದಯವೇ.

"ಏನು ಸಾಕಿದ್ರಿ?. ನಮ್ಮಜ್ಜಾ ಮುತ್ತಜ್ಜನ ಕಾಲದಿಂದ ಮುಕ್ಳಿ ಬಗ್ಗಿಸಿ ದುಡಿದ್ರೂ ಇವತ್ತಿಗೂ ಅರೆ ಹೊಟ್ಟೆ ಹರಕಲು ಬಟ್ಟೆ! ಕಾಣಾದಿಲ್ಲೇನು?"

"ಮತ್ತೇನು ನಾವೇನು ಚಿನ್ನದ ಕಿರೀಟ ತಲೆಮೇಲೆ ಹಾಕ್ಕೊಂಡು ತಿರುಗ್ತಿದ್ದೀವ? ಉಂಡ ಬಳ್ಳೇಗೆ ಅಂಡು ತಿರುಗಿಸೋ ಜಾತಿ ನೀವು. ಇಷ್ಟೊ ದಿನ ನಾವು ಬೇಕಿತ್ತು. ಈಗ ಆ ದನಾ ತಿನ್ನೋ ಹಲಾಲುಕೊರರ ಜೊತೆ ನಂಟಸ್ತಿಕೇಗೆ ಹೊರಟದ್ದೀರಾ?"

"ತಿಂದ್ರೇನಾತು. ನಾವು ತಂತೀವಿ ಅವ್ರೂ ತಿಂತಾರೆ."

"ಅದ್ಕೇ ಮತ್ತೆ ಮೈಕೈ ಮುಟ್ಟಬೇಡಿ ದೂರಾ ನಿಲ್ಲಿ ಅನ್ನಾದು" ಎಂದು ವ್ಯಂಗ್ಯವಾಗಿ ತಮ್ಮಣ್ಣ ನುಡಿದದ್ದು ಮೂರು ನಾಲ್ಕು ಜನ ತರುಣರಿಗೆ ಕೋಪ ಬರಿಸಿತು. ರಾಮಾಚಾರಿ ತಡೆಯಿರಿ ತಡೆಯಿರಿ ಎನ್ನಿತ್ತಿದ್ದರು ಲೆಕ್ಕಿಸದೆ ಅವರು ಜಗಳಕ್ಕೆ ಮುಂದಾದರು.

ಒಬ್ಬ "ನೀವು ಹೇಲು ತಿನ್ನಾ ಹಂದಿ ತಿಂತೀರಿ. ಅದು ಮಾತ್ರ ಬಾಳ ರುಚೀನ?" ಎಂದ.

"ಹೊಲೇರ ಹುಡುಗೀರು ತೋಟದಾಗಿ ಬಂದ್ರೆ ಹಿಡಿಯಕ್ಕೆ ಹೋಗ್ತೀರಿ?" ಎಂದ ಮತ್ತೊಬ್ಬ

"ನಮ್ಮ ಹುಡುಗೀರು ಮರ್ಯಾದೇಲಿ ಕೆಲಸ ಮಾಡ್ಕೊಂಡು ಗ್ರಾಸ್ತನ ಮಾಡಹಂಗೇ ಇಲ್ಲ" ಎಂದ ಮಗದೊಬ್ಬ.

ರಾಮಾಚಾರಿ ಎದುರು ವಾದದಲ್ಲಿ ತನ್ನನು ಸೋಲಿಸುತ್ತಿರುವುದಲ್ಲದೆ ತಮ್ಮ ಪೋಲಿ ಕೆಲಸಗಳನ್ನೆಲ್ಲಾ ಎತ್ತಿ ರಾಮಾಚಾರಿ ಎದುರು ಮರ್ಯಾದೆ ತೆಗೆಯುತ್ತಿರುವುದನ್ನು ಕಂಡು ತಮ್ಮಣ್ಣಗೌಡನ ಸಿಟ್ಟು ನೆತ್ತಿಗೇರಿತು. ಆತ ನಿಜಕ್ಕೂ ಹರಿಜನ ಹುಡುಗಿಯರ ಮೇಲೆ ಮೇಲ್ಜಾತಿಯ ತಾವು ಕೈಯಾಡಿಸುವುದೂ ಸಂಬಂಧ ಇಟ್ಟುಕೊಳ್ಳುವುದೂ ಅವರ ಮೇಲೆ ತಾವು ತೋರುತ್ತಿರುವ ಔದಾರ್ಯವೆಂದೇ ತಿಳಿದಿದ್ದ. ಈಗ ನೋಡಿದರೆ ಹರಿಜನರು ಅದನ್ನು ಬಹಿರಂಗ ಮಾಡುತ್ತಿರುವುದಿಲ್ಲದೆ ಅದನ್ನು ಅಪರಾಧಗಳ ಪಟ್ಟಿಯಲ್ಲಿ ಲಿಸ್ಟು ಮಾಡಿದ್ದಾರೆ!

"ಮುಚ್ರೋ ಮುಚ್ರೋ ಇವರ ಕೇರಿ ಹೊಲತೀರೇನು ಭಾರಿ ಅಪ್ಪಾಂತಾ ಗರತೀರು. ಕೇರೀಲಿ ಅರ್ಧಕ್ಕರ್ಧಾ ಅಡ್ಡ ಹುಟ್ಟಿದೋರನ್ನಿಟ್ಟುಕೊಂಡು ನೀತಿ ಹೇಳೋಕೆ ಬರ್ತಾನೆ. ಈಗ ಹೋಗಿ ಸಾಬರ ಜಾತಿಗೆ ಸೇರಿ. ಲಬ್ಬೆ ಬ್ಯಾರಿಗಳೆಲ್ಲಾ ನಿಮ್ಮ ಹೆಂಗ್ಸರನ್ನ ಕೆಡವಿಕೋತಾರಲ್ಲಾ! ಆಗ ಆ ಚಂದ ನೋಡಿ. ಬನ್ರೀ ಬನ್ರೀ ರಾಮಾಚಾರ್ರೇ. ಈ ಹೊಲೆಸೂಳೆಮಕ್ಕತ್ರಾ ಏನ್ಮಾತು!"ಎಂದು ಹರಿಜನರ ಮನ ನೋಯುವಂತೆ ಅಂದು ರಾಮಾಚಾರಿಯನ್ನು ಕರೆಯುತ್ತಾ ಹಿಂದಿರುಗಿದ. ಹರಿಜನ

ಯುವಕರಿಗೆ ಅವನನ್ನು ಕತ್ತರಿಸಿ ಹಾಕುವಷ್ಟು ಕೋಪ ನೆತ್ತಿಗೇರಿತ್ತು. ಆದರೆ ಶತಮಾನದಿಂದ ತಗ್ಗಿ ಬಗ್ಗಿ ನಡೆದ ಅವರಿಗೆ ಮೇಲೆ ಬಿದ್ದು ಮಾರಾಮಾರಿ ಮಾಡುವಷ್ಟು ಧೈರ್ಯ ಇರಲಿಲ್ಲ. ಆದರೆ ರಾಮಾಚಾರಿ ನಿರ್ಗಮನಾನಂತರ ಹರಿಜನ ಯುವಕರಿಗೆ ಕೆಲವರಿಗಾದರೂ ತಮ್ಮ ಜಾತಿ ಬಗ್ಗೆ ಹೇಸಿಗೆ ಉಂಟಾಗಿತ್ತು.

ರಾಮಾಚಾರಿಯ ಕುತಂತ್ರ ಬುದ್ಧಿಗೆ ಮಂಕು ಕವಿದಿತ್ತು. ಅವನಿಗೆ ಯಾರನ್ನು ದೂಷಿಸಬೇಕೆಂದೇ ತೋಚದಾಗಿತ್ತು. ಒಟ್ಟಿನಲ್ಲಿ ಈ ಮೂಢ ಗೌಡನನ್ನು ಕಟ್ಟಿಕೊಂಡು ತಾನು ಹೊಲಗೇರಿ ಕಡೆ ಬಂದುದೇ ತಪ್ಪಾಯ್ತೆಂದುಕೊಂಡ. ಹಿಂದೂ ಧರ್ಮದಲ್ಲಿ ಜಾತಿಜಾತಿಗಳ ಮೇಲೆ ದ್ವೇಷ ಮೂಡಿಸುವಷ್ಟು ಸುಲಭವಾಗಿ ಸಾಮರಸ್ಯ ಮೂಡಿಸುವುದು ಸುಲಭವಲ್ಲ ಎಂದೆನಿಸಿತು ಆ ಕುತಂತ್ರಿ ಹಾರುವನಿಗೆ. ತಮ್ಮಣ್ಣ ಬಂದು ಕೃಷ್ಣೇಗೌಡನ ಹತ್ತಿರ ಹರಿಜನರ ಮಾಯಿಯೇ ಈ ಕೆಲಸ ಮಾಡಿಸುತ್ತಿವುದು ಎಂದು ಚಾಡಿ ಹೇಳಲು ಈ ಘಟನೆಯೂ ಒಂದು ಮುಖ್ಯ ಕಾರಣ.





## ಅಧ್ಯಾಯ ೨೯



ಕೃಷ್ಣೇಗೌಡನ ತಾಪತ್ರಯ ಅವನಿಗಲ್ಲದೆ ಬೇರಾರಿಗೂ ಅರ್ಥವಾಗುವಂತಿರಲಿಲ್ಲ. ಅವನು "ದೆವ್ವದ ಕಾಟ, ಮನೆಮೇಲೆ ಕಲ್ಲು ಬೀಳ್ತವೆ," ಎಂದು ಹೇಳಿದರೆ ಕೇಳಿದವರು ನಾಲ್ಕಾರು ಕಲ್ಲು ಮನೆ ಮೇಲೆ ಬಿದ್ದರೆ ಆಗೋದೇನು ಮಹಾ! ಎಂದು ಯೋಚಿಸಿ ತಮ್ಮ ಕುತೂಹಲ ತಣಿಸಲು ಅವನ ಮನೆಗೆ ಭೇಟಿಕೊಟ್ಟು, ಅಲ್ಲಿ ಕಾಯುತ್ತಾ ದೆವ್ವದ ಕಾಟದ ಬಗ್ಗೆ ತಮಗೆ ತಿಳಿದ ಕತೆಗಳನ್ನು ಇತರರು ಏನು ತಿಳಿಯುತ್ತಾರೆಂಬ ಜವಾಬ್ದಾರಿ ಸ್ವಲ್ಪವೂ ಇಲ್ಲದೆ ಒದರುತ್ತಾ ಕುಳಿತಿರುತ್ತಿದ್ದರು. ಮಂಗನಂತೆ ಕುಳಿತು ಮನೆ ಮೇಲೆ ಗಳಗಳ ಏನು ಉರುಳಿ ಸದ್ದಾದರೂ ಹೊರಗೋಡಿ ಒಂದು ನಾಟಕೀಯ ವಾತಾವರಣವನ್ನು ಅವನ ಮನೆಯೊಳಗೆ ಸೃಷ್ಟಿ ಮಾಡಿಟಿದ್ದರು.

ಬಂದವರಿಗೆಲ್ಲಾ ಕಾಫಿ ಟೀ ಕೊಟ್ಟು ಸತ್ಕರಿಸಿ ಕೃಷ್ಣೇಗೌಡನ ಹೆಂಡತಿ ಸೀತಮ್ಮನಿಗೆ ಕಿರಿಕಿರಿ ಆರಂಭವಾಯ್ತು. ಇದರೊಡನೆ ಅವರೆಲ್ಲರ ಮಾತುಕತೆಗಳಿಂದ ತಮ್ಮ ಮನೆ ಹಿಂದಿನ ಬಯಲಿನಲ್ಲಿ ಗೋಸಾಯಿಗಳು ಬಂದು ಬೀಡುಬಿಟ್ಟಿದ್ದಾರೆಂದು ತಿಳಿದಕೂಡಲೆ ಇನ್ನಷ್ಟು ಕೋಪ ರೇಜಿಗೆಗಳು

ಆರಂಭವಾದವು. ಆಕೆಗೆ ತನ್ನ ಗಂಡನ ಹೊರ ಚಾಳಿಗಳೆಲ್ಲಾ ಚೆನ್ನಾಗಿ ತಿಳಿದಿದ್ದವು. ತನಗೆ ಒಂದು ಹೆಣ್ಣು ಮಗುವಿನ ಅನಂತರ ಒಂದು ಮಗುವೂ ಆಗುದದಕ್ಕೆ ಗಂಡ ದಾರಿಯಲ್ಲಿ ಹೋಗುವ ಯಾವ್ಯಾವ ಶನಿಮುಂಡೆಯರ ಜೊತೆ ಎಲ್ಲಾ ಮಲಗುವುದೇ ಕಾರಣವೆಂದು ದೃಢವಾಗಿ ನಂಬಿದ್ದಳು. ಅವಳಿಗೆ ಇನ್ನಷ್ಟು ಮಕ್ಕಳಾಗಿದ್ದರೆ ತನ್ನ ಗಂಡನ ಚಾಳಿಗಳ ಬಗ್ಗೆ ಹೆಚ್ಚು ಚಿಂತಿಸುತ್ತಿರಲಿಲ್ಲ. ಏಕೆಂದರೆ ಮಲೆನಾಡಿನ ಗೌಡರೆಲ್ಲಾ ಮೂರ್‍ನಾಲ್ಕು ಹೆಂಡಿರನ್ನು ಕಟ್ಟಿಕೊಂಡು ಮನೆಯೆಲ್ಲಾ ಕುರುಕ್ಷೇತ್ರ ಮಾಡುತ್ತಿದ್ದುದು ಹಿಂದೆ ಸರ್ವೇಸಾಧಾರಣವಾಗಿತ್ತು. ಸದ್ಯಕ್ಕೆ ಕೃಷ್ಣಪ್ಪ ಹೆಂಗಸರನ್ನು ಮನೆಯೊಳಗೇ ಇಟ್ಟುಕೊಳ್ಳದಿರುವುದು ಅವಳ ಪಾಲಿಗೆ ಒಂದು ಮಹತ್ವದ ಸಾಮಾಜಿಕ ಸುಧಾರಣೆಯಾಗಿತ್ತು. ಆದರೂ ಅವಳಿಗೆ ಕೃಷ್ಣಪ್ಪ ಕಸ ಹೆರಕುವ ದರವೇಶಿಗಳ ಜೊತೆಯೆಲ್ಲಾ ಮಲಗಲು ಮನಸ್ಸು ಮಾಡಿರುವುದು ತನ್ನ ಸ್ತ್ರೀತ್ವಕ್ಕೆ ಕಳಂಕ ತಂದಿದೆ, ಎಂಬ ಕಿರಿಕಿರಿ ಮಾತ್ರ ಇತ್ತು. ಕೃಷ್ಣಪ್ಪ ಗೋಸಾಯಿಗಳಿಗೆ ಅಲ್ಲೇ ಮನೆಗಳ ಕೊಡಿಸಲು ಯೋಚಿಸುತ್ತಿದ್ದಾನೆಂದು ಮನೆಗೆ ಬಂದವರ ಮಾತಿನಿಂದ ತಿಳಿದ ಮೇಲಂತೂ ಅವರ ರೇಜಿಗೆ ಜುಗುಪ್ಸೆಗಳು ಭುಗಿಲೆದ್ದಿದ್ದವು. ಮನಸ್ಸಿನಲ್ಲಿ ಒಮ್ಮೆ ಗುಮಾನಿ ಶುರುವಾದರೆ ಯಾವಾಗಲೂ ಹಾಗೇ. ಕೃಷ್ಣಪ್ಪನ ಹಾವಭಾವ, ಚಟುವಟಿಕೆ, ಮಾತುಕತೆ ಪ್ರತಿಯೊಂದೂ ಅವನು ಹಾದರಕ್ಕೆ ನಡೆಸುತ್ತಿರುವ ಗುಪ್ತ ಸಂಚುಗಳಂತೆಯೇ ಕಾಣತೊಡಗಿದವು. ಸಕಲ ವ್ಯವಹಾರಗಳನ್ನೂ ಹಾದರವನ್ನೇ ಗುರಿಯಾಗಿಟ್ಟುಕೊಂಡು ನಡೆಸುವ ದುರಾತ್ಮನಂತೆ ಕೃಷ್ಣಪ್ಪ ಆಕೆಗೆ ಕಾಣತೊಡಗಿದ. ಹಾಗಾಗಿ ತನ್ನ ಗಂಡ ಏತಿ ಎಂದರೆ ಇವರು ಪ್ರೇತಿ ಎನ್ನುವ ಸ್ಥಿತಿ ತಲುಪಿದಳು. ಗಂಡ ಹೆಂಡಿರಲ್ಲಿ ಯಾರೊಬ್ಬರು ಚಿತ್ತ ವಿಕಾರಕ್ಕೊಳಗಾದರೂ ಆ ಸಂಸಾರ ಮುನ್ನೆನಡೆಯುವುದು ಕಷ್ಟಸಾಧ್ಯವಾಗುತ್ತದೆ. ಇನ್ನು ನೂರೆಂಟು ತಾಪತ್ರಯಗಳ ಗೋಜಲಿನಲ್ಲಿ ಸಿಲುಕಿಕೊಂಡಿದ್ದ ಕೃಷ್ಣಪ್ಪನ ಸಂಸಾರದ ಕತೆಯಂತೂ ಹೇಳುವುದೇ ಬೇಡ! ಮನೆ ಒಂದು ದಃಸ್ಸಾಧ್ಯವಾದ ಕುರುಕ್ಷೇತ್ರವೇ ಆಗಿ ಪರಿಣಮಿಸಿತು. ಸಿಟ್ಟಿನ ಭರದಲ್ಲಿ ಯಾರಿದ್ದಾರೆ ಯಾರಿಲ್ಲ ಎಂದು ಸಹ ನೋಡದೆ ಗಂಡ ಹೆಂಡತಿ ಇಬ್ಬರೂ ಮಾತಿನ ಮಾರಾಮಾರಿಯಲ್ಲಿ ನಿರತರಾಗತೊಡಗಿದರು. ಸೀತಮ್ಮನ ಸಿಟ್ಟಿಗೆ ಸಿಕ್ಕು ಪಾತ್ರೆಗಳೆಲ್ಲಾ ಚಕ್ಕುಬಿದ್ದುವು.

ಇಂಥದೊಂದು ಕೌಟುಂಬಿಕ ವಾತಾವರಣದಲ್ಲಿ ಮಗಳು ಜಯಂತಿ ಬೆಳೆಯುತ್ತಾ ರೂಪಗೊಳ್ಳುತ್ತಾ ಯೌವನಕ್ಕೆ ಪದಾರ್ಪಣೆ ಮಾಡಿದ್ದಳು. ಅವಳು ಸುಯದರಿ ಎನ್ನುವುದರ ಬಗ್ಗೆ ಇತರರಿಗೂ ಅವಳಿಗೂ ಅನುಮಾನವಿರಲಿಲ್ಲ! ಆದರೆ ಅವಳಿಗೆ ಕಾಡುತ್ತಿದ್ದ ಪ್ರಶ್ನೆ ಎಂದರೆ ತಾನು ಸುಂದರಿಯಾದರೆ ಯಾಕೆ



ಯಾರೂ ತನ್ನನ್ನು ಪ್ರಿತಿಸುತ್ತಿಲ್ಲ ಎಂಬುದು. ಹಿಂದಿನ ಕಾಲದ ಸುಂದರಿಯರನ್ನು ರಾಜಕುಮಾರರೋ ಅಥವ ಮತ್ಯಾರೋ ಕುದುರೆ ಮೇಲೆ ಹೊತ್ತುಕೊಂಡು ಹೋಗುತ್ತಿದ್ದರಂತಲ್ಲ! ಹಾಗಾದರೆ ತಾನು ಸುಂದರಿಯಾದರೆ ತನ್ನ ಬಗ್ಗೆ ಯಾರೂ ಯಾಕೆ ಇನ್ನೂ ಆ ಸಾಹಸ ಮಾಡಿಲ್ಲ? ಈ ಕಾಲೇಜು ಹುಡುಗರಿಗೆ ಯಾರಾದರೂ ಒಂದೊಂದು ಕುದುರೆಯನ್ನಾದರೂ ಕೊಡಿಸಬಾರದಿತ್ತೇ! ಸುಮ್ಮನೆ ಬಾಡಿಗೆ ಸೈಕಲ್ಲು ತುಳಿಯುತ್ತಾ ತಿರುಗುತ್ತಾರಲ್ಲ! ಎಂದುಕೊಳ್ಳುತ್ತಿದ್ದಳು.

ಕಾಲೇಜು ಫಂಕ್ಷನ್‌ನಲ್ಲಿ ಶಾಮಲ ಎದ್ದು ಹುಡುಗರ ಪರವಾಗಿ ಪ್ರಶ್ನೆ ಕೇಳುತ್ತೇನೆಂದು ಹೇಳಿದಾಗ ಮೊದಲುಜಯಂತಿಗೆ ಎದೆ ಧಸಕ್ಕೆಂದಿತ್ತು. ಇದೊಂದು ಭಯಂಕರ ದುಸ್ಸಾಹಸದಂತೆ ಅವಳಿಗೆ ಕಂಡಿತು. ಏಕೆಂದರೆ ಬಹಿರಂಗದಲ್ಲಿ ಹುಡುಗರನ್ನು ಹುಡುಗಿಯರೆಲ್ಲಾ ತಮ್ಮ ವೈರಿಗಳೆಂದೇ ನೋಡುತ್ತಿದ್ದರು. ಹುಡುಗರ ಕಡೆಗೆ ಅವರೂ ನೋಡುತ್ತಿದ್ದರಾದರೂ ಹುಡುಗರು ಅವರತ್ತ ತಿರುಗಿದೊಡನೆ ಮುಖ ಗಂಟು ಹಾಕಿಕೊಂಡು ಎತ್ತಲೋ ನೋಡುತ್ತಿರುವಂತೆ ನಟಿಸುವುದು ಅವರಿಗೆ ಪರಿಪಾಠವಾಗಿತ್ತು. ಶ್ಯಾಮಲ ವಿಚಾರವಾದಿಗಳ ಪರವಾಗಿ ಪ್ರಶ್ನೆ ಕೇಳಿ ಪಕ್ಕದಲ್ಲಿದ್ದ ಮುತ್ತೈದೆಯ ಕೈಯಲ್ಲಿ ಉಗಿಸಿಕೊಂಡ ಸಂಗತಿ ಕಾಲೇಜಿನ ಹುಡುಗಿಯರ ಗುಂಪಿನಲ್ಲಿ ವಾದ ವಿವಾದವನ್ನೇಳಿಸಿತು. ಕೆಲವು ಹುಡುಗಿಯರು ದೇವರನ್ನು ನಂಬದವರನ್ನು ನಂಬಕೂಡದು. ಅವರಿಗೆ ಯಾರ ಹೆಸರಿಕೆಯೂ ಇರುವುದಿಲ್ಲ. ಅವರು ಪ್ರೀತಿಸಲೂ ಮದುವೆಯಾಗಲೂ ಅನರ್ಹರು. ಅವರು ಹುಡುಗಿಯರನ್ನು ದುರುಪಯೋಗಪಡಿಸಿಕೊಂಡು ಹಾಳುಮಾಡಲು ಹೇಸದವರು ಎಂದು ವಾದಿಸುತ್ತಿದ್ದರು. ಶಾಮಲನ ನಡೆನುಡಿಗೆ ಮೊದಮೊದಲು ಗಾಬರಿಯಾಗಿದ್ದ ಜಯಂತಿ ಹಾಗೂ ಇನ್ನು ಹಲವು ಹುಡುಗಿಯರು ಧೈರ್ಯ ತಗೊಂಡು ವಾದ ಮಾಡತೊಡಗಿದರು. ದೇವರಿದ್ದಾನೋ ಇಲ್ಲವೊ ಅಂತ ವಿಚಾರ ಮಾಡಿದರೆ ಏನು ತಪ್ಪು? ಎಂದು ವಾದಿಸುತ್ತಾ ದೇವರನ್ನು ನಂಬಿದ ಆಸ್ತಿಕರನೇಕರು ಎಷ್ಟೊಂದು ಕ್ರೂರಿಗಳೂ, ಅನೀತಿವಂತರೂ ಆಗಿದ್ದಾರೆಂದು ಅನೇಕ ಉದಾಹರಣೆಗಳನ್ನು ಕೊಡತೊಡಗಿದರು. ಆಗೆಲ್ಲಾ ಜಯಂತಿಯ ಮನದೊಳಗೇ ದೈವಭಕ್ತನೂ ಉದ್ಭವ ವೆಂಕಟೇಶ್ವರನ ಗುಂಪಿನ ಮುಂದಾಳುವೂ ಆದ ತನ್ನ ತಂದೆಯೇ ಉದಾಹರಣೆಯಾಗಿ ಗೋಚರಿಸಿದ್ದು. ಆದರೆ ಏಕೊ ಹುಡುಗಿಯರು ವಾದ ವಿವಾದದಲ್ಲಿ ದೇವರ ಅಸ್ತಿತ್ವದ ವಿಷಯ ಮರೆತೇಬಿಟ್ಟರು. ವಿಚಾರವಾದಿ ಧೂರ್ತರ ಗುಂಪುನ್ನು ಪ್ರೀತಿಸುವವರು ಮತ್ತು ಪ್ರೀತಿಸದವರು ಎಂಬ ಎರಡೇ ಗುಂಪುಗಳಾಗಿ ರೂಪುಗೊಂಡು ವಿಚಾರವಾದಿಗಳ ಪರವಾಗಿದ್ದ ಹುಡುಗಿಯರಿಗೆಲ್ಲಾ ಒಬ್ಬೊಬ್ಬ

ವಿಚಾರವಾದಿ ಹುಡುಗನನ್ನು ಗಂಟುಹಾಕಿ ಅವನೇ ಇವರ ಪ್ರೇಮಿ ಎಂದು ಮಿಕ್ಕ ಹುಡುಗಿಯರು ಚುಡಾಯಿಸತೊಡಗಿದರು. ದೇವರಿದ್ದಾನೋ ಇಲ್ಲವೋ ಎಂದು ವಾದ ಆರಂಭಿಸಿದ ಹುಡುಗಿಯರಿಗೆ ವಾದ ಮುಗಿಯುವಷ್ಟರಲ್ಲಿ ಹೇಗೆ ಒಬ್ಬೊಬ್ಬ ಹುಡುಗ ಗಂಟು ಬಿದ್ದುದು ಎಂದು ಅರ್ಥವಾಗಲಿಲ್ಲ. ತಮಗೆ ವಿಪರೀತ ಅವಮಾನವಾಯ್ತೆಂದು ನಟಿಸುತ್ತಾ ಒಳಗೊಳಗೇ ತಮಗೆ ಸಿಕ್ಕಿರುವ ಪ್ರೇಮಿ ಇತರರಿಗಿಂತ ಮೇಲೋ ಕೀಳೋ ಎಂದು ಸಾದೃಶ್ಯ ವಿಮರ್ಶೆ ಮಾಡುತ್ತಾ ತಲೆ ಬಗ್ಗಿಸಿಕೊಂಡು ಒಬ್ಬರ ಸಂದಿಯಲ್ಲಿ ಇನ್ನೊಬ್ಬರು ನುಸಿಯುತ್ತಾ ಕುರಿಗಳಂತೆ ಕ್ಲಾಸಿಗೆ ಹೋದರು.

ನೋಡುವವರಿಗೆ ಇದೊಂದು ಕ್ಷುಲ್ಲಕ ಚೆಲ್ಲಾಟದಂತೆ ಕಂಡರೂ ಜಯಂತಿಯ ಜೀವನದ ಮಾನಸಿಕ ವಿಕಾಸದಲ್ಲಿ ಇನ್ನೊಂದು ಹಂತದ ಆರಂಭವಾಗಿತ್ತು. ಹುಡುಗಿಯರಿಗೆ ಚುಡಾಯಿಸಲಾದರೂ ಇನ್ನೊಬ್ಬ ಬಾಯ್ ಫ್ರೆಂಡ್ ದೊರೆತದ್ದು ತಾನು ಸುಂದರೆ ಎಂಬ ಆತ್ಮವಿಶ್ವಸವನ್ನು ಅವಳಲ್ಲಿ ತಂದಿತ್ತು. ಅವಳು ಚುಡಾಯಿಸಲು ಆ ಪಟಿಂಗರಲ್ಲಿ ತನಗೆ ಯಾವನು ಪ್ರೇಮಿಯಾಗಿ ದೊರೆತನೆಂದು ಯೋಚಿಸಲೇ ಇಲ್ಲ. ಅವರಲ್ಲಿ ಯಾರೂ ಪ್ರೀತಿಸಲು ಅರ್ಹರೆಂದು ಅವಳಿಗೆ ದೃಢನಂಬುಗೆ ಇತ್ತು. ಅವಳ ಕಣ್ಣುಗಳೂ, ಮತ್ತಿತರೆ ಪಂಚೇದ್ರಿಯಗಳೂ ಯಾವ ರೀತಿ ಅವಳ ಯೌವನದ ಅಜ್ಞಾನುಸಾರ ಇದ್ದುವೆಂದರೆ ಅವಳು ಇಚ್ಚಿಸಿ ನೋಡಿದವನಲ್ಲಿ ತಾನು ಕಲ್ಪಿಸುವ ರೂಪ ವರ್ತನೆ ನಡವಳಿಕೆಗಳನ್ನು ಕಾಣಿಸಲು ತಲೆಬಾಗಿ ನಿಂತಿದ್ದವು. ತಟಕ್ಕನೆ ಆಸ್ಫೋಟನೆಯಂತೆ ಪ್ರೀತಿ ಪ್ರೇಮ ಜೀವನೋತ್ಸಾಹಗಳು ಅವಳಲ್ಲಿ ಸಾಕ್ಷಾತ್ಕಾರಗೊಳ್ಳತೊಡಗಿದವು.

ಮನೆಯಲ್ಲಿ ಸದಾ ಪಿರಿಪಿರಿ ಮಾಡುತ್ತಾ ಗಂಡನ ಮೇಲೆ ದೂರುತ್ತಾ ಅವನ ವ್ಯಕ್ತಿತ್ವವನ್ನು ತನ್ನ ಇಚ್ಛೆಯ ಗೋಲಕಕ್ಕೆ ಎರಕ ಹುಯ್ದು ಅವನಲ್ಲಿ ತಾನು ಏನೇನನ್ನು ಮೆಚ್ಚಿದ್ದಳೋ ಅದನ್ನೇ ನಾಶ ಮಾಡುತ್ತ ಇರುವ ತಾಯಿ. ಆಕೆಯ ಕೆನ್ನೆಯನ್ನೆಂದೂ ಕೆಂಪಾಗಿಸಲಾರದ, ಅವಳಲ್ಲಿ ಎಂದೂ ಒಲವನ್ನೂ ಚಿಮ್ಮಿಸಲಾರದ, ಇವಳನ್ನು ಕಟ್ಟಿಕೊಂಡು ತಾನು ಜೀವನದಲ್ಲಿ ದೊಡ್ಡ ಮೋಸಕ್ಕೆ ಒಳಗಾದನೆಂದು ತಿಳಿದಿದ್ದ, ಹೆಂಗಸರನ್ನು ಕಂಡರೆ ಕೇವಲ ತೆವಲು ಕಳೆದುಕೊಳ್ಳಲೆಳಸುವ ತಂದೆ. ಇಬ್ಬರೂ ಹೀಗೆ ಇಡೀ ತಮ್ಮ ಮುಂದಿನ ಜೀವಿತ ಕಾಲವನ್ನು ಕಳೆಯಲು ತಯ್ಯಾರಿದ್ದಾರೆ! ಜಯಂತಿಗೆ ತನ್ನ ತಂದೆತಾಯಿಗಳ ಹಿಂದಿನ ಹಗರಣಗಳೆಲ್ಲ ಹೊಸ ನೆನಪುಗಳಾಗಿ ಮನಃಪಟಲದ ಮೇಲೆ ಜಾಜ್ವಲ್ಯಮಾನವಾಗಿ ಮೂಡಿದವು. ಇವರೂ ನನ್ನಂತೆಯೇ ಎಂದಾದರೂ ಇದ್ದರೆ?



ಎಂದು ಅಚ್ಚರಿಪಟ್ಟಳು. ಆಗಲೆ ಅವಳಿಗೆ ಯಾರುಯಾರೋ ಗೋಸಾಯಿಗಳ ಗುಂಪಿನ ಜೊತೆ ಓಡಿ ಹೋಗಿ ಪೇಟೆ ಸೇರಿಕೊಂಡ ಹುಡುಗಿಯರನೇಕರು ಜ್ಞಾಪಕಕ್ಕೆ ಬಂದರು.

ಮುದಿಯಾದ ಸಂಸ್ಕೃತಿಯ ಕೆಸರೂರಿನ ಮನೆಮನೆಯೊಳಗಿನ ಎಳೆಯರ ತುಮುಲವಿರಬಹುದು ಇದು. ವಿವೇಕ ವಿವೇಚನೆಗಳನ್ನು ಎಳೆಯ ಜೀವಗಳಿಗೆ ಧಾರೆ ಎರೆದು ಅದರೊಂದಿಗೆ ಅವರು ವಿಕಾಸಗೊಳ್ಳಲನುವು ಮಾಡಿಕೊಡುವುದರ ಬದಲು ಶಾಸ್ತ್ರ ಆಚಾರದ ನೀತಿ ನಿಯಮಗಳ ಅದೃಶ್ಯ ಜಾಲದಲ್ಲಿ ಅವರನ್ನು ಸಿಲುಕಿಸಿ ಅದಕ್ಕೆ ಅವರು ವಿಧೇಯರಾಗಿರುವಂತೆ ಮಾಡಲು ತಾವೂ ಅದನ್ನು ನಂಬಿ, ತಮ್ಮ ತಾರುಣ್ಯವನ್ನು ಹಾಳುಮಾಡಿಕೊಂಡು ಮುದಿಯರೆಲ್ಲಾ ಎಲೆ ಹೃದಯದೊಳಹೊಕ್ಕು ಪರಕಾಯ ಪ್ರವೇಶ ಮಾಡಲು ಹವಣಿಸುತ್ತಾ ಕೆಸರೂರನ್ನು ಒಂದು ಬೆಂತರಲೋಕ ಮಾಡಿದ್ದರು. ಮೇಲೆ ಏನೂ ಸಂಭವಿಸದಂತೆ ನಟಿಸುತ್ತಾ ಬಸ್ಸು ಕಾಯುವವರು ಬಸ್ಸು ಕಾಯುತ್ತಿದ್ದರು. ಕಾರ ಕಡೆಯುವವರು ಕಾರ ಕಡೆಯುತ್ತಿದ್ದರು. ಗದ್ದೆ ಉಳುತ್ತಾ ಮಳೆ ಬರಲಿಲ್ಲೆಂದು ಗೊಣಗುವವರು ಗೊಣಗುತ್ತ ಇದ್ದರು. ಆದರೆ ಜ್ವಾಲಾಮುಖಿಯೊಂದು ಒಳಗೆ ಭಯಂಕರ ಒತ್ತಡ ನಿರ್ಮಿಸುತ್ತಿತ್ತು.

ಗೋಸಾಯಿ ತಾನಾಜಿಯು ಅವನ ಹೆಂಡತಿ ಎನ್ನುವವಳೊಬ್ಬಳೊಡನೆ ಕೃಷ್ಣೇಗೌಡನನ್ನು ಯಾವುದೋ ಕಾರಣಕ್ಕೆ ನೋಡಲು ಬಂದ. ಅವನ ಹೆಂಡತಿ ಕೃಷ್ಣೇಗೌಡನನ್ನು ನೋಡಿದವಳೇ ಶಕುನ ಹೇಳುವವಳಂತೆ "ನಿನಗೆ ಯಾರೋ ಮಾಟ ಮಾಡಿದ್ದಾರೆ. ನಿನ್ನ ತೋಟಕ್ಕೆ ಮಾಟ ಮಾಡಿದ್ದಾರೆ. ನಿನ್ನ ಮನೆಗೆ ಮಾಟ ಮಾಡಿದ್ದಾರೆ, ನಾ ಹೇಳಿದಂತೆ ಕೇಳು. ನನನಂಬು, ಗಂಡಾಂತರದಿಂದ ನಿನಪಾರು ಮಾಡ್ತೇನಿ" ಎಂದು ರಾಗವಾಗಿ ಊಳಿಟ್ಟಳು. ಆತಂಕದಲ್ಲಿ ನರಳುತ್ತಿದ್ದ ಕೃಷ್ಣಪ್ಪ ಅದಕ್ಕೂ ತಲೆಯಾಡಿಸಿದ. ಆಚಾರಿಯನ್ನು ಸಲಹೆ ಕೇಳಿದ. ಆಚಾರಿ "ಇದ್ದರೂ ಇರಬಹುದು ಪ್ರಯತ್ನಿಸಿ ನೋಡೊದರಲ್ಲೇನು ತಪ್ಪು" ಎಂದ. ಸರಿ ಈ ಗೋಸಾಯಿ ಮನೆಗೆ ಮಾಡಿರೋ ಮಾಟ ತೆಗೆಯೋದಕ್ಕೆ ಆಗಮಿಸುತ್ತಾಳೆಂದು ಕೃಷ್ಣಪ್ಪನ ಹೆಂಡತಿ ಸೀತಮ್ಮನಿಗೆ ಗೊತ್ತಾಯ್ತು. ಅವಳಿಗೆ ಸೈರಣೆ ಮೀರಿತು.

"ಆ ಗೋಸಾಯಿ ಏನಾದರೂ ಮನೆ ಒಳಗೆ ಕಾಲಿಟ್ಟರೆ ಅವರ ಕಾಲು ಕಡಿದೇ ಹಾಕುತ್ತೇನೆ" ಎಂದು ಅಬ್ಬರಿಸಿದಳು.

"ಹೂ ನೀನು ಕಾಲು ಕಡೀತಿರಬೇಕಾದರೆ ನಾವಿಲ್ಲಿ ಕೂತುಕೊಂಡು ನೋಡ್ತೀವೀ ಅಂತ ಮಾಡಿದೀಯಾ? ದೆಯ್ಯದ ಕಾಟ, ರಣತಿರುಗ್ತದೆ ಅಂತ ನಾಯಿ ಬೊಗಳಿದಂತೆ ಕೂಗಾಡ್ತೀಯ. ಮಾಟ ಮಾಡಿದಾರಂತೆ ತೇಗೀತೀನಿ

ಅಂತ ಇವಳನ್ನು ಕರಕೊಂಡು ಬಂದರೆ ಕಾಲ್ಕಡೀತಾಳಂತೆ. ಊರ ಹೆಂಗಸರೆಲ್ಲಾ ರಂಡೇರು. ಇವಳೊಬ್ಬಳು ಮಾತ್ರ ಪತಿವ್ರತೆ. ಮುಚ್ಚಿಕೊಂಡು ಕೂತುಗೋ! ನಿನ್ನ ವಿಚಾರ ನಂಗೂ ಗೊತ್ತು" ಎಂದು ಕೃಷ್ಣಪ್ಪ ಅವಳ ಮೇಲೆ ಕೆಂಡ ಕಾರಿದ. ಸೀತಮ್ಮ ಅಳುತ್ತಾ ಅಡಿಗೆಮನೆಗೆ ಹೋಗಿ ಬಾಗಿಲ ಮರೆಯಲ್ಲಿ ನಿಂತು ಚಿಂತಿಸಿದಳು.

ಮನೆಗೆ ಬರಲಿರುವ ಗೋಸಾಯಿತಿಯ ವಿಷಯ ತಿಳಿದೊಡನೆ ಅವಳಿಗೆ ಇಡೀ ದೆವ್ವದ ಕಾಟ ಒಂದು ಪೂರ್ವಯೋಜಿತ ನಾಟಕವಾಗಿ ಕಂಡಿತು. ಕೃಷ್ಣೇಗೌಡನೇ ತನ್ನ ಹಾದರದ ಸಲುವಾಗಿ ಗೋಸಾಯಿಯರಿಗೆ ಕಲ್ಲೆಸೆಯಲು ಹೇಳಿ ಕಾವಲು ಕಾಯುವಂತೆ ರಾತ್ರಿ ಎಲ್ಲಾ ಮನೆಯಾಚೆ ಕಳೆಯಲು ಮಾಡಿಕೊಂಡಿರುವ ಏರ್ಪಾಡೆಂದು ಅವಳಿಗೆ ಸ್ಪಷ್ಟವಾಗಿ ಅನ್ನಿಸತೊಡಗಿತು.

"ಇಲ್ಲಾ ಅವಳಿರ್ಬೇಕು ಮನೆ ಒಳಗೆ, ಇಲ್ಲಾ ನಾನಿರ್ಬೇಕು. ಅವಳು ಬಂದರೆ ನಾನೀ ಮನೆ ಬಿಟ್ಟು ತವರಿಗೆ ಹೊರಟೋಗ್ತೀನಿ. ಇಲ್ಲಾ ಯಾವುದಾದ್ರು ಹಾಳ್ಬಾವಿ ಹಾರ್ತೀನಿ. ಆ ಸೂಳೇಮುಂಡೇರೆ ನಿಮಗೆ ಮದ್ದು ಹಾಕಿ ಹೇಳಿದಂತೆ ಕೇಳೋಹಾಗೆ ಮಾಡಿದಾರೆ. ಅವಳ ಜೊತೇನೇ ಸಂಸಾರ ನಡೆಸಿ" ಎಂದು ಅಡಿಗೆಮನೆಯಿಂದ ಸಿತಮ್ಮ ಗಟ್ಟಿಯಾಗಿ ಕೂಗಾಟ ಆರಂಭಿಸಿದರು. ಗೌಡರ ಹತ್ತಿರ ಏತಕ್ಕೋ ಮಾತಿಗೆಂದು ಬಂದಿದ್ದ ಮಾಯ್ಲ ಗಲಾಟೆ ಕೇಳಿ ಗಾಬರಿ ಬಿದ್ದು ಒಳಗೆ ಬಂದು ಇಬ್ಬರ ನಡುವೆ ಸಂಧಾನ ಮಾಡಿ ಅವಳು ಮನೇ ಒಳಗೆ ಬರದೆ ಹೊರಗೇ ತನ್ನ ಕೆಲಸ ಮಾಡಿ, ಹಾಗೇ ಹೋಗುವಂತೆ ಏರ್ಪಾಟು ಮಾಡುತ್ತೇನೆಂದೂ, ಸದ್ಯಕ್ಕೆ ದೆವ್ವದ ಕಾಟ ಒಂದು ಕಳೀಲಿ, ಕೆಲಸಕ್ಕೆ ಬರೋದಕ್ಕೆ ಆಳುಗಳೂ ಹೆದರ್ತಿದ್ದಾರೆ ಎಂದೂ, ಸೀತಮ್ಮನ ಬಳಿ ಅಂಗಲಾಚಿ ಒಪ್ಪಿಸಿದ. ಅಷ್ಟು ಹೊತ್ತಿಗೆ ಸರಿಯಾಗಿ ಯಾರೂ ಇರದ ಅಡಿಗೆಮನೆಯೊಳಗೆ ಧಡಧಡಧಡ ಪಾತ್ರೆಗಳು ಉರುಳಿದ ಸದ್ದಾಗಿ ಅನ್ನದ ಕೈ ಒಂದು ಹಾರಿ ಬಂದು ಆಚೆಗೆ ಬಿತ್ತು. ಮನೆಯವರು, ಮೇಸ್ತ್ರೀ, ಎಲ್ಲಾ ಮಾತು ನಿಲ್ಲಸಿ ಅತಿಮಾನುಷ ದೃಶ್ಯವೆಂಬಂತೆ ಇದನ್ನು ಕಣ್ಮುಚ್ಚದೆ ನೋಡಿದರು.

"ಯಾರಿದ್ದಾರೆ ಅಡಿಗೆಮನೆಯೊಳಗೆ?"

"ಯಾರೂ ಇಲ್ಲ!"

ಕೃಷ್ಣಪ್ಪನ ಪ್ರಶ್ನೆಗೆ ಸೀತಮ್ಮ ಉತ್ತರಿಸಿದಳು.

"ಮತ್ತೇ?" ಎಂದ ಕೃಷ್ಣಪ್ಪ.

ಕೃಷ್ಣಪ್ಪನಿಗೆ ಆಚಾರಿ ಹೇಳಿದ್ದು ನೆನಪಿಗೆ ಬಂತು. "ದೆವ್ವದ ಕಾಟ ಅಂತ ಉದಾಸೀನ ಮಾಡಿದರೆ ಆಮೆಲೆ ಪಾತ್ರೆ ಪರಡಿಗಳು ಮನೆಯೊಳಗೆಹಾರಾಡ



ತೊಡಗುತ್ತವೆ" ಎಂದಿದ್ದ ಆಚಾರಿ. ಸರಿ ದೆವ್ವದ ಕಾಟದ ಎರಡನೆಯ ಹಂತ ಆರಂಭವಾಯ್ತು ಎಂದು ಅಂದುಕೊಂಡ ಕೃಷ್ಣಪ್ಪಗೌಡ. ಮೂರನೆಯ ಹಂತ? ಅನ್ನದಲ್ಲಿ ಪಯಿಖಾನೆ! ಯೋಚಿಸುತ್ತಾ ದಿಗಿಲಿನ ಜೊತೆಗೆ ಸೀತಮ್ಮನ ಮೇಲೆ ರೋಷವೂ ಮಿಗಿಲಾಯ್ತು.

ಜಯಂತಿ ಮಾತಾಡದೆ ನಿಂತು ನೋಡುತ್ತಿದ್ದಳು.



## ಅಧ್ಯಾಯ ೩೦



ಆ ಗೋಸಾಯಿತಿ, ಮನೆಗೆ ಮಾಟ ತೆಗೆಯಲು ಬಂದವಳು ಏನೂ ಮಾಡಲಿಲ್ಲ. ಕೃಷ್ಣೇಗೌಡನ ಕೈಯಲ್ಲಿ ಒಂದಷ್ಟು ಹಣ ಕಿತ್ತುಕೊಂಡು ಮಂತ್ರ ಮಾಡುವವಳಂತೆ ನಟಿಸುತ್ತಾ ಕೋಳಿ ಬಲಿಕೊಟ್ಟು ಅದನ್ನೂ ಬಕ್ಕಣಕ್ಕೆ ಹಾಕಿಕೊಂಡು, ತಲೆ ಕೆದರಿಕೊಂಡು ದೆವ್ವ ಮೈಮೇಲೆ ಬಂದವರಂತೆ ಹೂಂಕಾರ ಮಾಡಿ "ಈ ಮನೆ ನಾಲ್ಕು ಮೂಲೇಲಿ ಕಸದಾಗೆ ಕೂದಲು ಹುದುಗಿಸಿಟ್ಟಿದ್ದಾರೆ" ಎಂದು ಎಲ್ಲರನ್ನೂ ಕರೆದುಕೊಂಡು ನಾಲ್ಕು ಮೂಲೆಗಳಿಗೂ ಹೋಗಿ ತೋಟದ ತರಗೆಲೆ ಒಳಗೆಹುಡುಕಾಡಿದಂತೆ ಮಾಡಿ ನಾಲ್ಕು ಹಿಡಿ ಕಸ ತೆಗೆದುಕೊಟ್ಟು "ಇದರಾಗಿ ಹುಡುಕಿ ನೋಡು ನರಮನುಷರ ಕೂದಲಾ ಇರ್ತೇತಿ. ತಗದು ಬೆಂಕ್ಯಾಗೆ ಹಾಕು" ಎಂದು ಹೇಳಿ ತನ್ನ ಕರ್ತವ್ಯ ನೆರವೇರಿಸಿದಳು. ಮಾಯ್ಲು ಆ ಕಸ ತಗೊಂಡು ಅದರಲ್ಲಿ ಕೂದಲು ಹುಡುಕೋದಕ್ಕೆ ಬೇಸರವಾಗಿ ನಾಲ್ಕು ಹಿಡಿ ಕಸವನ್ನಷ್ಟೂ ತೆಗೆದು ಬಚ್ಚಲು ಒಲೆಗೆ ಒಗೆದ. ಕೃಷ್ಣೇಗೌಡನ ಜೊತೆ ಪ್ರೇಮ ಸಂಬಂಧ ಬೆಳೆಸಲು ಅವಳು ಈ ಅವಕಾಶ ಉಪಯೋಗಿಸಿಬೇಕೆಂದು



ಯೋಚಿಸಿಕೊಂಡಿದ್ದಳು. ಆದರೆ ಕೃಷ್ಣೇಗೌಡ ಅವಳ ಮಂತ್ರಗಾರಿಕೆಯನ್ನೇ ಸೀರಿಯಸ್ಸಾಗಿ ತಗೊಂಡದ್ದರಿಂದ ಅವಳಿಗೆ ಆಶಾಭಂಗವಾಗಿ ಮಂತ್ರ ಮಾಟದ ಕಪಟ ನಾಟಕ ಆಡಿ ಹೋದಳು.

"ಏನಂತೆ ದೆಯ್ಯ ಹಿಡಿಸಿದಳೋ? ಬಿಡಿಸಿದಳೋ?" ಎಂದು ಸೀತಮ್ಮ ವ್ಯಂಗ್ಯವಾಗಿ ಕೇಳಿದಳು.

"ನೀನೇ ನನಗೂ ನನ್ಮನೆಗೂ ಹಿಡಿದಿರೋ ದೆಯ್ಯಾಂದಳು" ಎಂದು ಇನ್ನಷ್ಟು ವ್ಯಂಗ್ಯವಾಗಿ ಕೃಷ್ಣೇಗೌಡ ಹೇಳಿದ.

"ಅಂತಾಳವಳು ಹಾದರಗಿತ್ತಿ! ನಿಮಗೆ ನನಗಿಂತ ಊರ ಸೂಳೇರ ಮಾತು ಬೇಕಾಗಿದೆ."

ಕೃಷ್ಣಪ್ಪ ಮಾತಾಡಲಿಲ್ಲ. ತಮ್ಮಣ್ಣಗೌಡ ಹೇಳಿದ ಮಾತು ಅವನ ಮನದಲ್ಲಿ ಇದ್ದಕ್ಕಿದ್ದಂತೆ ಕೆಲಸಮಾಡತೊಡಗಿತ್ತು. ಅವನು ಮೊದಲು ದಿನ ತೋಟ ಕಾಯಲು ಹೋದಾಗ ಕೂಗಿಕೊಂಡು ಎದುರಿಗೇ ಬಂದು ನಿಂತ ನರಿಯ ದೃಶ್ಯ ಅವನಿಗೆ ಹೊಳೆದಾಗಲಿಂದ ತಮ್ಮಣ್ಣಗೌಡ ಹೇಳಿದ ಮಾತು ಹೊಸ ಅರ್ಥ ತಗೊಂಡು ಹೊಳೆಯತೊಡಗಿತು. ಅವನು ಅನ್ಯಮನಸ್ಕನಾಗೇ ಇದ್ದದನ್ನು ಕಂಡು ಸೀತಮ್ಮನಿಗೆ ಇನ್ನೂ ಕೋಪ ಬಂತು. "ನಿಮಗ್ಯಾಕೆ ನನ್ನಿಂದ ತೊಂದ್ರೆ, ನಾನತ್ಲಾಗೆ ತವರ್ಮನಿಗಾದರೂ ಹೋಗ್ತೀನಿ" ಎಂದಳು. ಅವಳು ಹೇಳಿದ್ದನ್ನು ಕಿವಿಗೆ ಹಾಕಿಕೊಳ್ಳದೆ "ಹೋಗೆ ಅತ್ಲಾಗಿ" ಎಂದು ಸಿಡುಕಿದ ಕೃಷ್ಣಪ್ಪ.

ಸಾಯಂಕಾಲ ಕಾಲೇಜಿನಿಂದ ಜಯಂತಿ ಬಂದವಳು ಅಮ್ಮ ಇಲ್ಲದುದನ್ನು ಕಂಡು ಕಣ್ಣೀರು ಹಾಕತೊಡಗಿದಾಗಲೇ ಹೆಂಡತಿ ತವರಿಗೆ ಹೊರಟು ಹೋಗಿದ್ದು ಕೃಷ್ಣೇಗೌಡನಿಗೆ ಗೊತ್ತಾದದ್ದು. "ನಾಳೆ ಜನ ಕಳಿಸಿ ಬರಕ್ಕೆ ಹೇಳ್ತೀನಿ, ನೀನ್ಯಾಕೆ ಕಣ್ಣೀರು ಹಾಕ್ತಿ?" ಎಂದು ಮಗಳಿಗೆ ಜೋರು ಮಾಡಿದ.

ಬೆಳಿಗ್ಗೆ ಎದ್ದಾಗಲೇ ಮಾಯ್ಲು ಓಡೋಡುತ್ತಾ ಹೊಸ ಸಮಸ್ಯೆಯೊಂದನ್ನು ತಂದ. ಕೂಲಿ ಲೈನಿನಲ್ಲಿ ಅವನು ತಂದು ಕೂರಿಸಿದ್ದ ಆಳುಗಳೆಲ್ಲಾ ದೆವ್ವದ ಕಾಟಕ್ಕೆ ಹೆದರಿ ರಾತ್ರೋರಾತ್ರ ಓಡಿ ಹೋಗಿದ್ದಾರೆ ಎಂದು ಗೋಳುಗರೆಯುತ್ತಾ ಕುಳಿತ. ಅವನ ಬಳಿ ತುಂಬಾ ಹಣ ಸಾಲ ತಗೊಂಡಿದ್ದರಂತೆ. ಅದೆಲ್ಲಾ ಮುಳುಗಿದಂತೆಯೇ. "ಕೊಂಚ ಹಣ ಸಾಲ ಕೊಡಿ. ಆ ಸೂಳೇಮಕ್ಳು ಎಲ್ಲಿದ್ರು ಪತ್ತೆಮಾಡಿ ವದ್ದು ಎಳಕೊಂಡು ಬರ್ತೀನಿ" ಎಂದು ಅಂಗಲಾಚಿದ. ರಾತ್ರಿ ಎಲ್ಲಾ ನಿದ್ದೆಗೆಟ್ಟು ರೋಸಿಹೋಗಿದ್ದ ಕೃಷ್ಣಪ್ಪನಿಗೆ ಮತ್ತೆ ಹರಿಜನರ ಮಾಯಿ ತಲೆಗೆ ಬಂದ. ಯೋಚಿಸಿದಂತೆ ಯೋಚಿಸಿದಂತೆ ಮಾಯಿ ಮೇಲೆ ಗುಮಾನಿ ಮೂಡಿ

ರೋಷ ನೆತ್ತಿಗೇರಿತು. ಏಕೆಂದರೆ ಮಾಯಿ ನರಿಯ ರೂಪದಲ್ಲಿ ಕೋಳಿ ಹೊರುತ್ತಾನೆಂದು ಆಗಾ ಹರಿಜನರು ಮಾತಾಡುತ್ತಿದ್ದ ಕತೆ ಒಂದು ಅವನು ಕಂಡ ನರಿಯ ಜೊತೆಗೆ ನಿನ್ನೆಯಿಂದ ಜ್ಞಾಪಕ್ಕೆ ಬರುತ್ತಿತ್ತು.

ಆ ಕತೆ ಹುಟ್ಟಿಸಲು ಕಾರಣನಾಗಿದ್ದವನು ಮಾಯಿಯೇ. ಈಗ ಅದು ಅವನಿಗೇ ಗಂಡಾಂತರ ತಂದೊಡ್ಡಿತು. ಯಃಕಶ್ಚಿತ್ ಮನುಷ್ಯನಾಗಿ ಹಡಬೆ ತಿರುಗಿಕೊಂಡಿದ್ದ ಸೋಮಾರಿ ಮಾಯಿ ಇದ್ದಕ್ಕಿದ್ದಂತೆ ಹರಿಜನರ ಧಾರ್ಮಿಕ ನಾಯಕನಾಗಿ ಮಂತ್ರವಾದಿಯಾಗಿ ರೂಪುಗೊಂಡುದಕ್ಕೆ ಒಂದು ಆಕಸ್ಮಿಕ ಕಾರಣವಾಗಿತ್ತು.

ಮಾಯಿ ಹರಿಜನರ ಕೇರಿಯ ಎದುರಿದ್ದ ಮಸ್ನಾ ಜಂಗ್ಲಿಯಲ್ಲಿ ಜೇನು ಹುಡುಕಿಕೊಂಡು ಅಲೆಯುತ್ತಿರಬೇಕಾದರೆ ಒಂದು ಸಣ್ಣ ದಿಣ್ಣೆಯ ಮೇಲೆ ಮೂರು ನಾಯಿಮರಿಯಂಥ ಪ್ರಾಣಿಗಳು ಕುಳಿತಿದ್ದವು. ಮಾಯಿಯನ್ನು ಕಂಡಾಕ್ಷಣ ಅವು ಮಾಯವಾದವು. ಮಾಯಿ ಹತ್ತಿರ ಹೋಗಿ ನೋಡಿದಾಗ ಆ ದಿಣ್ಣೆಯ ಆ ಕಡೆ ಭಾಗದಲ್ಲಿ ಒಂದು ಹಳೆಯ ಮುಳ್ಳು ಹಂದಿ ಗುದ್ದು ಇದ್ದುದು ಕಂಡಿತು. ಆ ಪ್ರಾಣಿಗಳು ಅದರೊಳಗೆ ಓಡಿದ್ದುವು. ಮಾಯಿ ಆ ಬಿಲ್ಲಕೆ ಹೊಗೆ ಹಾಕಿ ಅವನ್ನು ಈಚೆಗೆ ಬರುವಂತೆ ಮಾಡೋಣೆಂದು ಯೋಚಿಸಿದವನು ಇರಲಿ ನೋಡೋಣ ಅವಾಗಿಯೇ ಈಚೆಗೆ ಬರಬಹುದು ಎಂದು ಯೋಚಿಸಿ ಮರ ಹತ್ತಿ ಕುಳಿತ.

ಕೊಂಚ ಹೊತ್ತನನಂತರ ಇನ್ಯಾವುದೋ ಪ್ರಾಣಿ ನಡೆದು ಬರುವ ಸದ್ದು ಕೇಳಿತು. ಒಂದು ದೊಡ್ಡ ನರಿ ಕೋಳಿ ಕಚ್ಚಿಕೊಂಡು ಬಿಲದ ಬಳಿಗೆ ಬಂತು. ಮಾಯಿತಿ "ಓಹೋಹೋ" ಎಂದುಕೂಗಿದ. ನರಿ ಬಿಲದ ಬಳಿ ಕೋಳಿ ಎಸೆದು ಪರಾರಿಯಾಯ್ತು. ಮಾಯಿಗೆ ತಕ್ಷಣ ಹೊಳೆಯಿತು. ಬಿಲದೊಳಗೆ ಓಡಿದವು ನರಿಯ ಮರಿಗಳೆಂದು ತಾಯಿನರಿ ಅವುಗಳಿಗೆ ಆಹಾರ ಕೊಡಲು ಕೋಳಿ ಕದ್ದು ತಗೊಂಡು ಬಂದಿತ್ತು.

ಮಾರನೆಯ ದಿನದಿಂದ ಮಾಯಿಗೆ ಅದೇ ಕೆಲಸ ಖಾಯಂ ಆಯ್ತು. ಹೆಂಡಿರು ಮಕ್ಕಲ್ಲದೆ ಕೆಲಸವೂ ಇಲ್ಲದೆ ಪೋಲಿ ತಿರುಗಿಕೊಂಡಿದ್ದ ಮಾಯಿಗೆ ಹೇಳಿ ಮಾಡಿಸಿದಂಥ ಕೆಲಸ ದೊರತಂತಾಯ್ತು. ದಿನಾ ಹೋಗಿ ನರಿಬಿಲದ ಬಳಿ ಅವಿತು ಕೂರತೊಡಗಿದ. ಒಂದೆರಡು ಬಾರಿ ನರಿ ಕೋಳಿ ಬಿಸಾಡದೆ ಕೋಳಿ ಸಮೇತ ಓಡಿಹೋಯ್ತು. ಅನಂತರ ಮಾಯಿ ಮತ್ತೊಂದು ಉಪಾಯ ಹೂಡಿದ. ಬಿಲಕ್ಕೆ ನಾಲ್ಕಾರು ಮುಳ್ಳುಕಡ್ಡಿಗಳನ್ನು ಅಡ್ಡ ಇಟ್ಟಿರುತ್ತಿದ್ದ. ನರಿ ಅವುಗಳನ್ನು ಕಚ್ಚಿ ಎಳೆದು ಹಾಕಲು ಕೋಳಿಯನ್ನು ಕೆಳಗೆ ಹಾಕಿದ ಸಮಯ ನೋಡಿ ಮಾಯಿ



ಗಾಬರಿ ಮಾಡಿ ಕೋಳಿ ಲಪಟಾಯಿಸುತ್ತಿದ್ದ. ಮಾಯಿಯ ಕದೀಮ ಕೆಲಸ ಹೀಗೇ ನಡೆಯುತ್ತಿರಬೇಕಾದರೆ ಅತ್ತ ಹರಿಜನ ಕೇರಿಯ ಕೋಳಿಗಳೂ ನಾಪತ್ತೆಯಾಗತೊಡಗಿದವು. ಕೋಳಿ ಹುಡುಕಾಡಿದ ಹಲವರಿಗೆ ಮಾಯಿ ಗುಡಿಸಿಲ ಬಳಿ ಕೋಳಿಪುಕ್ಕದ ರಾಸಿ ಕಂಡಿತು. ಹಾಗಾದರೆ ಮಾಯಿ ಕದ್ದನೆ! ಕೆಲವರಿಗೆ ಅತ್ಯಾಶ್ಚರ್ಯವಾಯ್ತು. ಕೋಳಿ ಕದ್ದು ಒಯ್ಯುತ್ತಿರುವ ನರಿಯನ್ನು ಕಣ್ಣಾರೆ ಕಂಡವರೂ ಇದ್ದರು. ಆ ಕೋಳಿಗಳ ಪುಕ್ಕವೂ ರಾಶಿಯಲ್ಲಿ ಇದ್ದುದನ್ನು ಕಂಡರು. ಎಲ್ಲರೂ ಗುಸುಗುಸು ಪರ್ಯಾಲೋಚನೆ ನಡೆಸಿದರು. ಯಾರಿಗೂ ಯಾವುದೂ ಅರ್ಥವಾಗಲಿಲ್ಲ. ಒಬ್ಬ ಹೇಳಿದ. ಮಾಯಿ ನರಿಯನ್ನು ವಶೀಕರಣ ಮಾಡಿಕೊಂಡು ಅದರ ಕೈಯಲ್ಲಿ ಕೋಳಿ ಕಡಿಸುತ್ತಿದ್ದಾನೆ. ಅವನ ಅಜ್ಜನೋ ಮುತ್ತಜ್ಜನೋ ಈ ತರದ ಮಂತ್ರ ವಿದ್ಯೆಯಲ್ಲಿ ಪ್ರವೀಣನಾಗಿದ್ದ ಎಂದು. ಕೆಲವರು ಮಾಯಿಯೇ ನರಿಯಾಗಿ ಬಂದು ಹೋಗುತ್ತಿದ್ದಾನೆ ಎಂದು. ಕೆಲವರು ಮಾಯಿ ನರಿಯಾಗಿ ರೂಪಾಂತರಗೊಳ್ಳುವುದನ್ನು ನೋಡಿಯೇ ಇದ್ದೇವೆ ಎಂದು ಬಿಟ್ಟರು. ಹೀಗಾಗಿ ಅವರ ಸಮಾಲೋಚನೆ ಮುಗಿಯುವುದರೊಳಗೆ ಮಾಯಿಯೊಬ್ಬ ಅತಿಮಾನುಷ ಶಕ್ತಿಯ ಮಂತ್ರಗಾರನಾಗಿ ರೂಪುಗೊಂಡಿದ್ದ, ಕೆಲವರಿಗೆ ತಮ್ಮ ಜಾತಿಯೊಳಗೂ ಓರ್ವ ಅತಿಮಾನುಷ ಶಕ್ತಿಯ ಅವತಾರ ಪುರುಷ ಹುಟ್ಟಿದನಲ್ಲಾ ಎಂದು ಸಂತೋಷವೇ ಆಯ್ತು. ಅವರ ದೃಷ್ಟಿಯಲ್ಲಿ ಮಾಯಿ ಅವರ ಜಾತಿಯಲ್ಲಿ ಡಬ್ಲ್ ಡಿಗ್ರಿ ಮಾಡಿಕೊಂಡವನಿಗಿಂತ ಹೆಚ್ಚಾಗಿದ್ದ. ಅವರೆಲ್ಲಾ ಸೇರಿಕೊಂಡು ಮಾಯಿಗೆ ತಮಗೆ ತೊಂದರೆ ಕೊಡಬೇಡವೆಂದು ಮನವಿ ಮಾಡಿಕೊಳ್ಳಲು ನಿರ್ಧರಿಸಿದರು. ಒಬ್ಬ ತರುಣ ಮಾತ್ರ "ಕೋಳಿ ಕಳ್ಳ ಸೂಳೇಮಗನಿಗೆ ಮುಕ್ಳಿ ಮೇಲೆ ಒಂದು ಒತ್ತ ಒದೆಯೋದು ಬಿಟ್ಟು" ಎಂದು ಏನೋ ಭಿನ್ನಾಭಿಪ್ರಾಯ ತೆಗೆದ. ಅಷ್ಟರೊಳಗೆ ಇನ್ನೊಬ್ಬ ಅವನ ಮೇಲೆ ರೋಷದಿಂದ "ಬೋಳಿಮಗನೆ ಇಂತಾದ್ರಗೆಲ್ಲಾ ಹುಡುಗಾಟ ಆಡ್ತೀಯಾ! ಇವತ್ತು ನರಿವೇಷದಾಗೆ ಬಂದು ಕೋಳಿ ಹೊರ್ತಿದಾನೆ. ನಾಳೆ ಹುಲಿವೇಷದಾಗಿ ಬಂದು ಮನ್‌ಷರ್ನೇ ಹೋಗ್ತಾನೆ! ಸುಮ್ನೆ ಮುಕ್ಳಿ ಮುಚ್ಕಂಡಿರು" ಎಂದು ಕೂಗಿದ.

ಮಾಯಿ ಗುಡಿಸಿಲಿನಿಂದ ಹೊರಗಿಣುಕಾಗ ಕೇರಿಯವರು ಗುಂಪು ಕೂಡಿ ಬರುತ್ತಿರುವುದು ಕಂಡಿತು. ಕೋಳಿ ಕಳ್ತನ ಮಾಡಿದ ಎಂದು ತದುಕಲು ಬರುತ್ತಿದ್ದಾರೆಂದು ಪುಕ್ಕಲು ಶುರುವಾಯ್ತು. ಆದರೆ ಅವರು ಬಂದವರೇ ಮಾಯಿತಿ ಆಶ್ಚರ್ಯವಾಗುವಂತೆ ಕೈಮುಗಿದು "ನಮ್ಮ ಕೇರಿ ಮೇಲೆ ಯಾಕೆ ನಿನಗೆ ಕ್ವಾಪ" ಎಂದಾಗಲೇ ಚಾಣಾಕ್ಷ ಮಾಯಿಗೆ ಅವರು ಏನು ತಿಳುಕೊಂಡಿದ್ದರೆಂದು

ಹೊಳೆಯಿತು. ಅನಿರೀಕ್ಷಿತವಾಗಿ ಸಿಕ್ಕ ಮಂತ್ರವಾದಿ ಹುದ್ದೆಯನ್ನು ಕೃತಜ್ಞತೆಯಿಂದಲೇ ಸ್ವೀಕರಿಸಿ ಇನ್ನು ತೊಂದರೆ ಕೊಡೋಲ್ಲವೆಂದು ಅಭಯವಚನ ನೀಡಿ ಕಳಿಸಿದ. ಅನಂತರ ಕಾಡಿನ ಬಿಲಕ್ಕೆ ಹೊಗೆ ಹಾಕಿ ಆ ನರಿಯ ಮರಿಗಳನ್ನು ಸಾಯಿಸಿ ತನ್ನ ಮಾತು ಉಳಿಸಿಕೊಂಡ. ಆವತ್ತಿನಿಂದ ಉದ್ದ ಕೂದಲು ಬಿಟ್ಟು ಒಂದು ಸೋರೆ ಬುರುಡೆಯ ಏಕನಾದ ಮಾಡಿಕೊಂಡು ರಾಗವಾಗಿ ಕಣಿ, ಹಾಲಕ್ಕಿ ಶಕುನ ಹೇಳಲು ಕಲಿತ. ಅನಂತರ ಅವನಿಗೆ ಜನರೇ ಆಗೀಗ ಕೋಳಿತಂದು ಕೊಟ್ಟು ಮಂತ್ರದ ತಾಯತಿ ಮಾಡಿಕೊಂಡು ಹೋಗತೊಡಗಿದರು. ಆದರೆ ಈಗ ಕೃಷ್ಣಪ್ಪನಿಗೆ ದೆವ್ವದ ಕಾಟ ಶುರುವಾಗಿ ಅದು ಮಾಯಿಗೆ ಪ್ರಾಣಕ್ಕೆ ಬಂದಿತ್ತು.

ಕೃಷ್ಣಪ್ಪನೂ ಮಾಯ್ಲು ಮೇಸ್ತ್ರಿಯೂ ಮಾಯಿ ಗುಡಿಸಿಲಿನ ಕಡೆಗೆ ಕೋವಿ ಹಿಡಿದುಕೊಂಡು ಸನ್ನದ್ಧರಾಗಿ ಹೊರಟಿದ್ದರು. ಬೆಳಗಿನ ಹೊತ್ತಾದ್ದರಿಂದ ಮಾಯಿ ಗಂಜಿ ಉಂಡು ಕಣಿ ಹೇಳಹೋಗಲು ಗುಡಿಸಿಲಿನ ಒಳಗೆ ತನ್ನ ಒಡಕಲು ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತ ಮೇಕಪ್ ಮಡಿಕೊಳ್ಳತ್ತಿದ್ದ. ಅವನಿಗೆ ತನಗೆ ಮುಂದೊದಗಲಿದ್ದ ಯಮಗಂಡದ ಕಿಂಚಿತ್ ಪರಿವೆಯಿರಲಿಲ್ಲ.

"ಆ ಸೂಳೇಮಗನ ಬುಳ್ಡಿಗೇ ನಳಿಗೆ ಹಿಡಿದುಬಿಡಬೇಕು. ಮತ್ತೆ ಅಲ್ಲಾಡಕ್ಕೆ ಬಿಟ್ಟರೆ ಏನಾರೂ ಮಂತ್ರ ಪಟೆಕ್ಸಿ ಕಣ್ಕಟ್ಟು ಮಾಡ್ತಾನೆ." ಎಂದು ಮಾಯ್ಲು ಮೇಸ್ತ್ರಿ ಮಾಯಿಯ ಬಳಿ ಹೇಗೆ ಹುಷಾರಾಗಿರಬೇಕೆಂದು ವಿವರಿಸಿ "ನಾನಿಲ್ಲೆ ಇರ್ತೀನಿ, ನೀವೇ ಹೋಗಿಬನ್ನಿ, ಇಬ್ರೂ ಹೋದ್ರೆ ಗಲಾಟೆ" ಎಂದು ದೂರ ನಿಂತ. ಕೃಷ್ಣೇಗೌಡ ತೋಟ ಕೋವಿಯ ಜೋಡು ನಳಿಗೆಗಳ ಬಿಲ್ಲೇರಿಸಿಕೊಂಡು ಸನ್ನದ್ಧನಾಗಿ "ಆ ಸೂಳೇಮಗ ಅಲ್ಲಾಡಿದರೆ ಸಾಕು ಕೊಂದೇಬಿಡ್ತೀನಿ" ಎಂದು ಅಂದುಕೊಳ್ಳುತ್ತಾ ಮಾಯಿಯ ಗುಡಿಸಿಲೊಳಗೆ ನುಗ್ಗಿದ.

ಮೇಕಪ್ ಮಾಡಿಕೊಳ್ಳುತ್ತಿದ್ದ ಮಾಯಿಗೆ ಅವನ ಬುರುಡೆ ಹಿಂಭಾಗದಲ್ಲಿ ಎರಡು ಕರ್ರಗಿನ ನಳಿಕೆಗಳು ಪ್ರತ್ಯಕ್ಷವಾಗಿ ತಲೆಗೆ ತಾಗಿದ್ದು ಕನ್ನಡಿಯಲ್ಲಿ ಚೆನ್ನಾಗಿ ಕಾಣಿಸಿತು. ಇದೇನೆಂದು ಎಚ್ಚರಾಗುವುದರೊಳಗೆ.

"ಅಲ್ಲಾಡಬೇಡು ಹುಷಾರ್, ಅಲ್ಲಾಡಿದರೆ ಸತ್ತೆ ನೀನು ಸೂಳೇಮಗನೆ" ಎಂದಿತು ಕೃಷ್ಣೇಗೌಡನ ದನಿ.

"ಅಯ್ಯೋ ನಿಮ್ಮ ದಮ್ಮಯ್ಯ ಕೊಲ್ಲಬ್ಯಾಡಿ. ಅಂತಾ ಕೆಲಸ ನಾನೇನ್ಮಾಡಿದೆ ಅದಾದ್ರೂ ಹೇಳಿ ಕೊನ್ನಿ" ಎಂದು ದನಿಯಿಂದಲೇ ಕೃಷ್ಣಪ್ಪನದೆಂದು ಗುರುತಿಸಿ ಮಾಯಿ ಅಂಗಾಲಾಚಿದ.

"ಏನ್ಮಾಡಿದೆ ಅಂತೀಯಾ? ಸೂಳೇಮಗನೆ ತೋರ್ಸು ಈಗ ನಿನ್ನ ನರಿ



ವೇಷಾನಾ" ಎಂದು ಕೋವಿ ನಳಿಗೆಯಿಂದ ಅವನ ತಲೆಗೆ ಬಲವಾಗಿ ಕುಟ್ಟಿದ ಕೃಷ್ಣಪ್ಪ.

"ಅಯ್ಯಯ್ಯೋ ನಿಮ್ಮ ದಮ್ಮಯ್ಯಾ ನಾನ್ಯಾಕೆ ನರಿವೇಷ ಹಾಕ್ಲಿ ಸ್ವಾಮಿ. ಯಾರ್‍ಯಾರೋ ಸೂಲೇಮಕ್ಳು ಆಗದೋರ ಮಾತೆಲ್ಲಾ ಕಟ್ಟಿಕೊಂಡು ನನ್ನ ಕೊನ್ನಾಕೆ ಬಂದಿದೀರಲ್ಲಾ ತಂದೆ" ಎಂದು ಮಾಯಿ ಗೋಗರೆದ.

"ಸೂಳೇಮಗನೆ ದೆಯ್ಯಬಿಟ್ಟು ಮನೇಗೆ ಕಲ್ಲೋಡೆಸ್ತಿಯಾ? ಮಾಟಾ ಮಾಡ್ತೀಯಾ? ಮಾದರ್ಚತ್. ನಿನ್ನ ಇವತ್ತು ಜೀವ ಸಮೇತ ಬಿಡಲ್ಲ. ಅನಾಚಾರಿ ಸೂಳೇಮಗನೆ ಅದ್ಯಾವ ಮಂತ್ರ ಮಾಟ ಮಾಡ್ತೀಯಾ ತೋರ್ಸು."

"ಅಯ್ಯೋ ಗೌಡ್ರೆ, ನಿಮ್ಮ ಕಾಲಿಗೆ ಬೀಳ್ತೀನಿ. ಕಣೀ ಹೇಳ್ಕೊಂಡು ಭಿಕ್ಷಾಮಾಡೋ ಬಿಕ್ನಾಸಿ ನಾನು. ನಾನ್ಯಾವ ದೆವ್ವಾ ಇಟ್ಕೊಂಡಿದೀನಿ ಅಯ್ಯಾ! ನನ್ನ ಕೊಂದು ಪಿಶಾಚಿ ಮಾಡಬ್ಯಾಡಿ. ನನ್ನ ಜೀವ ಉಳಿಸಿ ತಂದೇ" ಎಂದು ಭಯದಿಂದ ಒರಲುತ್ತಾ ತಿರುಗಿ ಕೃಷ್ಣೇಗೌಡನ ಪಾದಗಳನ್ನು ಭದ್ರವಾಗಿ ಹಿಡುಕೊಂಡ. ಅಷ್ಟರಲ್ಲೇ ಗೌಡನ ಗಲಾಟೆ ಕೇಳಿ ಹಲವಾರು ಜನ ಹರಿಜನರು ಮಾಯಿ ಗುಡಿಸಲಿನ ಬಳಿ ಜಮಾಯಿಸಿದ್ದರು.

ಕೃಷ್ಣೇಗೌಡ ಮಾಯಿಗೆ ಹೀನಾಮಾನ ಬಯ್ದು ಒಳ್ಳೆ ಮಾತಿನಲ್ಲಿ ಛೂ ಬಿಟಿರುವ ದೆವ್ವಗಳನ್ನೆಲ್ಲಾ ಹಿಂದಕ್ಕೆ ಕರೆಸಿಕೊಳ್ಳದಿದ್ದರೆ ಇಡೀ ಕೇರಿಗೆ ಬೆಂಕಿ ಕೊಟ್ಟು ಸುಟ್ಟು ಬಿಡುತ್ತೇನೆಂದು ಕೆರಳಿ ಕೂಗಿದ. ಮಾಯಿ ಪ್ರಾಣಭಯದಿಂದ ಕಲ್ಲೂ ಕರಗುವಂತೆ ಅಂಗಲಾಚಿದ.

ಬಾಗಿಲಲ್ಲಿ ನಿಂತಿದ್ದ ಹರಿಜನರಿಗೆ ಇದೇನೆಂದು ಗೊತ್ತಾಗಲಿಲ್ಲ. ತಮ್ಮ ಆಧ್ಯಾತ್ಮಿಕ ನಾಯಕನಿಗೆ ಆಗುತ್ತಿರುವ ಅವಮಾನ ಒಂದೇ ಅವರ ಕಣ್ಣಿಗೆ ಕಂಡಂದ್ದು. ರೋಷದಿಂದ ಕೆಂಡವಾಗಿ ನಿಂತಿದ್ದ ಗೌಡನನ್ನು ನೋಡಿ ಅವರು ಏನಿದೆಂದು ಕೇಳಲೂ ಅಂಜಿದರು. ಕೃಷ್ಣೇಗೌಡನಿಗೆ ಮಾಯಿಯನ್ನು ಸಾಕಷ್ಟು ಹೆದರಿಸಿದ್ದೇನೆಂದೆನ್ನಿಸಿತು.

"ಇನ್ನೊಂದು ಸಾರಿ ಮನೆ ಮೇಲೆ ಕಲ್ಲುಗಿಲ್ಲು ಬಿತ್ತೊಂದರೆ ನಿನ್ನ ರುಂಡಾ ಹಾರಿಸಿಬಿಡ್ತೀನಿ ಹೊಲೆ ಸೂಳೇಮಗನೆ. ನನ್ಮಾತು ನಿಜಾನೋ ಸುಳ್ಳೋ ನೋಡು!" ಎಂದು ಶಪಥ ಹಾಕುತ್ತಾ ಅಲ್ಲಿಂದ ನಿರ್ಗಮಿಸಿದ.

ಗೌಡ ಹೋದುದನ್ನು ಕಂಡು ಹರಿಜನರು ಒಬ್ಬೊಬ್ಬರಾಗಿ ಮಾಯಿ ಗುಡಿಸಲಿನ ಒಳಗೆ ನುಗ್ಗಿ ಏನು? ಎತ್ತ? ಎಂದು ವಿಚಾರಿಸಿದರು. ಅವರಿಗೆ ತಲೆ ಕೆಡತೊಡಗಿತ್ತು. ಪ್ರತಿದಿನ ಒಬ್ಬೊಬ್ಬರು ಒಂದೊಂದು ಕಾರಣಕ್ಕೆ ಹರಿಜನ ಕೇರಿಗೆ

ಆಗಮಿಸಿ ಹರಿಜನ ಕೇರಿಯನ್ನು ಆಶಾಂತಿಯಿಂದ ಕಂಗೆಡಿಸಿದ್ದರು.

ಒಬ್ಬ "ಮನ್ನೆ ಬ್ಯಾಂಕ್ ಮೇನೇಜರ್ ಬಂದು ಮನೆ ಜಪ್ತೀ ಮಾಡ್ತೀನಿ, ಹಂದಿ ಹರಾಜು ಹಾಕ್ತೀನಿ ಅಂದ. ನಿನ್ನೆ ನೋಡಿದರೆ ರಾಮಾಚಾರಿ ತಮ್ಮಣ್ಣಗೌಡರ ಬಯ್ಗಳ" ಎಂದು ಗೊಣಗಿದ.

"ಈ ಗೌಡ ನೋಡಿದ್ರೆ ಕೋವಿ ಹಿಡಿದುಕೊಂಡು ಕೊನ್ನಾಕೇ ಬಂದಿದಾನೆ. ನಾವೇನು ಕೇರಿಯಾಗಿ ನರಮನುಷರ ತರ ಇರಬೇಕೋ ಸಾಯಬೇಕೋ" ಎಂದ ಮಗದೊಬ್ಬ. "ಥತ್ ಈ ಸೂಳೇಮಕ್ಳಿಗೆ ನಾವು ಸಾಬ್ರಿಗಿಂತ ಅತ್ತತ್ತ ಅಗೋದ್ವಲ್ಲ" ಎಂದ ಇನ್ನೊಬ್ಬ. "ಮಾಯಣ್ಣ ನೀನೊಂದ್ಮಾತು ಹೂ ಅನ್ನು. ನವೆಲ್ಲಾ ಅತ್ತಲಾಗಿ ಸಾಬ್ರ ಜಾತಿಗಾರೂ ಸೇರ್ಕೊಂತೀವಿ" ಎಂದು ಇನ್ನೊಬ್ಬ ಮಾಯಿಯ ಅನುಮತಿ ಕೇಳಿದ. ನಿರಾಯುಧರಾದ ಅವರಿಗ ಸದ್ಯಕ್ಕೆ ಅದೊಂದೆ ಕೈಗೊಳ್ಳಬಹುದಾದದ ಪ್ರತಿಭಟನೆಯಾಗಿ ತೋರಿತು.

"ಗೌಡನ ಮನೇಮೇಲೆ ಕಲ್ಲುಬಿದ್ರೆ ಕೇರಿಗೆ ಯಾಕೆ ಬೆಂಕಿ ಕೋಡ್ತಾನಂತೆ!" ಎಂದು ಒಬ್ಬ ಆಶ್ಚರ್ಯ ಸೂಚಿಸಿದ.

"ಆ ಗೋಸಾಯ್ತಿ ರಂಡೇರ್ನ ಮೂಸಾಕೆ ಹೋಗಿದ್ನೇನೋ. ಯಾವನೋ ಕಲ್ಲು ಹೊಡ್ದಿದಾನೆ. ಆ ನರೀ ತಿನ್ನಾ ಗೋಸಾಯಿಗಳು ಸೈತ ಸುಖವಾಗಿದ್ದಾರೆ. ನಮಗಿಲ್ಲಿ ದಿನಾ ಒಂದೊಂದು ಗಂಡಾಂತರ" ಎಂದು ಒಬ್ಬ ಹೇಳಿದ.

ಕುಲಸ್ತರ ಎದುರು ಮರ್ಯಾದೆ ಕಳೆದುಕೊಂಡನೆಂದು ಮಾಯಿ ಗೋಳೋ ಎಂದು ಅಳತೊಡಗಿದ.



## ಅಧ್ಯಾಯ ೩೧



ಗೋಸಾಯಿಬಾಬು ಪಾಟೀಲರ ರೂಮಿನೊಳಕ್ಕೆ ಹೋದುದನ್ನು ಮಹಮದ್ ತನ್ನಲ್ಯಾಬಿನ ಕಿಟಕಿಯಿಂದ ನೋಡಿದ. "ಎಲ ಸೂಳೇಮಗನೆ!" ಎಂದುಕೊಂಡು ಕೆಲಸ ಬಿಟ್ಟು ನೇರವಾಗಿ ಸಿದ್ದಪ್ಪನ ಬಲಿಗೆ ಓಡಿದ. ಸಿದ್ದಪ್ಪನಿಗೆ ಈ ವಿಷಯ ಕೇಳಿ ಮಹಮದ್‌ನಷ್ಟು ಗಾಬರಿಯಾಗದಿದ್ದರೂ ಜಯರಾಂ ಕತೆಯ ದೆಸೆಯಿಂದ ವ್ಯಾಕುಲವಾಗದೆ ಇರಲಿಲ್ಲ. "ನೋಡೀ ಸಿದ್ದಪ್ಪಾ, ಪಾಟೀಲರ ಜೀವನಕ್ಕೆ ಅಪಾಯ ಇದೆ ಅಂತ ನಂಬಿಕೊಂಡು ನಾವು ಹೀಗೆ ಸುಮ್ಮನೆ ಅದರ ರಕ್ಷಣೆ ಜವಾಬ್ದಾರೀನಲ್ಲಾ ಅಂಗಾಡಿ ಮೇಲೆ ಬಿಟ್ಟು ಕೂರೋದು ಸರೀನಾ?" ಎಂದು ಮಹಮದ್ ಸಿದ್ದಪ್ಪನ ಜೊತೆ ಪಾಟೀಲರ ರೂಮಿನ ಕಡೆಗೆ ದಾಪುಗಾಲು ಹಾಕಿದ. ಅವರ ಕಲ್ಪನೆಯಲ್ಲಿ ಈಗಾಗಲೇ ಗೋಸಾಯಿಬಾಬು ಪಾಟೀಲರಿಗೆ ಚೂರಿ ಹಾಕಿ ರಕ್ತಸಿಕ್ತವಾದ ಚೂರಿಯೊಡನೆ ನಿಂತಿರುತ್ತಾನೆ. ಪಾಟೀಲರು ರಕ್ತದ ಮಡುವಿನಲ್ಲಿ ಬಿದ್ದಿರುತ್ತಾರೆ ಎಂದು. ಇಬ್ಬರೂ ಬಿರುಗಾಳಿಯಂತೆ ಪಾಟೀಲರ ರೂಮಿನ ಒಳನುಗ್ಗಿದರು.

ಒಳನುಗ್ಗಿ ನೋಡಿದರೆ ಗೋಸಾಯಿಬಾಬು ನಿಂತುಕೊಂಡು ಪಾಟೀಲರೊಡನೆ ಮಾತಾಡುತ್ತಾ ಇದ್ದಾನೆ. ಕುರ್ಚಿಯಲ್ಲಿ ಅರಾಮವಾಗಿ ಕುಳಿತಿದ್ದ

ಪಾಟೀಲರು ಸಿದ್ದಪ್ಪನಿಗೂ ಮಹಮದ್‌ಗೂ ಕುಳಿತುಕೊಳ್ಳಲು ಹೇಳಿ ಅವರು ನುಗ್ಗಿದ ಬಿರುಸಿಗೆ ಆಶ್ಚರ್ಯ ಸೂಚಿಸಿದರು. ನುಗ್ಗಿದ ಇಬ್ಬರಿಗೂ ರೂಮೊಳಗಿನ ಶಾಂತ ಪರಿಸ್ಥಿತಿ ನೋಡಿ ನಾಚಿಕೆಯಾಯ್ತು. "ಕುಳಿತುಕೊಳ್ಳಿ ನಿಮ್ಮ ಹತ್ರ ಮಾತಾಡೋದಿದೆ. ನಾನೇ ನಿಮ್ಮನ್ನು ಕರೆಸಬೇಕಂತಿದ್ದ!" ಎಂದರು.

ಕೆಸರೂರಿನ ಪಕ್ಕಕ್ಕೆ ಈಗ ನಾಶವಾಗಿರುವ ಸ್ಟೇಟ್ ಫಾರೆಸ್ಟಿನ ಲಂಟಾನದ ಜಿಗ್ಗಿನ ಕಾಡಿನಲ್ಲಿ ಒಂದು ದೊಡ್ಡ ಧೂಪದ ಮರ ಇದೆ. ಅದು ಒಳಗೆ ಒಂದು ಮನೆಯಷ್ಟು ದೊಡ್ಡ ಟೊಳ್ಳು ಬಿದ್ದಿರೋದರಿಂದ ಸುಲೇಮನ್ ಬೇರಿ ಕಡೆಯವರು ಅದನ್ನು ಕಡೆಯದೆ ಬಿಟ್ಟಿದ್ದಾರೆ. ಅದನ್ನು ನನಗೆ ತೋರಿಸಲು ನಿನಗೆ ಸಾಧ್ಯವೇ? ಅಂತ ಪಾಟೀಲರು ಗೋಸಾಯಿಬಾಬೂನ ಕೇಳುತ್ತಿದ್ದರು. ಅದಕ್ಕೆ ಗೋಸಾಯಿಬಾಬು "ಅದನ್ನು ತೋರಿಸೋದೇನೂ ದೊಡ್ಡ ವಿಷಯ ಅಲ್ಲ. ಹೋದವರ್ಷ ಅದರಲ್ಲಿ ಸೇರುಗಟ್ಲೆ ಧೂಪ ತೆಗೆದಿದ್ದೆ. ಆದರೆ ಮನುಷ್ಯ ಹೋಗಲಾರದಂಥ ಭಯಂಕರ ಲಂಟಾನದ ಜಿಗ್ಗು ಬೆಳೆದು ಬಿಟ್ಟಿದೆಯಲ್ಲಾ! ಈ ಬೇಸಿಗೆಗೆ ಅದೆಲ್ಲಾ ಒಣಗಿ ಗರಗಸದ ಕಾಡಿನೊಳಗೆ ಓಡಾಡಿದ ಹಾಗಾಗುತ್ತದೆ. ಹೋದವರ್ಷ ಲಂಟಾನ ಇಷ್ಟೊಂದು ಇರಲಿಲ್ಲ. ಈಗ ಸ್ವಲ್ಪ ನುಸಿಯುವಷ್ಟಾದರೂ ದಾರಿಮಾಡಿ, ಆಮೇಲೆ ನಿಮಗೆ ಆ ಮರ ತೋರಿಸೋ ಯೋಚನೆ ಮಾಡಬೇಕು. ಅದಕ್ಕೆ ಕೊಂಚಕಾಲ ತಾಳಬೇಕು" ಎಂದು ಹೇಳಿದ.

ಗೋಸಾಯಿಬಾಬು ಕಾಡಿನಲ್ಲಿ ಧೂಪದ ಮರದ ಗೋಂದು, ವಂದೆಲಗದ ಚಕ್ಕೆ, ಕುಳುಮಾವಿನ ತೊಗಟೆ ಮುಂತಾದವನ್ನು ಸಂಗ್ರಹಿಸಿ ಕೆಸರೂರಿನಲ್ಲಿರುವಷ್ಟು ಕಾಲ ಧನಾರ್ಜನೆ ಮಾಡುತ್ತಿದ್ದ. ಕೆಸರೂರಿನಲ್ಲಿ ಊದುಕಡ್ಡಿ ಮಾಡುತ್ತಿದ್ದ ಇಕ್ಬಾಲ್ ಸಾಬಿಗೆ ಅವುಗಳನ್ನು ಮಾರುತ್ತಿದ್ದ. ಕೆಸರೂರಿನಲ್ಲಿ ಇದ್ದ ಒಂದೇ ಒಂದು ಬೆಂಕಿಕಡ್ಡಿ ಕಾರ್ಖಾನೆಯೂ ಅನೇಕ ತಕರಾರುಗಳಿಂದ ರಾಮಾಚಾರಿಯ ಕಮ್ಯುನಿಸ್ಟ್ ಪಕ್ಷದ ಹೋರಾಟದಿಂದ ಲುಕ್ಸಾನು ಮಾಡಿಕೊಂಡು ಮುಚ್ಚಿದ ಮೇಲೆ ಕೆಸರೂರಿನ ಸಾಬರಕೇರಿ ಹೆಂಗಸರಿಗೆ ಬೇರೇನೂ ಕೆಲಸವಿರಲಿಲ್ಲ. ಅವರು ಇಕ್ಬಾಲ್ ಸಾಬಿ ಹತ್ತಿರ ಮಡ್ಡಿ ಹಾಗೂ ಕಡ್ಡಿಗಳನ್ನು ತಂದು ತಿಕ್ಕಿ ಊದಿನಕಡ್ಡಿ ಗೃಹ ಕೈಗಾರಿಕೆ ಮಾಡುತ್ತಿದ್ದರು. ಇಕ್ಬಾಲ್ ಸಾಬಿಯ ದಿಲ್‌ದಾರ್ ಅಗರಬತ್ತಿಗಳನ್ನು ಸುಲೇಮಾನ್ ಬೇರಿ ಅರಬ್ ದೇಶಗಳಿಗೆ ಮಾರುತ್ತಿದ್ದ. ಅದಕ್ಕೆ ಅಗತ್ಯವಾದ ಧೂಪದ ಗೊಂದು, ವಂದೆಲಗದ ಚಕ್ಕೆ, ಕುಳುಮಾವಿನ ತೊಗಟೆ ಇತ್ಯಾದಿಗಳನ್ನು ಕಾಡಿನಿಂದ ತಂದು ಅವನಿಗೆ ಒದಗಿಸುವವರಲ್ಲಿ ಗೋಸಾಯಿಬಾಬು ಪ್ರಮುಖನಾಗಿದ್ದು. ಸಾಧಾರಣವಾಗಿ ಅಲ್ಲಿಗೆ ಬೇಸಿಗೆಯಲ್ಲಿ ಗೊಸಾಯಿಗಳ ಈ ಗುಂಪು ಬಂದು



ಬಿಡಾರ ಹಾಕುತ್ತಿದ್ದುದರಿಂದ ಮಳೇಗಾಲ ಆರಂಭವಾಗುವವರೆಗೆ ಗೊಸಾಯಿಬಾಬುಗೆ ಇದೇ ಕೆಲಸವಾಗುತ್ತಿತ್ತು. ಮಳೇಗಾಲ ಆರಂಭವಾದರೆ ಧೂಪದ ಮರದ ಗೋಂದು ನಿಲ್ಲುತ್ತಿತ್ತು. ಊದಿನಕಡ್ಡಿ ಒಣಗಿಸಲು ಬಿಸಿಲಲ್ಲಿದೆ ಇಕ್ಬಾಲ್ ಸಾಬಿಯ ದಿಲ್‌ದಾರ್ ಅಗರಬತ್ತಿ ಮ್ಯಾನುಫ್ಯಾಕ್ಚರಿಂಗ್ ಕಂಪೆನಿಯೂ ನಿಲ್ಲುತ್ತಿತ್ತು. ಆ ವೇಳೆ ಗೋಸಾಯಿಗಳು ಅಲ್ಲಿಂದ ಗುಳೆ ಹೊರಡುತ್ತಿದ್ದರು.

ಬಾಬು ಅತ್ತ ಹೋದ ಕೂಡಲೇ ಪಾಟೀಲರು ಇತ್ತ ತಿರುಗಿದರು.

"ಯಾಕ್ರಯ್ಯ ಹಾಗೆ ಗೂಳಿತರ ನುಗ್ಗಿದಿರಿ. ಯಾರಾದರೂ ನನ್ನ ಖೂನಿ ಆಯ್ತು ಅಂತ ವರ್ತಮಾನ ಕೊಟ್ಟರೋ? ನಾನೇ ಇವನ್ನ ಕರೆಸಿದ್ದು. ಅದ್ಯಾಕೆ ಅಂತ ಈಗ ನಿಮಗೆ ತಿಳಿಸ್ತೀನಿ. ಎಂತಿದ್ದರೂ ಈವತ್ತು ನಿಮ್ಮನ್ನ ಕರೆಸಲೇಬೇಕಿತ್ತು. ಈ ವಿಷಯ ತಿಳಿಸೋದಕ್ಕೆ. ನೀವೇ ಬಂದ್ರಲ್ಲಾ ಒಳ್ಳೆದಾಯ್ತು" ಎಂದರು ಪಾಟೀಲರು.

"ಸಾರ್ ನೀವು ತಿಳಿಸೋ ವಿಷ್ಯ ಏನಾದರೂ ಇರಲಿ. ಆ ಗೋಸಾಯಿ ನಿಮ್ಮ ಕೋಣೆ ಒಳಗೆ ಹೋಗ್ತಿರೋದನ್ನ ನನಗೆ ಮಹಮದ್ ತಿಳಿಸಿದ. ಆ ಅಯೋಗ್ಯರಿಂದ ಆಗ್ತಿರೋ ಅನಾಹುತ ಅನಾಚಾರ ಎಲ್ಲಾ ನಿಮಗೆ ಹೇಳಿದೀನಲ್ಲಾ. ಅವರನ್ನ ಊರಿಂದ ಒದ್ದೋಡಿಸಬೇಕು ಅಂತ ನಾವು ತಾಕೀತು ಮಾಡ್ತಿದ್ದರೆ ನೀವು ಅವನ್ನ ಕರೆಸಿಕೊಂಡು...!" ಎಂದು ಸಿದ್ದಪ್ಪ ಮಾತಾಡುತ್ತಿರಬೇಕಾದರೆ ಅರ್ಧದಲ್ಲೇ ತಡೆದು "ಒದ್ದೋಡಿಸೋದನ್ನ ನಿಧಾನಕ್ಕೆ ಮಾಡು ಸಿದ್ದಪ್ಪಾ. ಸದ್ಯಕ್ಕೆ ಅವನಿಂದ ಆಗಬೇಕಾದ ಒಂದು ಕೆಲಸ ಇದೆ. ಜೋಗಿಹಾಳರ ನೋಟ್ಸಿನಲ್ಲಿ ಕೆಸರೂರು ಹೈಬ್ರೀಡ್ ಗಿಡ ಸುಲೇಮಾನ್ ಬೇರಿ ಕಡೆಯವರು ಬೋಳಿಸಿರೋ ಮನ್ನಾ ಜಂಗ್ಲಿ ಒಳಗೆ, ಆ ಕಾಡಿನ ಹಳ್ಳ ಒಂದರ ಪಕ್ಕ ಇರೋ ಬೃಹದಾಕಾರದ ಧೂಪದ ಮರದ ಅಡಿ ಇದೆ. ಆ ಗಿಡ ಹಿಂದೆ ಕಾಡಿನಲ್ಲಿ ತಾನಾಗೇ ಹುಟ್ಟಿ ಬೆಳೆದ ಏಲಕ್ಕಿ ಗಿಡಗಳಲ್ಲಿ ಒಂದಿರಬೇಕು. ಮಿಕ್ಕವೆಲ್ಲಾ ಬಿಸಿಲಿನ ಹೊಡೆತ, ರೋಗ, ಕ್ರಿಮಿ ಕೀಟಗಳ ಭಾದೇ ಇವುಗಳಿಂದ ನಾಶವಾದರೂ ಇದು ಮಾತ್ರ ಅವನ್ನೆಲ್ಲಾ ಪ್ರತಿರೋಧಿಸಿ ಸೊಂಪಾಗಿ ಬೆಳೆಯುತ್ತಾ ಇದೆ. ಇದನ್ನು ಮುಟ್ಟೋದಕ್ಕೆ ಮೊದಲು ಇದರ ಬೆಳವಣಿಗೆಗೆ ಇದು ಇರುವ ಪರಿಸರ ಅದಕ್ಕೆಎಷ್ಟು ಕಾರಣ ಎಂದು ಅಭ್ಯಾಸ ಮಾಡದೆ ಇದನ್ನು ಕೀಳಬಾರದು ಅಂತ ಬರ್ದಿದಾರೆ. ಅದಕ್ಕೇ ಇದನ್ನು ನಿಮಗೆ ತಿಳಿಸಬೇಕೂಂತ ನಿಮ್ಮನ್ನ ಕರೆಸಬೇಕೆಂದಿದ್ದು" ಎಂದರೆ.

"ಸಾರ್ ಏನೇ ಆದರೂ ನೀವು ಈ ಗೋಸಾಯಿಗಳ ಜೊತೆ ವ್ಯವಹರಿಸೋದು ಸರಿಯಲ್ಲಾ ಸಾರ್" ಎಂದ ಸಿದ್ದಪ್ಪ.

"ಸಿದ್ದಪ್ಪಾ, ಅವರು ಇವತ್ತು ಪರಿಸರ ನಾಶ ಮಾಡೋದಕ್ಕೆ ಅವರ

ಜೀವನಕ್ರಮ, ಆ ಜೀವನಕ್ರಮಕ್ಕೆ ಒಂದು ಚರಿತ್ರೆ ಇಷ್ಟೆಲ್ಲಾ ಇರಬೇಕಾದರೆ ಅವರ ವಿರುದ್ಧ ದ್ವೇಷ ಸಾಧನೆ ಮಾಡೋದು ಸರಿಯಲ್ಲ. ಅವರಿಂದ ಆಗುತ್ತಿರುವ ಪರಿಸರ ನಾಶಾನ ಈಗಿಂದೀಗಲೇ ನಿಲ್ಲಸಬೇಕಾದ್ದು ಬಹಳ ಮುಖ್ಯ ಅನ್ನೋದನ್ನ ಒಪ್ಪುತ್ತೇನೆ. ಆದರೆ ಅವರ ಕೌಶಲ್ಯವನ್ನೇ ಉಪಯೋಗಿಸಿಕೊಂಡು ಪರಿಸರ ಅಭಿವೃದ್ಧಿ ಮಾಡೋ ಅಷ್ಟು ಪ್ರಬುದ್ಧವಾಗಿಲ್ಲಪ್ಪಾ ಈಗ ನಾವು ಕಟ್ಟಿರೋ ಸಮಾಜ. ಅದು ನಮ್ಮೆಲ್ಲರ ಹೊಣೆಗಾರಿಕೆ ಅಲ್ವೇ ಸಿದ್ದಪ್ಪಾ?"

"ಇದೊಂದೇ ಕಾರಣ ಅಲ್ಲಾ ಸಾರ್. ನಿಮಗೆ ಜಯರಾಮನ ಕತೆ ಹೇಳ್ತ ಈ ವಿಷ್ಯ ಬಿಟ್ಟು ಬಿಟ್ಟಿದ್ವೋ ಏನೋ....!"

"ನನಗೆ ಎಲ್ಲಯ್ಯ ತಲೇಲಿ ಅಷ್ಟೊಂದು ಜಾಗ ಇದೆ. ಜೋಗಿಹಾಳರ ನೋಟ್ಸು ಅಧ್ಯಯನ ಮಾಡ್ತ ಜಯರಾಮನ ಕತೆ ಅರ್ಧಕ್ಕರ್ಧ ಮರೆತೇ ಹೋಯ್ತು."

"ಜಯರಾಮ ಹೇಳಿರೋದು ಜೋಗಿಹಾಳರ ಕೊಲೆ ಮಾಡಿರೋದು ಈ ಗೋಸಾಯಿಗಳೇ ಯಾರೋ! ಅವರ ಮುಖ್ಯಸ್ಥರಲ್ಲಿ ಒಬ್ಬನಾದ ಮ್ಯಾಜಿಶಿಯನ್ ಮುತ್ತುನೇ ಇರಬೇಕು ಅಂತ ಸಾರ್. ನಾವು ಸೀರಿಯಸ್ಸಾಗಿ ತಗೊಂಡಿರೋ ಕತೇನ ನೀವು ಹಗುರವಾಗಿ ಪರಿಗಣಿಸಿದಿರೋದೆ ನಮಗೆ ಬಂದಿರೋ ತೊಂದ್ರೆ ಸಾರ್."

"ಈ ತರಹ ಜ್ಯೋತಿಷ್ಯ ಹೇಳಿ ಎಲ್ಲರಿಗೂ ಗಾಬರಿ ಮಾಡ್ತಿದ್ದಾರಲ್ಲ ಆ ಜಯರಾಂ. ಆತನನ್ನು ವಿಚಾರವಾದಿ ಅಂತ ಕರೆಯೋದಾದರೂ ಹೇಗಯ್ಯ?"

"ಆ ಜಯರಾಂಗೂ ರಾಮಚಂದ್ರನಿಗೂ ವಿಪರೀತ ಬುದ್ಧಿ ಆಗಿ ಈಗ ಅವರ ವಾದ ತರ್ಕಗಳಲ್ಲಿ ವಿಚಾರವಾದ ಯಾವುದು ಮೂಢನಂಬಿಕೆ ಯಾವುದು ಗೊತ್ತಾಗದಂತೆ ಎಲ್ಲಾ ಕಲಸು ಮೇಲೋಗರ ಆಗೋಗಿದೆ ಸಾರ್. ಜೊತೆಗೆ ಅಂಗಾಡಿ ಬೇರೆ ನಮಗೆ ದಿನಾ ಸಿಕ್ಕು ಬೆಳಗಿನಿಂದ ಸಂಜೆವರೆಗಿನ ವಿವರ ವರದಿ ತಗೋತಿದ್ದಾರೆ ಸಾರ್."

"ಹಾಗಾದರೆ ಇವತ್ತು ಈ ಗೋಸಾಯಿಬಾಬೂನ ನಾನು ಕರೆಸಿದ್ದು. ಕೆಸರೂರು ಹೈಬ್ರೀಡ್ ಇನ್ನೂ ಕಾಡಿನಲ್ಲೇ ಇರೋದು. ಎಲ್ಲಾ ಸಂಗತೀನೂ ಇವತ್ತು ರಿಪೋರ್ಟ್ ಆಗುತ್ತೇ ಅನ್ನೂ."

"ಹೌದು ಸಾರ್. ಸತ್ಯ ಹೇಳಬೇಕೆಂದರೆ ಅವರಿಗೆ ಹೇಳಬೇಕಾದ ಇವತ್ತಿನ ಮುಖ್ಯ ವಿಷಯ ಇದು. ಯಾಕೆಂದರೆ ನಿಮ್ಮ ಜೀವದ ಜವಾಬ್ದಾರಿ ಹೊತ್ತಿರೋರು ಅವರೇ. ನೀವೇ ಏನಾದರೂ ಇದನ್ನು ತೀರಾ ರಹಸ್ಯ ಹೇಳಕೂಡದು ಅಂತ ಆಜ್ಞೆ ಮಾಡದ ಹೊರತು ಇದನ್ನು ಅವರಿಗೆ ಹೇಳಲೇಬೇಕಾಗುತ್ತೆ ಸಾರ್."



"ಏನು ಬೇಕಾದರೂ ಹೇಳಿಕೋ. ನೀವೆಲ್ಲಾ ಅತಿ ಬುದ್ಧಿಯಾ ಅವಿವೇಕಕ್ಕೆ ಸಿಕ್ಕಿಕೊಂಡಿದೀರ. ನಿಮ್ಮನ್ನು ಸಾಯಂಕಾಲ ಟಿಬಿಯಲ್ಲಿ ನೋಡ್ತೀನಿ. ನಿಮಗೆಲ್ಲಾ ಒಂದು ಷಾಕ್ ಚಿಕಿತ್ಸೆ ಕೊಡೋದಿದೆ. ಯಾಕೆಂದರೆ ಜೋಗಿಹಾಳರು ಸತ್ತೇ ಇಲ್ಲ!" ಎಂದರು.

ಸಿದ್ದಪ್ಪ ಮಹಮದ್ ಇಬ್ಬರೂ ಬಿಟ್ಟಬಾಯಿ ತೆರೆದ ಕಂಗಳಲ್ಲಿ ಗರಿಬಡಿದವರಂತೆ ಕುಳಿತಿದ್ದರು. ಜೋಗಿಹಾಳರ ನೋಟ್ಸು ಪರ್ಸನಲ್ ಡೈರಿಗಳನ್ನೆಲ್ಲಾ ಅಭ್ಯಾಸ ಮಾಡಿರೋ ಪಾಟೀಲರ ಮಾತುಗಳು ಅವರಿಗೆ ಸಿಡಿಲು ಬಡಿದಂತೆ ತಾಗಿತ್ತು. ಆಮೇಲೆ ಸುಧಾರಿಸಿಕೊಳ್ಳುತ್ತಾ ಏನೂ ಮಾತಾಡದೆ ಎದ್ದು ನಡೆದರು.

## ಅಧ್ಯಾಯ ೩೨

ಪಾಟೀಲರ ಹತ್ತಿರ ದೆವ್ವದ ಕಾಟಕ್ಕೆ ಯಾವುದಾದರೂ ಮಂತ್ರಿಸಿದ ವಿಭೂತೀನೋ ತಾಯಿತಾನೋ ಕೋಡೋದಕ್ಕಾಗುತ್ತೇನು ಕೇಳಿಕೊಂಡು ಬಾ ಎಂದು ಮಾಯ್ಲ ಮೇಸ್ತ್ರಿಯನ್ನು ಕೃಷ್ಣಗೌಡ ಕಳಿಸಿದ್ದಕ್ಕೆ ಅವರು ಒಮ್ಮೆಲೇ ಅವನ ಮೇಲೆ ರೇಗಿ "ಗೆಟೌಟ್" ಎಂದು ಹೊರಹಾಕಿದರಂತೆ. ಅದಕ್ಕೆ ಕೃಷ್ಣೇಗೌಡನೇ ಕೊನೆಗೆ ಅವರ ಬಳಿಗೆ ಹೋಗಿ ದೆವ್ವದ ಕಾಟವನ್ನೆಲ್ಲಾ ಹೇಳಿ ಗೋಲು ತೋಡಿಕೊಂಡ. ಅದನ್ನೆಲ್ಲ ಕೇಳಿದನಂತರ ಕೊಂಚ ಮನಕರಗಿ "ಹೋಗಿ ರಾಮಚಂದ್ರನನ್ನು ನೋಡಿ. ಇಂಥದನ್ನೆಲ್ಲ ತನಿಖೆ ಮಾಡೋದಕ್ಕೇ ಅವರು ಒಂದು ಸಂಘ ಮಾಡಿದ್ದಾರೆ" ಎಂದು ಹೇಳಿಕಳಿಸಿದರು. ರಾಮಚಂದ್ರ ಜಯಂತಿಯ ಮೇಷ್ಟರಾದ್ದರಿಂದ ಅವಳನ್ನೂ ಕರೆದುಕೊಂಡು ಕೃಷ್ಣೇಗೌಡ ಅವನ ಮನೆಗೇ ಹೋದ. ಕೃಷ್ಣೇಗೌಡ ರಾಮಚಂದ್ರನಿಗೆ ಮನೆಗೆ ಬರಲು ಕಾರಣ ತಿಳಿಸಿದ ಕೂಡಲೆ ರಾಮಚಂದ್ರ ಗಾಬರಿ ಬಿದ್ದ.

"ಅರೆರೆ! ಅವರು ಯಾಕೆ ನನ್ನ ಬಳಿಗೆ ಕಳಿಸಿದರು. ನಾನು ಯಾವ ಮಂತ್ರ ತಂತ್ರ ವಿಭೂತೀನೂ ಕೊಡೋಲ್ಲವಲ್ಲ! ಅಷ್ಟೇ ಅಲ್ಲ ನಾನು ಅದಕ್ಕೆ ಬದ್ಧ ವಿರೋಧಿ ಕೂಡಾ" ಎಂದ.

ಅವನ ಗಾಬರಿ ನೊಡಿ ಜಯಂತಿಯ ಮುಖದ ಮೇಲೆ ನಗು ಮೂಡಿತು. "ಅದಕ್ಕೇ ಸರ್ ಪಾಟೀಲರು ಕಳಿಸಿರೋದು. ಜಯರಾಂ ಅಂತ ನಿಮ್ಮ ಸ್ನೇಹಿತರು ಇದ್ದಾರಲ್ಲ. ಅವರನ್ನ ಕೋವೂರ್ ಅಂತ ಯಾರೋ ವಿಜ್ಞಾನಿ ಇಂಥ ದೆವ್ವದ ಕಾಟ ಪತ್ತೆಮಾಡಿ ಪರಿಹರಿಸೊದಕ್ಕೆ ನಿಯಮಿಸಿದ್ದಾರಂತಲ್ಲಾ ಸಾರ್. ಅವರೆಲ್ಲಾ ಏನಾದರೂ ಸಹಾಯ ಮಾಡಬಹುದು ಅಂತ ಹೇಳಿದರು ಸಾರ್" ಎಂದಳು.

"ಓಹೋ! ಹಾಗೋ! ಸರಿ. ನಮ್ಮ ವಿಚಾರವಾದಿಗಳ ಸಂಘಕ್ಕೆ ಒಂದು ಕೇಸು ಕಳಿಸಿದ್ದಾರೆ ಅನ್ನಿ! ನಮ್ಮ ಮಹಮದ್ ರಫಿ ಇದಾನಲ್ಲಮ್ಮ ಅವನೇ ಆ ಸಂಘದ ಕಾರ್ಯದರ್ಶಿ. ಡಾಕ್ಟರ್ ಕೋವೂರ್ ಅಂತ ಸಿಲೋನಿನ ಮನೋವಿಜ್ಞಾನಿ ಒಬ್ಬರು ವಿಚಾರವಾದಿ ಆಂದೋಳನಾನ ಪ್ರಪಂಚಾದಾದ್ಯಂತ ಆರಂಭಿಸಿದ್ದಾರೆ. ಈ ಅಲೌಕಿಕ ಘಟನೆಗಳಲ್ಲಿ ದೆವ್ವ ಭೂತ ಇರೋದು ನಿಜ



ಅಂತ ಸಾಧಿಸಿದವರಿಗೆ ಲಕ್ಷಾಂತರ ರೂಪಾಯಿ ಬಹುಮಾನಾಂತ ಪಣ ಇಟ್ಟಿದ್ದಾರೆ. ಕರ್ನಾಟಕಕ್ಕೆ ಜಯರಾಂ ಅದರ ಪ್ರತಿನಿಧಿ, ರಮೇಶ, ಅಂಗಾರ, ರಫಿ ಎಲ್ಲಾ ಸೇರಿ ಇಲ್ಲಿ ವಿಚಾರವಾದಿಗಳ ಸಂಘ ಮಾಡಿದ್ದಾರೆ. ಜಯರಾಂ ಅದರ ಅಧ್ಯಕ್ಷ" ತಮ್ಮ ಸಂಘದ ಇತ್ಯೋಪರಿಗಳನ್ನೆಲ್ಲಾ ಅವರೆದುರು ವಿವರಿಸಿದ ರಾಮಚಂದ್ರ.

"ಸಾರ್ ಈ ದೆವ್ವದ ಕಾಟ ತಪ್ಪಿದರೆ ಕೋವೂರ್ ಬಹುಮಾನ ಇರಲಿ ನಾನೇ ನನ್ನ ಕೈಲಾದಷ್ಟು ನಿಮ್ಮ ಸಂಘಕ್ಕೆ ಕೋಡ್ತೀನಿ ಸಾರ್. ನನಗೀಗ ಎಷ್ಟೊಂದು ತೊಂದರೆ ಆಗಿದೆ ಅಂದರೆ ದೆವ್ವದ ಕಾಟಕ್ಕೆ ಹೆಂಡತಿ ತವರು ಮನೇಗೆ ಹೊರಟುಹೋಗಿದ್ದಾಳೆ ಸಾರ್. ಆಳುಗಳೆಲ್ಲಾ ತೋಟದಲ್ಲಿ ರಣ ತಿರುಗ್ತದೆ ಅಂತ ತೋಟಕ್ಕೆ ಬರೋದಿಲ್ಲ. ಹೊಲೇರಿಗೂ ನನಗೂ ಜಗಳ ಆಗಿ ನಮ್ಮ ಮೇಸ್ತ್ರಿ ಹತ್ತಿರ ನಿಮ್ಮ ತೋಟಕ್ಕೆ ಬೆಂಕಿ ಕೊಡ್ತೀವಿ ಅಂತ ಕೂಗಾಡಿದರಂತೆ. ಹಿಂಗೆಲ್ಲಾ ಆಗಿ ಮನಸ್ಸೇ ಕೆಟ್ಟುಹೋಗಿದೆ ಸಾರ್" ಎಂದು ತನ್ನ ಚಿಂತೆ ತೋಡಿಕೊಂಡ. ಅವನಿಗೆ ದೆವ್ವದ ಕಾಟಕ್ಕೆ ಸಿಕ್ಕಿಕೊಂಡವರಿಗೂ ಸಹ ಒಂದು ಸಹಾನುಭೂತಿಪರ ಸಂಘ ಇದೆ ಎಂದು ತಿಳಿದು ಸಂತೋಷವಾಗಿತ್ತು.

"ಯಾರದೋ ಪೋಕ್ರಿಗಳ ಕೆಲಸ ಇದು. ನಮ್ಮ ಹುಡುಗರಿಗೆ ಒಂದು ಮಾತು ಹೇಳಿದ್ದರೆ ಈ ಸಮಸ್ಯೆ ಎಂದೋ ಬಗೆಹರಿದುಬಿಡ್ತಿತ್ತು. ಅವರು ಅತ್ಯುತ್ಸಾಹದ ಭರದಲ್ಲಿ ನಿರಪರಾಧಿಗಳಿಗೆ ಶಿಕ್ಷಿಸಿದರೆ ಕಷ್ಟ" ಎಂದು ರಾಮಚಂದ್ರ ಹೇಳಿದವರ "ಜೊತೆಗೆ ಮೊನ್ನೆ ಇವರೇ ಕಲ್ಲು ಹೊಡೆದರು ಅಂತ ಬೇರೆ ನಿಮ್ಮ ಆಳುಗಳು ಹೊಡೆದಾಟ ಮಾಡಿ ಅವರ ಮನಸ್ಸಿಗೆ ತುಂಬಾ ನೋವಾಗಿದೆ. ಆದರೂ ಹೇಳಿನೋಡುತ್ತೇನೆ" ಎಂದು ಯೋಚಿಸತೊಡಗಿದ. ಜಯಂತಿ ಮುಖ ಸಪ್ಪಗಾದುದು ಅವನ ಗಮನಕ್ಕೆ ಬೀಳದಿರಲಿಲ್ಲ.

"ಅಯ್ಯೋ ಈ ದೆವ್ವದ ಕಾಟದಲ್ಲಿ ಅದೊಂದೇ ಅಲ್ಲಾ ಸಾರ್ ಎಡವಟ್ಟಾಗಿರೋದು. ನಾನು ಎಲ್ಲರನ್ನೂ ಗುಮಾನಿ ಮಾಡಿ ಈಗ ಸುತ್ತುಮುತ್ತೂ ಇರೊರೆಲ್ಲಾ ದೂರಾಗಿಬಿಟ್ಟಿದ್ದಾರೆ ಸಾರ್. ನನ್ನ ಸ್ನೇಹಿತರೊಬ್ರು ಹೇಳಿದರು, ಇದನ್ನು ಉದಾಸೀನ ಮಾಡಿದರೆ ಮುಂದೆ ಮನೆಯೊಳಗೆ ಪಾತ್ರೆ ಪರಡಿ ಹಾರಾಡೋದು. ಅನ್ನಕ್ಕೆ ಪಾಯಿಖಾನೆ ಬೀಳೋದು, ಬೆಂಕಿ ಹತ್ತಿಕೊಳ್ಳೋದು ಇವೆಲ್ಲಾ ಆರಂಭವಾಗುತ್ತೆ ಅಂತ. ಈಗ ಪಾತ್ರೆ ಹಾರಾಟ ಶುರುವಾಗಿದೆ ಸಾರ್. ನಾನೀಗ ಪ್ರತಿ ತುತ್ತನ್ನೂ ವಾಸನೆ ನೋಡಿ ನೋಡಿ ತಿಂತಾ ಇದ್ದೀನಿ" ಕೃಷ್ಣೇಗೌಡ ಹೇಳಿದ. ತಮ್ಮ ಮನೆಯ ಸಮಾಚಾರವನ್ನೆಲ್ಲ ಕಾಲೇಜಿನ ಗುರುಗಳ ಬಳಿ ವರದಿ ಮಾಡುತ್ತಿರುವುದು ಜಯಂತಿಗೆ ನಾಚಿಕೆ ತಂದಿತು.

"ನಿಮ್ಮ ತೊಂದರೆ ನನಗೆ ಚೆನ್ನಾಗಿ ಅರ್ಥವಾಗುತ್ತೆ ಕೃಷ್ಣೇಗೌಡರೆ. ನಮ್ಮ ಹುಡುಗರಿಗೆ ಹೇಳ್ತೀನಿ. ಇನ್ನೂ ಹುಡುಗರಲ್ಲವೆ. ನಿನ್ನೆ ಆಗಿದ್ದನ್ನು ಇವತ್ತು ಮರೆತಿರ್ತಾರೆ. ಆದರೆ ಒಂದು ಹೆಳಿರ್ತೀನಿ ನೋಡಿ. ನಾಲ್ಕಾರು ಕಲ್ಲು ಹೆಚ್ಚಿಗೆ ಉರುಳಾಡಿದವು ಅಂತ ಇವರು ಬಂದು ದೆವ್ವಾನ ಕೆರಳಿಸಿಬಿಟ್ಟರು ಅಂತ ಮಾತ್ರ ನಿಷ್ಠೂರ ಮಾಡಬಾರದು" ಎಂದು ಎಚ್ಚರಿಕೆ ಕೊಟ್ಟ. ತಮ್ಮ ಕ್ಲಾಸಿನ ಹುಡುಗರು ತಮ್ಮ ಮನೆಗೆ ಬರ್ತಾರೆಂದು ತಿಳಿದು ಜಯಂತಿಗೆ ಮೈ ಪುಲಕವಾಯ್ತು. ದೆವ್ವಕ್ಕೆ ಅವಳು ಮನಸಾರೆ ವಂದಿಸಿದಳು. ಅಣ್ಣ ತಮ್ಮಂದಿರೊಬ್ಬರೂ ಇಲ್ಲದ ಅವಳಿಗೆ ಗಂಡುಹುಡುಗರ ಬಗ್ಗೆ ಎಲ್ಲಿಲ್ಲದ ಕುತೂಹಲ ಇತ್ತು.

"ದೆವ್ವಕ್ಕೆ ಹೆದರಿ ಈ ತರ ರೋಗದ ಮನುಷ್ಯನಂತೆ ಬದುಕೋದರ ಬದಲು ಅದೇನಾಗುತ್ತೋ ಇದು ಎಲ್ಲಿಗೆ ಒಯ್ಯುತ್ತೋ ನೋಡೇಬಿಡ್ತೀನಿ! ನೀವು ಧೈರ್ಯ ಕೊಟ್ಟರೆ ನಾನು ಎಲ್ಲಕ್ಕೂ ರೆಡಿ" ಎಂದು ಕೃಷ್ಣೇಗೌಡ ನಿರ್ಧಾರದ ದನಿಯಲ್ಲಿ ಹೇಳಿದ.

ರಾಮಚಂದ್ರ ಟೀ ಕೊಟ್ಟ. "ನಿಮ್ಮ ಮಿಸೆಸ್ ಇಲ್ಲಾ ಸಾರ್?" ಎಂದಳು ಜಯಂತಿ. "ಇಲ್ಲಮ್ಮಾ ತವರುಮನೆಗೆ ಹೋಗಿದ್ದಾಳೆ. ಸದ್ಯಕ್ಕೆ ನಂದೇ ಅಡಿಗೆ" ಎಂದ ರಾಮಚಂದ್ರ.

ಈ ವಿಷಯ ಸವಿಸ್ತಾರವಾಗಿ ಜಯರಾಮ್‌ಗೆ ರಾಮಚಂದ್ರ ವರದಿ ಮಾಡಿದಾಗ ಜಯರಾಂ ಯಾವ ಕುತೂಹಲವನ್ನೂ ತೋರಿಸದೆ "ಥತ್ ಬ್ಲಡಿ ನ್ಯೂಸೆನ್ಸ್" ಎಂದು ಗೊಣಗಿದ್ದನ್ನು ಕಂಡು ರಾಮಚಂದ್ರನಿಗೆ ಆಶ್ಚರ್ಯವಾಯ್ತು. ಇಂಥವುಗಳ ಬಗ್ಗೆ ಅವನಿಗೆ ಬೋರಾಗಿದ್ದಂತೆ ಕಂಡಿತ್ತು.

"ಅದಿರಲಿ ನಿನಗೇನು ಬುದ್ಧಿ ಇದೆಯೇನಯ್ಯ ನಮ್ಮ ವಿಚಾರವಾದಿಗಳಿಗೆ ಈ ಕೇಸನ್ನು ಏಕ್‌ದಂ ಹೋಗಿ ಹ್ಯಾಂಡೋವರ್ ಮಾಡಿದೀಯಲ್ಲ? ಆ ಸಂಘದ ಅಧ್ಯಕ್ಷ ನಾನಿರೋವಾಗ ನನ್ನ ಅನುಮತಿ ಇಲ್ಲದೆ ಹೇಗೆ ನೀನು ಆ ಹುಡುಗರಿಗೆ ಕೃಷ್ಣೇಗೌಡನ ಮನೆಗೆ ಹೋಗಿ ತನಿಖೆ ಮಾಡಿ ಅಂತ ಹೇಳಿದೆ? ನನಗೆ ಮೊದಲು ಒಂದು ಮಾತು ತಿಳಿಸಬೇಕೋ ಬೇಡವೋ" ಎಂದು ಜಯರಾಮ್‌ರೇಗಿದ.

"ಜಯರಾಮ್, ನೀನಿಷ್ಟೊಂದು ಫಾರ್ಮಾಲಿಟಿಗೆ ಬೆಲೆ ಕೊಡ್ತೀಯಾಂತ ತಿಳಿದಿರಲಿಲ್ಲ! ಆ ಕೃಷ್ಣೇಗೌಡನ ತೊಂದರೆಗಳನ್ನು ನೋಡಿ ಕನಿಕರ ಬಂದು ಆ ಹುಡುಗರಿಗೆ ಹೇಳಿದೆ. ಅವರೇ ಪತ್ತೆ ಮಾಡಿದರೆ ನಿನ್ನ ಪ್ರತಿಷ್ಠೆಗೆ ಕುಂದೇನಯ್ಯಾ?"

"ಹಾಗಲ್ಲ ರಾಮಚಂದ್ರ, ನೀನು ಒಬ್ಬ ದೊಡ್ಡ ತರ್ಕಪಂಡಿತ ಬುದ್ಧಿಜೀವಿ ಇರಬಹುದು. ಆದರೆ ಪ್ರತಿಯೊಂದಕ್ಕೂ ಒಂದು ಕ್ರಮ ಇದೇ ಅನ್ನೋದನ್ನು



ಮರೀಬೇಡ. ಮೊದಲನೆಯದಾಗಿ ಈ ಕೃಷ್ಣೇಗೌಡನ ಹೇಳಿಕೆಯಿಂದ ಮೊದಲ ನೋಟಕ್ಕೆ ಕಂಡು ಬರೋ ಅಂಶಗಳನ್ನೇ ಗಮನಿಸು. ಅದರಲ್ಲಿ ದೆವ್ವದ ಕಾಟ ಎಷ್ಟು? ಅದರ ನೆವದಿಂದ ಉದ್ಭವಿಸಿರೋ ಮನುಷ್ಯರ ಕಾಟ ಎಷ್ಟು? ಯೋಚಿಸಿದ್ದಿಯಾ? ಈ ಹುಡುಗರು ಹೋಗಿ ವಸ್ತುನಿಷ್ಠವಾಗಿ ವರ್ತಿಸದೆ ಶೌರ್ಯ ಪ್ರದರ್ಶನ ಮಾಡಿದರೆ ಇವರೂ ಈ ತೊಡಕಿನ ಒಂದು ಅಂಗವಾಗಿ ಬಿಡ್ತಾರೆ. ನನ್ನ ಕೆಲಸ ಇನ್ನಷ್ಟು ಕಷ್ಟ ಆಗುತ್ತೆ. ತರಬೇತಿ ಕೊಡದೆ ಯುದ್ಧಕ್ಕೆ ಕಳಿಸಿದ ಹಾಗಾಗುತ್ತೆ. ಯಾವುದಕ್ಕೂ ಒಂದು ಕ್ರಮ ಇದೆ ತಿಳಿದುಕೊ!"

"ಓಹೋ. ಇದಕ್ಕೂ ಸಹ ಒಂದು ಶಾಸ್ತ್ರಾಚಾರ ಮಾಡಿ ಇಟ್ಟಿದ್ದೀಯೇನಯ್ಯಾ?"

"ಹೂನೋ, ಖಂಡಿತ ಶಾಸ್ತ್ರ. ಮೊದಲು ಇದಕ್ಕೆ ಸಂಬಮಧ ಪಟ್ಟೋರನ್ನೆಲ್ಲಾ ಬೇರೆಮಾಡಿ ದೆವ್ವಕ್ಕೆ ಸಂಬಂಧಿಸಿದ ಅವರ ಸ್ವಂತ ಅನುಭವಗಳನ್ನು ಮಾತ್ರ ಕೇಳಿ ದಾಖಲು ಮಾಡಿಕೋತೇವೆ. ನಾನು ಏನೇನು ಕೇಳಿದೆ, ಅದಕ್ಕೆ ಏನೇನು ಉತ್ತರಿಸಿದಿರಿ ಅನ್ನೋದನ್ನು ಯಾರಿಗೂ ಹೇಳಬಾರದೆಂದು ಹೇಳುತ್ತೇವೆ. ಅವರ ಕೇವಲ ಸ್ವಂತ ಅನುಭವಗಳನ್ನು ಮಾತ್ರ ತಗೊಂಡರೆ ಇವರೆಲ್ಲಾ ಗುಂಪಿನಲ್ಲಿ ಮಾತಾಡುವಾಗ ಇರೋ ದೆವ್ವದ ಕಾಟದ ಒಂದಂಶವೂ ಉಳಿಯೋದಿಲ್ಲ ಕಣಯ್ಯ. ಆಮೇಲೂ ಉಳಿಯೋ ದೆವ್ವದ ಕಾಟಾನ ತನಿಖೆ ಮಾಡೋದಕ್ಕೂ ಒಂದು ಕ್ರಮ ಇದೆ ಕಣಯ್ಯ. ನ್ಯಾಯವಾಗಿ ವಿಚಾರವಾದಿಗೆ ದೆವ್ವ ಇಲ್ಲ ದೇವರು ಇಲ್ಲ ಅಂತ ತೀರ್ಮಾನ ಕೊಡೋ ಹಕ್ಕೇ ಇಲ್ಲ. ಇಲ್ಲಿವರೆಗಿನ ತನಿಖೆ ಏನು ಹೇಳುತ್ತೆ ಅನ್ನೋದನ್ನು ಮಾತ್ರ ಹೇಳಬೇಕು. ಆದರೆ ದೆವ್ವ ಇದೆ ಅಂತ ನಂಬಿಕೊಂಡೋರು ಮಾಡೋ ಅನಾಹುತಕ್ಕೆ ಪ್ರತಿಯಾಗಿ ನಾವು ಇಲ್ಲವೇ ಇಲ್ಲಾಂತ ಖಡಾಖಂಡಿತವಾಗಿ ಹೇಳಬಾಕಾಗಿದೆ."

"ಹಾಗಾದರೆ ದೆವ್ವದ ಬಗ್ಗೆ, ಕಲ್ಲೆಸಿಯೋ, ಪಾತ್ರೆ ಪರಡಿ ಎತ್ತಿಹಾಕೋ ಸಂಗತಿಗಳ ಬಗ್ಗೆ. ನಿನಗೆ ನಂಬಿಕೆ ಇದೆಯ?"

"ಖಂಡಿತ ಇಲ್ಲ, ಸದ್ಯದ ನನ್ನ ಅನುಭವ ಮತ್ತು ತನಿಖೆಗಳಿಂದ. ನೀನು ದೆವ್ವ ದೆವರು ಅನ್ನೋ ಅರ್ಥವಿಲ್ಲದ ಪದಗಳನ್ನು ಉಪಯೋಗಿಸ್ತಾ ಇರೋವರೆಗೂ ನಿನ್ನಹತ್ರ ಸಂಭಾಷಣೆ ನನಗೆ ತುಂಬಾ ಕಷ್ಟ ಕಣಯ್ಯ. ಈಗ ದೆವ್ವಾ ಅಂತ ನೀನು ಅಂದಾಗ ಸತ್ತೋರು ಯಾರೋ ದೆವ್ವ ಆಗಿ ಈ ಕೆಲಸ ಮಾಡ್ತಿದ್ದಾರೆ ಅನ್ನುವ ಅರ್ಥ ಅನ್ನು. ಆಗ ಮೊದಲನೇ ಪ್ರಶ್ನೆ ಮನುಷ್ಯನಿಗೆ ಆತ್ಮ ಅನ್ನೋದು ಇದೆಯೇ? ಅದು ಅವಿನಾಶಿಯಾಗಿರೊದು ನಿಜವೆ? ಹುಟ್ಟಿನಿಂದ ಸಾವಿನವರೆಗೆ ನಿಶ್ಚಿತ ಆದಿ

ಮತ್ತು ಅಂತ್ಯ ಇರೋ ಮನುಷ್ಯನಿಗೆ ಅನಂತವಾದುದರ ಜೊತೆಗೆ, ಅವಿನಾಶಿಯಾದುದರ ಜೊತೆ ಏನಾದರೂ ಸಂಬಂಧ ಇದೆಯೆ? ನೋಡಿದೆಯಾ! ದೆವ್ವಾ ಅನ್ನೋ ಪದ ಉಪಯೋಗಿಸೋದಕ್ಕೆ ಮೊದಲು ವೈಜ್ಞಾನಿಕವಾಗಿ ಆಲೋಚನೆ ಮಾಡೋನು ಎಷ್ಟೊಂದು ಪ್ರಶ್ನೆಗಳಿಗೆ ತನ್ನಲ್ಲೇ ತಾನು ಉತ್ತರ ಕಂಡುಕೊಳ್ಳಬೇಕಾಗುತ್ತೆ! ಸದ್ಯಕ್ಕೆ ಪ್ರಜ್ಞೆಗೆ ಪದಾರ್ಥಗಳ ಮೇಲೆ ಪ್ರಭಾವ ಬೀರಲು ಭೌತಾತೀತ ಶಕ್ತಿ ಇದೆಯೆ? ಅನ್ನೋದಷ್ಟನ್ನೇ ನಾನು ಅನ್ವೇಷಣೆ ಮಾಡ್ತಿರೊದು."

"ಹಾಗಾದರೆ ಅಲ್ಲಿ ಕಲ್ಲೆಸೆಯೋ ದೆವ್ವಕ್ಕೆ ಏನೂ ಮಾಡೊದಿಲ್ಲವೇನಯ್ಯಾ?"

"ಥೂ. ಏನೋ ನೀನು? ಕಲ್ಲೂ ಇಲ್ಲ. ದೆವ್ವಾನೂ ಇಲ್ಲ. ಹಾಗೇನಾದರೂ ಇದ್ದಿದ್ದರೆ ಮನುಷ್ಯ ಈ ವೇಳೆ ಅದನ್ನ ಜಲ್ಲೀಕಲ್ಲು ಒಡೆಯೋದಕ್ಕೆ ಕೂರ್ಸಿರ್ತಿದ್ದ. ಅಲ್ಲಿರೋ ಕೌಟುಂಬಿಕ, ಸಾಮಾಜಿಕ ಸಮಸ್ಯೆಗಳನ್ನ ಪರಿಹರಿಸಿದರೆ ಸಾಕು. ಆದರೆ ಕೆಲವು ಸಾರಿ ಸಮಸ್ಯೆಗಳು ವಿಪರೀತ ಸಂಕೀರ್ಣ ಆಗಿ ಇಡೀ ಒಂದು ಊರಿನ ಸಮುದಾಯಾನೇ ಹಿಡಿದುಕೊಂಡಿರ್ತದೆ. ಆವಾಗಲೇ ನಾನು ಹೇಳಿದ ಹಾಗೆ "ಬ್ಲಡಿ ನ್ಯೂಸೆನ್ಸ್" ಆಗೋದು. ಒಂದೊಂದು ಇಂಥ ಅತಿಮಾನುಷ ಘಟನೆಗಳ ಹಿಂದೇನೂ ಒಂದೊಂದು ಕುತೂಹಲಕರ ಮಾನವೀಯ ಸಮಸ್ಯೆ ಇರುತ್ತೆ ಅನ್ನೋದನ್ನ ಮರೀಬೇಡ."

"ನಿನಗೆ ಕುತೂಹಲಕರ! ಅನುಭವಿಸೋರಿಗೆ ಪ್ರಾಣಸಂಕಟ! ಅನುಭವಗಳ ಹಿಂದಿನ ತತ್ವ ಏನೂಂತ ಸತ್ಯಾನ್ವೇಣೆ ಮಾಡೋದಕ್ಕೆ ಹೋಗಿ ಪಾಟೀಲರ ಪ್ರಾಣಕ್ಕೆ ತಂದಿಟ್ಟಿದ್ದೀಯ! ಈಗ ಇಲ್ಲಿ ದೆವ್ವದ ಬಗ್ಗೆ ಸತ್ಯಾನ್ವೇಷಣೆ ಮಡೋದಕ್ಕೆ ಹೋಗಿ ಊರವರಿಗೆಲ್ಲಾ ಪ್ರಾಣಕ್ಕೆ ತಂದಿಡ್ತೀಯ. ಏನು ಕೇಡುಗಾಲಕ್ಕೆ ಹುಟ್ಟಿದಿಯೋ ನೀನು!"

"ಅದಕ್ಕೇ ಮತ್ತೆ ಸತ್ಯಾನ್ವೇಷಣೆಯ ಅಗ್ನಿಪಥಕ್ಕೆ ಕಾಲಿಡಲೇ ಕೂಡದಿತ್ತು ಅನ್ನೋದು. ಮುಗ್ಧರಿಗೆ ಯಾವ ತೊಂದರೇನೂ ಇರೋದಿಲ್ಲ ತಿಳುಕೋ."



# ಅಧ್ಯಾಯ ೩೩



ಕೆಸರೂರಿನ ಕ್ರಾಂತಿಕಾರಿಗಳು ಅತ್ತ ಕೃಷ್ಣೇಗೌಡನ ಮನೆಗೆ ಕಲ್ಲು ಹೊಡೆಯುವ ದೆವ್ವಕ್ಕೆ ಮುಯ್ಯಿ ತೀರಿಸುವ ತರಾತುರಿಯಲ್ಲಿದ್ದರೆ ಇತ್ತ ಕೆಸರೂರಿನ ಟಿ.ಬಿಯಲ್ಲಿ ಅಂಗಾಡಿ, ಜಯರಾಂ, ರಾಮಚಂದ್ರ ಮುಂತಾದವರು ಪಾಟೀಲರ ಆಗಮನ ನಿರೀಕ್ಷಿಸುತ್ತ ಆತಂಕದಲ್ಲಿ ಕಾದಿದ್ದರು. ಜೋಗಿಹಾಳರ ನೋಟ್ಬುಗಳು ಡೈರಿಗಳು ಎಲ್ಲವನ್ನೂ ಸಮಗ್ರವಾಗಿ ಅಭ್ಯಾಸ ಮಾಡಿದ್ದ ಪಾಟೀಲರು ಹೇಳಿದ ಮಾತುಗಳು ಅವರಿಗೆ ಬರಸಿಡಿಲಿನಂತೆ ಎರಗಿದ್ದವು. ಮತ್ತೇನು ಹೇಳಿದರು? ಎಂದು ಅವರು ಸಿದ್ದಪ್ಪನನ್ನೂ ಮಹಮದ್‌ನನ್ನೂ ಅನೇಕಬಾರಿ ಕೇಳಿದರು. ಅಂಗಾಡಿಯಂತೂ ತನಗೆ ಇನ್ನೂ ರೋಮಾಂಚಕ ಕೆಲಸ ದೊರೆಯಿತೆಂದು ತುಂಬಾ ಸಂತೋಷದಿಂದ "ನೋಡಿದಿರಾ ನಾನು ಹೇಳಲಿಲ್ಲವೆ? ಜಯರಾಂ ಹೇಳಿದ ಕತೆ ನಿಜಾಂತ ಆದರೂ ನನಗೆ ಲಾಭ, ಸುಳ್ಳಂತ ಆದರೂ ನನಗೆ ಲಾಭ ಅಂತ" ಎಂದು ಎಲ್ಲರಿಗೂ ಹೇಳಿ ಪಾಟೀಲರ ಆಗಮನವನ್ನು ಪ್ರತೀಕ್ಷೆಯಿಂದ ಕಾಯುತ್ತಿದ್ದ, ಅಷ್ಟರಲ್ಲಿ ಪಾಟೀಲರು ಬಂದರು.

"ಏನ್ರಯ್ಯಾ ನನ್ನಂತ ಒಬ್ಬ ರೋಗದ ಕೋಳಿ ಜೀವಕ್ಕೆ ಕಾವಲು ಕಾಯೋದರ

ಬದಲು ಅದ್ಯಾವುದೋ ಒಂದು ಪಿಶಾಚಿ ಕೃಷ್ಣೇಗೌಡರ ಮನೆಗೆ ಕಲ್ಲು ಹೊಡೀತಿದೆಯಂತೆ! ಅದನ್ನಾದರೂ ಬೆನ್ನು ಹತ್ತಬಾರದೆ!" ಎಂದು ಹೇಳುತ್ತಾ "ಬೈದಿಬೈ ಈವತ್ತು ಅವರನ್ನ ರಾಮಚಂದ್ರನ್ನ ನೋಡೀಂತ ಹೇಳಿ ಕಳಿಸಿದ್ದೆ. ಬಂದಿದ್ರ ರಾಮಚಂದ್ರ? ಇವತ್ತಿಂದ ನಾನು ಇನ್ನೊಂದು ತೀರ್ಮಾನ ಮಾಡಿದ್ದೇನೆ. ನನ್ನತ್ರ ಬರ್ತಾರಲ್ಲ ಗಾಳಿ ತಾಗಿದೋರು, ಭೀತಿ ಬಡಿದುಕೊಂಡಿದೆ ಅನ್ನೋರು, ದೆವ್ವ ಮೆಟ್ಟಿಕೊಂಡಿದೆ ಅನ್ನೋರು ಅವರ್ನೆಲ್ಲಾ ನೆಟ್ಟಗೆ ನಿಮ್ಮ ಸಂಘಕ್ಕೆ ಕಳಿಸ್ತೇನೆ. ಅವರಿಗೆ ಉಗಿದೂ ಬಯ್ದೂ ಸಾಕಾಗಿ ಹೋಗಿದೆ. ನಿಮಗಾದರೂ ಕೊಂಚ ಕೆಲಸ ಕೊಡಲಿ" ಎಂದೆನ್ನುತ್ತಾ ಟಿ.ಬಿ. ಮೆಟ್ಟಿಲು ಹತ್ತಿ ಬಂದರು.

"ಬಂದಿದ್ರೂ ಸಾರ್, ಅವರ ಕೇಸನ್ನ ಕೈಗೆ ತಗೊಂಡಾಗಿದೆ" ಎಂದ ರಾಮಚಂದ್ರ.

ಎಲ್ಲರೂ ಕುಳಿತರು. ಪಾಟೀಲರು ಎಲ್ಲರ ಮುಖ ನೋಡಿ "ಏನ್ರಯ್ಯಾ ಎಲ್ರೂ ನನ್ನ ಮಾತನ್ನ ಭಾಳ ಸೀರಿಯಸ್ಸಾಗಿ ತಗೊಂಡಹಾಗಿದೆ? ಯಾರ ಬಾಯಲ್ಲೂ ಸ್ವರಾನೇ ಇಲ್ಲ! ಮುಖ ಮುಖ ನೋಡ್ತಿದ್ದೀರಲ್ಲಾ?" ಎಂದರು.

"ನೀವು ಜೋಗಿಹಾಳರ ನೋಟ್ಸು ಡೈರಿ ಎಲ್ಲಾನು ಅಭ್ಯಾಸ ಮಾಡಿದಿರಿ. ನಿಮ್ಮ ಮಾತನ್ನ ಸೀರಿಯಸ್ಸಾಗಿ ತಗೋದಿದ್ರೆ ಹೇಗೆ ಸಾರ್" ಎಂದ ಬ್ರೀಡರ್ ಮಹಮದ್.

"ಏ ಮಹಮದ್, ನಿನಗೆ ತಲೆ ಮಂದ ಕಣಯ್ಯ. ಜೋಗಿಹಾಳರ ಡೈರಿಗಳಿಗೂ ನೋಟ್ಸುಗಳಿಗೂ ಅವರ ಆಕಸ್ಮಿಕ ಮರಣಕ್ಕೂ ಯಾವ ತರಹ ಯಾವರೀತಿ ಬಾದರಾಯಣ ಸಂಬಂಧ ಕಲ್ಪಿಸಿದೀಯೋ! ಏನಾದರೂ ಆತ್ಮಹತ್ಯೆ ಆಗಿದ್ದರೆ ಬರೆದಿಡಬಹುದೇ ಹೊರತು ಇಲ್ಲಿದಿದ್ದರೆ ಯಾರು ತಮ್ಮ ಅಂತ್ಯ ನಿರೀಕ್ಷಿಸಿರ್ತಾರಯ್ಯ. ಈ ಜಯರಾಂ ಕತೆ ಕಟ್ಕೊಂಡು ನೀವು ನನ್ನ ಅಂತ್ಯ ನಿರೀಕ್ಷಿಸ್ತಾ ಇದೀರಲ್ಲ ಹಾಗೆ! ನಿಮ್ಮ ವ್ಯವಹಾರ ನೊಡಿದರೆ ಅಳಬೇಕೋ ನಗಬೇಕೋ ತಿಳಿಯೋಲ್ಲ" ಎಂದು ಗಹಗಹಿಸಿ ನಕ್ಕರು.

"ಹಾಗಾದರೆ ಹೇಗೆ ಅವರು ಸತ್ತೇ ಇಲ್ಲಾಂತ ತೀರ್ಮಾನಕ್ಕೆ ಬಂದ್ರಿ ಸಾರ್?"

"ನೀವು ಹೇಗೆ ಸತ್ತಿದಾರೆ ಅಂತ ನಂಬಿಕೊಂಡು ಕತೆ ಕಟ್ಟಿಕೊಂಡು ಗೊಂದಲ ಆರಂಭಿಸಿದ್ರಿ?"

"ಏನ್ ಸಾರ್ ಅವರು ಸತ್ತಾಗ ನಾವೆಲ್ಲಾ ಇದ್ವಲ್ಲಾ ಸಾರ್! ಅವರ ಹೆಣ್ತಿ ಸೈತಾ ಪಾಟ್ನಾದಿಂದ ಬಂದಿದ್ರು. ನಾವೇ ಅವರ ಪಾರ್ಥಿವ ಶರೀರಾನ



ನವೀಲುಗುಂದಕ್ಕೆ ಅವರೂರಿಗೆ ಕಳಿಸಿಕೊಟ್ಟಿದ್ದೀವಿ!" ಎಂದ ಮಹಮದ್.

"ಸರಿಯಪ್ಪಾ ಇದು ಜೊಗಿಹಾಳರು ಅಲ್ಲದೇ ಇರಬಹುದು ಅಂತ ಯಾರಾದರೂ ಪರೀಕ್ಷಿದರೋ?"

"ಅವರೇ ಅನ್ನೋದು ಗೊತ್ತಿರಬೇಕಾದರೆ ನಾವ್ಯಾಕೆ ಮಾಡೋಣ ಸಾರ್ ಅದನ್ನೆಲ್ಲಾ?"

"ಅವರೇ ಅಂತ ಹೇಗೆ ಗೊತ್ತಾಯ್ತು. ಅವರದೇ ಡ್ರೆಸ್ಸು, ಮುಖ ಚಹರೆ, ಆಕಾರ ಇತ್ಯಾದಿ ಅಲ್ಲವಾ! ಅದನ್ನು ಸರಿಯಾಗಿ ಪರೀಕ್ಷೆ ಮಾಡಿ ಖಾತ್ರಿ ಮಾಡಿಕೊಂಡ್ರಾ? ಇದು ಬಹಳ ಸೀರಿಯಸ್ ವಿಚಾರ. ಚೆನ್ನಾಗಿ ಯೋಚನೆ ಮಾಡಿ ಮಾತಾಡಿ."

"ಆ ರೀತಿ ಏನಾದರೂ ನಮಗೆ ಅನುಮಾನ ಇದ್ದಿದ್ರೆ ಆಗ ನೋಡ್ತಿದ್ವಿ ಸಾರ್. ಅವರ ಹೆಂಡತಿ ಮುಂತಾದೋರೆಲ್ಲಾ ಇರೋವಾಗ ಪೋಲೀಸ್ ಇನ್ಸ್‌ಪೆಕ್ಟರು ಡಿಸ್ಟ್ರಿಕ್ ಮೆಡಿಕಲ್ ಆಫೀಸರು ಮುಂತಾದೋರೆಲ್ಲಾ ಪರೀಕ್ಷೆ ಮಾಡ್ತಿದ್ದಾಗ ನಾವು ಹೇಗೆ ಅಂತಹ ಪರೀಕ್ಷೆ ಮಾಡೋಣ" ಸಿದ್ದಪ್ಪ ಹೇಳಿದ.

"ಅದಕ್ಕೇ ಹೇಳಿದ್ದು. ಅವರ ಹೆಂಡತಿ ಪಾಟ್ನಾಕ್ಕೆ ವರ್ಗವಾಗಿ ಒಂದೂವರೆ ವರ್ಷ ಆಗಿತ್ತು. ಹೋದ ಮೇಲೆ ಅವರು ಒಮ್ಮೆಯೂ ಬರಲಾಗಿರಲಿಲ್ಲ. ಮೆಡಿಕಲ್ ಆಫೀಸರಿಗೆ ಪೋಲೀಸರಿಗೆ ಇದು ಜೋಗಿಹಾಳರೇ ಅನ್ನೋದಕ್ಕಿಂತ ಇದು ಯಾವ ತರದ ಸಾವು ಅನ್ನೋದು ಮುಖ್ಯ! ಹೃದಯಾಘಾತವೋ? ಕೊಲೆಯೋ? ಅಪಘಾತವೋ? ಅನ್ನೋದೆ ತಲೆ ತಿನ್ತಿರ್ತದೆ. ಬೆಳಿಗ್ಗೆ ಲ್ಯಾಬಿನಲ್ಲಿ ದೊಡ್ಡ ಸಾಹೇಬರು ತೀರಿಕೊಂಡಿದಾರೆ ಅಂತ ವಾಚ್‌ಮ್ಯಾನ್ ನಿಮಗೆ ಹೇಳಿದ. ಪೋಲೀಸರಿಗೆ ಫೋನ್ ಮಾಡಿದಿರಿ. ಅವರು ನಾವು ಬಂದು ಮಹಜರ್ ಮಾಡೋವರೆಗೂ ನೀವು ಅಲ್ಲಿ ಬಿಲ್‌ಕುಲ್ ಏನೂ ಮಾಡಕೂಡದು ಅಂದಿದಾರೆ! ನೀವೆಲ್ಲಾ ಕಿಟಕೀಲಿ ಇಣುಕ್ತಾ ಹೊರಗಡೆ ಕಾಯ್ತಾ ಕುಳಿತಿದ್ದಿರಿ! ಪೋಲೀಸ್ನೋರು ಡಾಕ್ಟರು ಬಂದಿದ್ದು ಮಾರನೆಯ ದಿನ. ಅವರು ಬರೋದರೊಳಗೆ ಹೆಣ ಕೊಳೆಯೋದರ ಮುನ್ಸೂಚನೆಯಾಗಿ ಊದಿಕೊಂಡಿರ್ತದೆ. ಅವರ ಹೆಂಡತಿ ಬಂದಿದ್ದು ಅದರ ಮಾರನೆ ದಿನ. ಅವರು ಜೋಗಿಹಾಳರನ್ನು ನೋಡದೆ ಒಂದೂವರೆ ವರ್ಷ ಆಗಿತ್ತು. ದುಃಖದಲ್ಲಿದ್ದ ಆಕೆಗೆ ಇದನ್ನೆಲ್ಲಾ ಗಮನಿಸಬೇಕೆಂದು ಅನ್ನಿಸಿಯೇ ಇರಲಿಕ್ಕಿಲ್ಲ, ಅಲ್ಲವೇ?

"ಹೌದು ಸಾರ್, ನೀವು ಊಹಿಸಿರೋದೆಲ್ಲ ಅಕ್ಷರಶಃ ನಿಜ. ಹಾಗಾದರೆ ಅಲ್ಲಿ ಸತ್ತಿರೋರು ಮತ್ಯಾರು? ಜೋಗಿಹಾಳರು ಎಲ್ಲಿದ್ದಾರೆ?" ಸಿದ್ದಪ್ಪ ಕೇಳಿದ.

"ನನಗೇನಯ್ಯಾ ಗೊತ್ತು ಎಲ್ಲಿದ್ದಾರೆ? ಸತ್ತೋರು ಯಾರು ಅಂತ? ಹಾಗಲ್ಲ ಸಿದ್ದಪ್ಪ. ಇದನ್ನು ಯಾಕೆ ಹೇಳಿದೆ ಅಂದರೆ ಇಲ್ಲಿನ ಸರ್ಕಲ್ ಇನ್‌ಸ್ಪೆಕ್ಟರು ಷರೀಫ್ ನನ್ನತ್ರ ಬಂದಿದ್ದ. ಅಂಗಾಡಿ ಸ್ಟೇಷನ್ನಿಗೆ ಹೋಗಿ ಹಳೇ ದಾಖಲೇನೆಲ್ಲ ತೆಗೆಸಿದ್ದನ್ನ ನೋಡಿ ಗಾಬರಿ ಬಿದ್ದು ಆತ ನಿಜಕ್ಕೂ ಬಂದಿರೋದು ಯಾಕೇಂತ ಕೇಳೋದಕ್ಕೆ. ಆಗ ಅವನ ಜೊತೆ ಅದೂ ಇದೂ ಮಾತಾಡ್ತಾ ಜೋಗಿಹಾಳರ ಹೆಂಡತಿ ಅವರ ಗಂಡನ ಕಳೇಬರಾನ ಗುರ್ತು ಹಿಡಯೋದಕ್ಕೆ ಆಗಲಿಲ್ಲ. ನಾನು ಪಾಟ್ನಾದಲ್ಲಿರ್ತ ಒಂದೂವರೆ ವರ್ಷ ಆಯ್ತು. ಅಲ್ಲದೆ ಕಳೆಬರ ಊದಿಕೊಂಡಿತ್ತು ಎಂದು ಹೇಳಿದರಂತೆ. ಪೋಲೀಸ್ನೋರಿಗೆ ಈ ಹೇಳಿಕೆ ತಗೋಳ್ಳೋದಕ್ಕೆ ದೊಡ್ಡ ಪೀಕಲಾಟಕ್ಕೆ ಇಟ್ಕೊಂಡಿತ್ತಂತೆ. ಕೊನೆಗೆ ಇನ್‌ಷೂರೆನ್ಸ್ ಕಂಪನಿಯೋರು ನೀವು ಹೀಗೆಲ್ಲಾ ಹೇಳಿದರೆ ಅವರ ಮರಣಾನಂತರ ನಿಮಗೆ ಸಿಕ್ಕೋ ಎಂಟುಲಕ್ಷ ಇನ್‌ಷೂರೆನ್ಸಿಗೆ ತೊಂದರೆಯಾಗುತ್ತೆ. ಅಷ್ಟೊಂದು ಜನ ಅವರ ಸಹೋದ್ಯೋಗಿಗಳು ದಿನಾ ನೋಡ್ತಿದ್ದವರು ಒಂದು ಚಕಾರ ಎತ್ತರದೆ ಇರಬೇಕಾದರೆ ನೀವು ಹೀಗೆಲ್ಲಾ ಅನುಮಾನಿಸೋದು ಸರಿಯೆ? ಎಂದಮೇಲೆ ಅವರು ಸುಮ್ಮನಾದರಂತೆ. ಜೋಗಿಹಾಳರ ಸಾವಿನ ಮೇಲೆ ನಡೆದಿರೋ ಹಗರಣವನ್ನೆಲ್ಲಾ ವಿವರಿಸ್ತಾ ಪಾರ್ಲಿಮೆಂಟಿನಲ್ಲಿ ನಮ್ಮ ವಿಜ್ಞಾನಿಗಳನ್ನೆಲ್ಲಾ ಕೊಲ್ಲೋ ಸಂಚು ನಡೆದಿದೆ ಅಂತ ಗಲಾಟೆ ಎದ್ದಾಗ, ಇನ್ನು ಅದರೊಳಗೆ ಜೋಗಿಹಾಳರದೂ ಒಂದು ಸೇರಿಕೊಂಡೀತೆಂಬ ಭಯಕ್ಕೆ ಆ ಕೇಸನ್ನು ಹಾಗೇ ಉಪೇಕ್ಷಿಸಿ ಅಂತ ಮೇಲಿನಿಂಲೇ ಸೂಚನೆ ಬಂತಂತೆ.

"ಈಗ ನೋಡಿ! ಸತ್ತೋರು ಜೋಗಿಹಾಳರ ಅನ್ನೋದಕ್ಕೆ ನಿಮಗೆ ಪೋಲೀಸ್ನೋರು ಡಾಕ್ಟರು ಅವರ ಹೆಂಡತಿ ಇವರೆಲ್ಲಾ ಸಾಕ್ಷಿ. ಅವರಿಗೆ ನೀವೆಲ್ಲಾ ಸಾಕ್ಷಿ. ಒಟ್ಟಿನಲ್ಲಿ ಈಗ ಸತ್ತೋರು ಯಾರೂಂತಾನೂ ಗೊತ್ತಿಲ್ಲ. ಜೋಗಿಹಾಳರೂ ಪತ್ತೆ ಇಲ್ಲ."

"ಅವರು ಎಲ್ಲಾದರೂ ಇದ್ದರೆ ನಮಗೆ ಒಂದು ಸುಳಿವಾದರೂ ಸಿಕ್ತರಲ್ಲಿಲ್ಲವೆ ಸಾರ್. ನೀವು ಸುಮ್ಮನೆ ನಮ್ಮ ಕತೇಗೆ ಒಂದು ಪ್ರತಿ ಕತೆ ಕಟ್ಟಿದೀರಿ ಅಷ್ಟೇ."

"ಅಂಗಾಡಿ, ನನಗೆ ಜೋಗಿಹಾಳರ ಸಾವು ಕೊಲೆಯೋ ಖೂನಿಯೋ ಅನ್ನೋದರ ಬಗ್ಗೆ ಸ್ವಲ್ಪವೂ ಕುತೂಹಲ ಇಲ್ಲ. ನಾನು ಇದನ್ನ ಯಾಕೆ ಹೇಳಿದ ಅಂದರೆ ನೀವು ಪತ್ತೇದಾರಿ ಜೊತೆಗೆ ಕೆಲವು ತತ್ವಾನೂ ಪತ್ತೆ ಮಾಡೋದಕ್ಕೆ ಹೊರಟಿದೀರಿ ಅದಕ್ಕೆ."

"ನಿಮ್ಮ ಕತೆಯಿಂದ ನಮ್ಮ ಕತೇನ ಸುಳ್ಳು ಮಾಡಬಹುದಷ್ಟೆ ಹೊರತು



ನಮ್ಮ ತತ್ವಾನ್ವೇಷಣೆಗೆ ಏನೂ ಸಹಾಯ ಆಗ್ತಿಲ್ಲಾ ಸಾರ್. ಈಗ ಈ ಕತೆಯಿಂದ ಪ್ರಜ್ಞೆ ಅನ್ನೋದು ವಿಧಿನಿಯಮಗಳ ಅಧೀನ ಅಂತ ಸಾಧಿಸಿದರೋ? ಸ್ವತಂತ್ರ ಅಂತ ಸಾಧಿಸಿದರೋ?" ರಾಮಚಂದ್ರ ಬಾಯಿ ಹಾಕಿದ.

"ಎರಡೂ ಸುಳ್ಳಾಗೊದಕ್ಕೆ ಅಥವಾ ಎರಡೂ ಸತ್ಯ ಆಗೋದಕ್ಕೆ ಸಾಧ್ಯನೇ ಇಲ್ಲಾ ಸಾರ್, ನಿಮ್ಮ ವಾದ ತೀರ ಅವೈಜ್ಞಾನಿಕ."

"ರಾಮಚಂದ್ರ ನಿಮ್ಮ ತರ್ಕ ಎಲ್ಲಾ ಎರಡರಲ್ಲಿ ಒಂದು ಸುಳ್ಳಾಗಬೇಕಾದ ಭೂಮಿಕೆಗೆ ಸೇರಿದ್ದು. ನಾವೂ ಎಲ್ಲ ಯಾವುದೋ ಒಂದು ನಂಬಿಕೆ ಮೇಲೆ ಒಂದನ್ನು ವಾಸ್ತವ ಸತ್ಯಾಂಶ ತಿಳಿದು ಕಾರ್ಯಕಾರಣ ಪ್ರಪಂಚಾನ ನಿರ್ಮಿಸಿದ್ದೇವೆ, ಆ ಪರಿಧಿಯೊಳಗೆ ನಮ್ಮ ಗ್ರಹಿಕೆಗಳು ಎರಡರಲ್ಲಿ ಒಂದು ಸತ್ಯ ಆಗೋದು. ಈಗ ನೋಡಿ ಜೋಗಿಹಾಳರು ಸತ್ತಿದ್ದಾರೆ ಅನ್ನೋದು ನಮ್ಮೆಲ್ಲರ ಒಂದು ಜನಜನಿತ ನಂಬಿಕೆ. ಅದನ್ನ ನಿಮಗೆ ಹೇಗೆ ಗೊತ್ತು ಅಂತ ತೀವ್ರವಾಗಿ ಪ್ರಶ್ನೆ ಮಾಡ್ತ ಹೋದರೆ ನೀವೆಲ್ಲಾ ಅಸ್ಪಷ್ಟವಾಗೋದಕ್ಕೆ ಶುರುವಾದಿರಿ! ಅಂದರೆ ಏನರ್ಥ? ಹಿಂದೆ ನಡೆದಿರೋದನ್ನಿರಲಿ, ಕಣ್ಣೆದುರು ನಡೆಯೋ ವರ್ತಮಾನಾನೂ ಕರಾರುವಕ್ಕಾಗಿ ಗ್ರಹಿಸ್ತಿದೀವಿ ಅಂತ ಹೇಳೋದಕ್ಕೆ ಸಾಧ್ಯವಿಲ್ಲ.

"ಏನ್ ಸಾರ್ ನೀವು ಹೇಳೋದೂ? ನಮ್ಮೆಲ್ಲರ ಕಣ್ಣೆದುರಿಗೂ ನೀವು ಕುಳಿತಿರೋದು, ಮಾತಾಡ್ತಿರೋದು ಕರಾರುವಾಕ್ಕಾಗಿ ನಾವು ಗ್ರಹಿಸ್ತಿಲ್ಲವೆ? ವಿಜ್ಞಾನಿಯಾಗಿ ನೀವೇ ಹೀಗೆಂದರೆ ಹೇಗೆ ಸಾರ್? ವಸ್ತು ಸತ್ಯಾಂತ ಅನ್ನೋದೆ ಇಲ್ಲಾಂತ ಆದರೆ ಅದರ ಹಿಂದಿನ ತತ್ವಗಳನ್ನೆಲ್ಲಾ ನ್ಯೂಟನ್, ಡಾರ್ವಿನ್, ಐನ್‌ಸ್ಟೀನ್ ಇವರೆಲ್ಲಾ ಅನ್ವೇಷಣೆ ಮಾಡ್ತಾನೆ ಇರಲಿಲ್ಲ" ರಾಮಚಂದ್ರ ಬಲವಾದ ಪಟ್ಟು ಹಾಕಿದ.

"ಒಂದೊಂದು ಭೂಮಿಕೆಗೆ ಒಂದೊಂದು ತತ್ವ. ವಿಜ್ಞಾನಿ ಆಗಿ ಹೀಗೆ ಹೇಳಕೂಡದಂದಿರಲ್ಲಾ, ವಿಜ್ಞಾನ ಈಗ ಈ ತೀರ್ಮಾನದ ಹಂತದಲ್ಲಿದೆ. ಬೆಳಕು ಕಣಗಳೋ ಅಲೆಗಳೋ ಹೇಳಿ? ನಾವು ತಿಳಿದ ಹಾಗೆ ಭೌತಶಾಸ್ತ್ರ ವಸ್ತು ಸತ್ಯದ ಮೇಲೆ ಬಲವಾಗಿ ನಿಂತಿರೋ ವಿಜ್ಞಾನ ಅಲ್ಲವೆ? ಅದು ಹೇಳುತ್ತೆ. ಬೆಳಕು ಅಲೆ ಅಂತ ನೋಡಿದವನಿಗೆ ಅಲೆ. ಕಣ ಅಂತ ನೋಡಿದವನಿಗೆ ಕಣ, ಯಾಕೆಂದರೆ ವೀಕ್ಷಿಸುವ ಮನುಷ್ಯ ಪ್ರಜ್ಞೆ ಆ ಪ್ರಯೋಗದ ಒಂದು ಭಾಗ. ಯೋಚನೆ ಮಾಡಿ."

"ಅಲ್ಲಾ, ಅದನ್ನಾದರೂ ವಸ್ತುನಿಷ್ಠ ಉಪಕರಣಗಳ ಸಹಾಯದಿಂದ ಪ್ರಯೋಗಮಾಡಿ ತೀರ್ಮಾನಕ್ಕೆ ಬಂದು ವಸ್ತು ಸತ್ಯ ಹೀಗೇಂತ ಪ್ರತಿಪಾದಿಸ್ತಾರೆ ಸಾರ್!"

"ಅವರು ಪ್ರತಿಪಾದಿಸಿದ್ದು ವಸ್ತುಸತ್ಯಾ ಅಲ್ಲ. ನಮ್ಮ ಪ್ರಜ್ಞೆಯನ್ನ, ವ್ಯಕ್ತಿ ಸತ್ಯಾನ. ಇರಲಿ. ಈಗ ಇನ್ನೊಂದು ಭೌತವಿಜ್ಞಾನದ ನಿಯಮಾನ ಹೇಳ್ತೇನೆ ಕೇಳಿ. ಒಂದು ವಸ್ತುವಿನ ವೇಗ ಬೆಳಕಿನ ವೇಗಕ್ಕೆ ಸಮೀಪಿಸ್ತಾ ಅದು ಹೋಗ್ತಿರೋ ದಿಕ್ಕಿನ ಉದ್ದವನ್ನು ಕಳಕೊಳ್ತಾ ಬರ್ತದೆ, ಅನ್ನೋದೊಂದು ನಿಯಮ. ಒಂದು ಗಜಕಡ್ಡಿ ಬೆಳಕಿನ ವೇಗ ಸಮೀಪಿಸ್ತಾ, ಅದು ಒಂದು ಅಡಿಯಾಗ್ತದೆ ಅನ್ನಿ. ಅದನ್ನು ನೋಡೋದು ಹೇಗೆ? ನಾವೂ ಅದನ್ನು ತಿಳಿಯೋದಕ್ಕೆ ಗಜಕಡ್ಡಿ ವೇಗದಲ್ಲಿ ಹೋಗಬೇಕು. ಆಗ ನಮ್ಮ ಗಜಕಡ್ಡೀನೂ ಗಿಡ್ಡ ಆಗುತ್ತೆ. ಗಜಕಡ್ಡಿನ ಅಳೆದರೆ ಆಗ ಅಳತೆಗೆ ಸರಿಯಾಗಿರ್ತದೆ. ಅಂದರೆ ಮೇಲಿನ ನಿಯಮ ನಮ್ಮ ಪ್ರಜ್ಞೆ ಎಂದೂ ಒರೆ ಹಚ್ಚಲಾರದ ವಸ್ತು ಸತ್ಯ, ಇದನ್ನೆಲ್ಲಾ ಯಾಕೆ ನಿಮಗೆ ಕೊರೆದೆ ಎಂದರೆ ನೀವು ಬರೇ ಜೋಗಿಹಾಳರ ಸಾವಿನ ರಹಸ್ಯ ಪತ್ತೆ ಮಾಡೋದಕ್ಕೆ ಹೊರಟಿಲ್ಲ. ಮನುಷ್ಯ ಪ್ರಜ್ಞೆ ವಿಧಿನಿಯಮಗಳ ಅಧೀನಾನೋ ಅಥವಾ ಸ್ವತಂತ್ರವೋ ಅಂತ ಕಲಾಕೃತಿ ಮುಖಾಂತರ ಪತ್ತೆ ಮಾಡೋದಕ್ಕೆ, ತತ್ವಾನ್ವೇಷಣೆ ಮಾಡೋದಕ್ಕೆ ಹೊರಟಿದ್ದೀರ. ಇದು ಈ ವಿಶ್ವದ ಚಿದಂಬರ ರಹಸ್ಯ. ಯಾವನು ಹೇಗೆ ನಂಬ್ತಾನೋ ಹಾಗೆ ಕಾಣ್ತಾ ಹೋಗುತ್ತೆ. ಜಯರಾಮನಿಗಿಂತ ಮುಂಚೆ ನಾನೇ ಕತೆ ಹೇಳಿ ಜೋಗಿಹಾಳರು ಸತ್ತಿಲ್ಲಾಂತ ಮುಕ್ತಾಯ ಮಾಡಿದ್ರೆ ಅಂಗಾಡಿಗೆ ಅಂಥದೇ ಸಾಕ್ಷಿ ಸಿಕ್ತಾ ಹೋಗ್ತಿತ್ತು!"

"ಹಾಗಾದರೆ ಜೋಗಿಹಾಳರು ಸತ್ತಿಲ್ಲಾಂತ ನಂಬಿಕೊಂಡು ಅನ್ವೇಷಣೆ ಮಾಡ್ತಾ ಹೋದರೆ ಸಿಗ್ತಾರ ಸಾರ್."

"ಅಂಥಾ ನಂಬಿಕೆ ಬರೋ ಅಂತ ಆಧಾರ ನಿಮಗೆ ಸಿಕ್ಕು ಅವರು ಸತ್ತಿಲ್ದೇ ಇದ್ರೆ ನಿಮಗೆ ಸಿಕ್ತಾರೆ. ಅದೇನೇ ಇರಲಿ ಸಾಕ್ಷ್ಯಗಳು ಮಾತ್ರ ಸಿಗ್ತಾನೇ ಹೋಗ್ತವೆ. ಅದಿರ್ಲಿ ಈಗ ನೀವು ಹೊರಟಿರೋದು ಸಾಕ್ಷ್ಯಾಧಾರಗಳ ಮೇಲಲ್ಲ! ಕತೆ ಕಟ್ಟಿಕೊಂಡು ಅದಕ್ಕೆ ಸಾಕ್ಷಾಧಾರ ಹುಡುಕ್ತಾ ಚಿದಂಬರ ರಹಸ್ಯ ಭೇದಿಸೋದಕ್ಕೆ, ನೆನಪಿರ್ಲಿ! ನಿಮಗೆ ಸಿಕ್ಕೋ ಸಾಕ್ಷಾಧಾರಗಳೇ ಬೇರೆಯೋರಿಗೆ ಬೇರೆ ಕತೆಗಳಿಗೆ ಸಾಕ್ಷ್ಯಾಧಾರ ಆಗಿರ್ತವೆ. ಅತಿ ಬುದ್ಧಿಯ ಅವಿವೇಕ ಮಾಡ್ತಿದ್ದೀರ. ನನ್ನ ಹತ್ರ ಕಾಲು ಉಳುಕಿದರೂ ಗಾಳಿ ತಾಗಿದೆ, ಭೀತಿ ಮೆಟ್ಕೊಂಡಿದೆ ಅಂತ ಬರ್ತಾರೆ. ಅವ್ರೊಂದು ತರದ ಅಜ್ಞಾನದ ಅವಿವೇಕಿಗಳಾದರೆ ನೀವಿನ್ನೊಂದು ತರದೋರು" ಎಂದು ಬಯ್ದು ವಾಚು ನೋಡಿಕೊಳ್ತ ಎದ್ದರು.

"ಇದೇನ್ ಸಾರ್ ಹೊರಟೇಬಿಟ್ರ?" ಎಂದು ಎಲ್ಲ ಕೇಳಿದರು.

"ಬರ್ತೀನ್ರಪ್ಪಾ ಯಾರಿಗೋ ಬರಹೇಳಿದೀನಿ. ಅವರನ್ನ ಸುಮ್ಮನೆ



ಕಾಯಿಸೋದು ಚೆನ್ನಾಗಿರೊಲ್ಲ. ಇಡೀ ಜೀವಮಾನ ಕಳೆದರೂ ಮುಗೀದಿರೋ ತರ್ಕ ಹಿಡಿದುಕೊಂಡು ಕೂತಿದ್ದೀರಿ" ಎಂದು ಪಾಟೀಲರು ಟಿ.ಬಿ ಮೆಟ್ಟಿಲನ್ನಿಳಿದು ಕತ್ತಲಲ್ಲಿ ನಡದೇಬಿಟ್ಟರು.

ಪಾಟೀಲರು ಅತ್ತ ಹೋದಕೂಡಲೇ "ಏನ್ರಯ್ಯ ಈ ಮುದುಕ? ಜೋಗಿಹಾಳರು ಸತ್ತೆ ಇಲ್ಲಾಂತ ಹೇಳಿ ನಮಗೆ ಶಾಕ್ ಕೊಟ್ಟನಲ್ಲ!" ಎಂದ ಸಿದ್ದಪ್ಪ.

"ಸತ್ತಿಲ್ಲಾಂತಾನೆ ಇಟ್ಕೊಳ್ಳಿ. ಯಾರೋ ಅಪಹರಿಸಿ ಇನ್ಯಾರದೋ ಹೆಣಾ ಹಾಕಿದಾರ ಅಂತಾನೆ ಇಟ್ಕೊಳ್ಳಿ. ನಾನು ಪತ್ತೆ ಮಾಡೋದಕ್ಕೆ ಪ್ರಯತ್ನಿಸ್ತಿರೋದು ಯಾಕೆ ಅಂತ, ಕೊಲೆಪಾತಕಿಯನ್ನಲ್ಲ" ಎಂದ ಅಂಗಾಡಿ.

"ಸತ್ತಲ್ದೇ ಏನ್ರೀ? ನಮ್ಮ ವಾದಕ್ಕೆ ಪ್ರತಿ ವಾದಾಂತ ಆ ಮುದುಕ ಹಾಗೆ ಹೇಳಿದಾನೆ ಅಷ್ಟೇ. ಇವನೊಬ್ಬ ವಿಚಿತ್ರ ಮುದುಕ ಕಣಯ್ಯ. ಸಿನಿಕ್ಕು ಅನ್ನೋಣಾಂದ್ರೆ ಹಂಗೂ ಹೇಳೋಹಂಗಿಲ್ಲ, ವಿಜ್ಞಾನಿ ಅಂದರೆ ಹಂಗೂ ಹೇಳೋಹಂಗಿಲ್ಲ. ವಿಚಾರವಾದಿ ಅಂದ್ರೆ ಹಂಗೂ ಹೇಳೋಹಂಗಿಲ್ಲ" ಎಂದು ಸಿದ್ದಪ್ಪ ಗೊಣಗಿದ.

"ಅದೇನಾದ್ರು ಇರಲಿ ಸಿದ್ದಪ್ಪಾ, ಕೆಸರೂರು ಹೈಬ್ರೀಡ್ ಹುಡುಕೋದಕ್ಕೆ ನಾನು ಬರ್ಲೇಬೇಕು. ನಮ್ಮೆಲ್ಲಾ ಪತ್ತೇದಾರಿ, ಸಂಶೋಧನೆ, ಅನ್ವೇಷಣೆಯ ಕೊನೆ ಹಂತ ಅದು. ಗೋಸಾಯಿಗಳ ಜೊತೆ ಎಚ್ಚರಿಕೆಯಿಂದ ಇರಬೇಕಾದ ಅಗತ್ಯ ಇದೆ. ಏನಯ್ಯಾ ಎಕರೆಗೆ ಒಂದು ಟನ್ನು ಕೊಡೋ ಗಿಡಾಂದರೆ, ಈಗಿನ ಬೆಲೆಯಲ್ಲಿ ಮೂರು ಲಕ್ಷ. ಯಾವುದನ್ನು ಬೆಳೆಯೋದರಿಂದಲೂ ಇಷ್ಟೊಂದು ಲಾಭಾ ಇಲ್ವಾಲ್ಲಾ" ಎಂದು ಅಂಗಾಡಿ ಸಿದ್ದಪ್ಪನನ್ನು ಎಚ್ಚರಿಸಿದ.

"ನಮ್ಮನ್ನ ನಿಜವಾಗ್ಲೂ ತರ್ಕದಲ್ಲಿ ಸೋಲಿಸಿದ ಕಣಯ್ಯ ಈ ಮುದುಕ. ನಮ್ಮ ಅಖಾಡದಲ್ಲೇ ನಮ್ಮನ್ನು ಸೋಲಿಸೋರ ಬಗ್ಗೆ ನನಗೆ ಗೌರ ಇದೆಯಪ್ಪ" ಎಂದ ರಾಮಚಂದ್ರ ಪಾಟೀಲರ ಬಗ್ಗೆ ಮೆಚ್ಚುಗೆ ಸೂಚಿಸುತ್ತ ಜಯರಾಮನ ಕಡೆ ತಿರುಗಿ, "ಏನು ಜಯರಾಂ ಒಂದು ಮಾತೂ ಇಲ್ದೆ ಮಂಕನ ತರ ಕೂತಿದ್ದೀಯಲ್ಲೊ ಯಾಕೋ ಸುಮ್ಮನೆ ಕುಳಿತೆ?" ಎಂದು ಕೇಳಿದ.

"ಏನಿಲ್ಲ ನಮ್ಮ ಹುಡುಗ್ರನ್ನ ದೆವ್ವದ ಮೇಲೆ ಛೂ ಬಿಟ್ಟಿದ್ದೀವಲ್ಲಾ ಏನ್ಮಾಡ್ತಿರಬಹುದಾಂತ ಯೋಚಿಸ್ತಿದ್ದೆ" ಎಂದ ಜಯರಾಂ.

"ಇಲ್ಲೇ ಊಟಾ ಮಾಡಿ" ಎಂದ ಅಂಗಾಡಿ. ಟಿ.ಬಿ. ಮೇಟಿಗೆ ಊಟಕ್ಕೆ ಹೇಳಿ ಅಲ್ಲೇ ಹರಟುತ್ತಾ ಕುಳಿತರು. ಊಟ ಮುಗಿದು ಅವರು ಹೊರ ಬರುವ ವೇಳೆಗೆ ಸರಿರಾತ್ರಿಯಾಗಿತ್ತು. ಆಮೇಲೂ ಅವರು ಟಿಬಿಯಲ್ಲೇ ಕುಳಿತು ಹರಟೆ

ಕೊಚ್ಚುತ್ತಾ ಇದ್ದರು. ತಮ್ಮ ಅನ್ವೇಷಣೆಯ ಅಂತಿಮ ಹಂತ ಕೆಸರೂರು ಹೈಬ್ರೀಡ್ ನೋಡಿದರೆ ಮುಗಿಯಿತೆಂದು ಅವರಿಗೆಲ್ಲಾ ಒಂದು ಬಗೆಯ ನೆಮ್ಮದಿಯಾಗಿತ್ತು. ಅಷ್ಟು ಹೊತ್ತಿಗೆ ಸರಿಯಾಗಿ ನೆಲ ನಡುಗುವಂತೆ "ಢೋಂಮ್" ಎಂದು ಒಂದು ಭಯಂಕರ ಆಸ್ಫೋಟನೆಯ ಸದ್ದು ಕೇಳಿಸಿತು. ಕೆಸರೂರಿನ ಬಳಿಯ ಪರ್ವತ ಶ್ರೇಣಿಗಳಲ್ಲೊಂದು ಜ್ವಾಲಾಮುಖಿ ಆಸ್ಫೋಟನೆಗೊಂಡಂತಿತ್ತು ಆ ಸದ್ದು. ಎಲ್ಲ ಕಂಗಾಲಾಗಿ ಮೌನವಾದರು. ಆ ಮೌನದಲ್ಲಿ ಎಲ್ಲೋ ದೂರ "ಅಯ್ಯೋ ಅಮ್ಮ" ಎನ್ನುವ ಮಾನವರ ಆರ್ತನಾದ ಅವರೆಲ್ಲರಿಗೂ ದಿಗಿಲಿಕ್ಕಿಸುವಂತೆ ಕೇಳಿತು. ಟಿಬಿಯಲ್ಲಿ ಕುಳಿತಿದ್ದ ಆರು ಜನರೂ ಹೌಹಾರಿ ಎದ್ದುನಿಂತರು. ಮೆಟ್ಟಿಲಿಳಿದು ಮುನ್ನೆಡೆದರು. ನಿದ್ರಿಸುತ್ತಿದ್ದ ಕೆಸರೂರಿನ ಜನಕ್ಕೆ ಇದರ ಪರಿವೆ ಇದ್ದಂತಿರಲಿಲ್ಲ. ಅಷ್ಟರಲ್ಲಿ ಆ ಚೀರಾಟ ಕೆಸರೂರಿನ ಹೊರವಲಯದಿಂದ ಕೆಸರೂರಿಗೆ ಹತ್ತಿರಾಗತೊಡಗಿತು.

ಆರು ಜನವೂನೋಡುತ್ತಿದ್ದಂತೆಯೇ ದೂರದಿಂದ ಬರುತ್ತಿದ್ದ ಬೀದಿ ದೀಪದ ಬೆಳಕಿನಲ್ಲಿ ಬೀದಿಯಲ್ಲಿ ನಾಲ್ಕು ವಿಕಾರಾಕೃತಿಗಳು ಕಗ್ಗರ್ತಗೆ ಕಾಣಿಸಿಕೊಂಡವು. ನೋಡುತ್ತಿದ್ದವರಿಗೆ ಎದೆ ಝಲ್ಲೆಂದಿತು. ಮೈಯೆಲ್ಲಾ ಟಾರು ಮೆತ್ತಿಕೊಂಡು ಆಕಾರವೆ ನಶಿಸಿದ್ದ ನಾಲ್ವರು ರಸ್ತೆ ದೀಪಕ್ಕೆ ಹತ್ತಿರಾದರು. ಇವರಾರಿಗೂ ಏನು ಮಾಡಬೇಕೆಂದು ತೋಚದೆ ಮುಂದೇನಾದೀತೆಂದು ನಿರೀಕ್ಷಿಸಿದರು. ಅಷ್ಟರಲ್ಲಿ ಒರಲುತ್ತಿದ್ದ ನಾಲ್ವರಲ್ಲಿ ಒಂದು ಆಕೃತಿ ದೊಪ್ಪೆಂದು ಕುಸಿಯಿತು. ಇನ್ನೂ ಹೆಜ್ಜೆ ಇಡುತ್ತಾ ಮುಂದುವರಿಯುತ್ತಿದ್ದ ಮೂವರಿಗೂ ಮೆತ್ತಕೊಂಡಿದ್ದ ಟಾರಿನ ಭಾರಕ್ಕೆ ಚರ್ಮ ಬಾಳೆ ಹಣ್ಣಿನ ಸಿಪ್ಪೆ ಸುಲಿದಂತೆ ಸುಳಿದು ಚರ್ಮದೊಳಗಿನ ಬಿಳಿ ಚರಬಿ ಕಾಣಲಾರಂಭಿಸಿತು. ಚರ್ಮ ಎಳೆದುಕೊಳ್ಳುತ್ತಲೇ ನಡೆದ ಮೂವರೂ, ಅಲ್ಲಿ ನಿಂತು ನೋಡುತ್ತಿದ್ದವರ ಪರಿವೆ ಇಲ್ಲದೇ ಮುಂದುವರಿದು ಒಬ್ಬೊಬ್ಬರಾಗಿ ಕುಸಿದು ಉರುಳಿದರು. ಈ ಭಯಂಕರ ದೃಶ್ಯ ನೋಡಿದ ಆರು ಜನವೂ ಮೈಯ್ಯೆಲ್ಲ ಮರಗಟ್ಟಿದವರಂತೆ ನಿಂತಿದ್ದರು. ಇದೇನು ನಿಜವೋ ದುಃಸ್ವಪ್ನವೋ ಅರಿವಾಗಲಿಲ್ಲ ಅವರಿಗೆ.

"ಏನಯ್ಯಾ ಜಯರಾಂ ನಾವು ನೋಡ್ತಿರೋದೇನು ನಿಜವೋ ಭ್ರಾಂತಿಯೋ?" ಎಂದ ರಾಮಚಂದ್ರ.

"ಏನು ಊರಿದು? ನಮ್ಮ ಕಲ್ಪನೆಗೆ ಮೀರಿದ್ದೆಲ್ಲ ಸಂಭವಿಸ್ತಿದೆ!" ಎಂದ ಜಯರಾಮ್. ಆದರೆ ಒಂದು ರೀತಿಯಲ್ಲಿ ಅವನ ಕಲ್ಪನೆಯ ಕಥೆಯೇ ಅವರು ಕಂಡ ಘೋರ ದೃಶ್ಯಕ್ಕೆ ಕಾರಣವಾಗಿತ್ತು.



## ಅಧ್ಯಾಯ ೩೪

"ದೇವ್ವಾ ಎಲ್ಲಾ ನಿಮ್ಜಾತೀಲಿ ಕಣೋ ರಮೇಶ, ನಮ್ಜಾತೀಲಿ ದೆವ್ವಾನೆ ಇಲ್ಲ" ಎಂದು ರಫಿ ರಮೇಶನಿಗೆ ಹೇಳಿದ.

ರಫೀ ಸದ್ಯಕ್ಕೆ ಇವರ ಟೀಮಿನ ಕ್ಯಾಪ್ಟನ್. ಅವನು ಕಾರ್ಯದರ್ಶಿ ಮಾತ್ರವಲ್ಲದೆ ಜವಾಬ್ದಾರಿಯಲ್ಲೂ ಗಾಂಭೀರ್ಯದಲ್ಲೂ ಇತರರಿಗಿಂತ ಕೊಂಚ ಮೇಲಾಗಿದ್ದ. ಆದ್ದರಿಂದಲೇ ರಾಮಚಂದ್ರ ಅವನನ್ನು ಕಮಾಂಡರ್ ಮಾಡಿ ಇತರರಿಗೆ ಅವನು ಹೇಳಿದ ಹಾಗೆ ಕೇಳಬೇಕೆಂದೂ, ಏನಾದರೂ ಕೃಷ್ಣೇಗೌಡರ ಮನೆಯೊಳಗೇ ದೆವ್ವದ ಗಲಾಟೆ ನಡೆದರೆ ಮಾತ್ರ ಅವರ ಮನೆಯೊಳಗೆ ಹೋಗಬೇಕೆಂದೂ, ಇಲ್ಲದಿದ್ದರೆ ಮನೆ ಹೊರಗೇ ಯಾರು ಕಲ್ಲೆಸೆಯುತ್ತಾರೆ ನೋಡಬೇಕೆಂದೂ ಕಟ್ಟಾಜ್ಞೆ ಮಾಡಿ ಕಳಿಸಿದ್ದ. ಕಳ್ಳರು ಸಿಕ್ಕಿದರೆ ಹಿಡಿಯಬೇಕೇ ಹೊರತು ಹೊಡೆಯುವುದು ಇತ್ಯಾದಿ ಹಿಂಸಾತ್ಮಕ ಚಟುವಟಿಕೆ ನಡೆಸಬಾರದೆಂದೂ ತಿಳಿಸಿದ್ದ. ರಫಿ ತಂದೆತಾಯಿಯನ್ನು ಚಿಕ್ಕಂದಿನಲ್ಲೇ ಕಳೆದುಕೊಂಡು ಬೆಳೆದವನು. ಚಿಕ್ಕಂದಿನಿಂದಲೇ ಅಲ್ಲಿ ಇಲ್ಲಿ ದುಡಿದು ತನ್ನ ಹೊಟ್ಟೆಪಾಡು ನೋಡಿಕೊಂಡವನು. ಈಗಲೂ ಅವನು ಸಂಜೆ ಟೈಪಿಂಗ್ ಸ್ಕೂಲಿನಲ್ಲಿ ಟೈಪಿಂಗ್ ಪಾಠ ಹೇಳಿಕೊಟ್ಟು ಹೊಟ್ಟೆಪಾಡು ನೋಡಿಕೊಳ್ಳುತ್ತಿದ್ದ. ಆದ್ದರಿಂದಲೇ ಅವನೂ ತನ್ನ ಮಿತ್ರವರ್ಯರ ಜಗಳ ದೊಂಬಿ ಹೊಡೆದಾಟಗಳಲ್ಲಿ ಮನಸಾರ ಭಾಗವಹಿಸುತ್ತಿದ್ದವನಾದರೂ, ಹೆಚ್ಚು ಗಂಭೀರನಾಗಿದ್ದ.

"ದೆವ್ವ ನಿಮ್ಮ ಜಾತೀಲಿ ಇಲ್ಲದೆಹೋದರೆ ನಿಮ್ಮ ಜಾತಿಯೋನೊಬ್ಬ ಹಖೀಂಸಾಬಿ ಅಂತ ಗುಟ್ಟಳ್ಳೀಲಿ ಇದನಲ್ಲ, ಅವನು ದೆಯ್ಯ ಬಿಡಿಸೋದು ತಾಯ್ತ ಕೊಡೋದು ಮಾಡ್ತಾನಲ್ಲ?" ಎಂದು ಇಂಗ್ಲೀಷ್‌ಗೌಡ ಪ್ರಶ್ನೆ ಹಾಕಿದ.

ರಫಿ, ರಮೇಶ, ಅಂಗಾರ, ಚಂದ್ರ, ಇಂಗ್ಲಿಷ್‌ಗೌಡ ಐದು ಜನವೂ ಕೃಷ್ಣೇಗೌಡನ ಮನೆಗೆ ದೆವ್ವಕ್ಕೆ ಶನಿ ಬಿಡಿಸಲು ಕತ್ತಲಾಗುತ್ತಿದ್ದಂತೆ ಹೊರಟಿದ್ದರು.

"ಏನೋಪ್ಪ ಖುರಾನಿನಲ್ಲಿ ಎಲ್ಲೂ ಮನ್‌ಷರು ದೆವ್ವ ಆಗ್ತಾರೆ ಅಂತ ಹೇಳಿದಂತೆ ಕಾಣಲಿಲ್ಲ" ಎಂದು ರಫಿ.

"ಏನು ವಿಚಾರವಾದೀನೋ ನೀನು? ದೆವ್ವ ಇರೋದಾದ್ರೆ ಖುರಾನ್‌ನಲ್ಲಿ

ಹೇಳದೆ ಇದ್ರೂ, ಭಗವದ್ಗೀತೇಲಿ ಹೇಳದೆ ಇದ್ರೂ, ಬೈಬಲ್ಲಿನಲ್ಲಿ ಹೇಳದೆ ಇದ್ರೂ ಇದ್ದೇ ಇರುತ್ತೆ. ಇಲ್ಲಾಂತ ಆದರೆ ಯಾವುದರಲ್ಲಿ ಹೇಳಿರಲಿ ಇರೋಲ್ಲ" ಎಂದ ಇಂಗ್ಲಿಷ್‌ಗೌಡ,

"ಅದಿರಲಿ ನಿಗೇನು ಅನ್ನಿಸುತ್ತೊ?"

"ನಂಗೇನೋ ಇಲ್ಲಾಂತಾನೆ. ಆದ್ರೂ ಆಕಸ್ಮಾತ್ ಇದ್ರೆ ಏನೋ ಮಾಡೋದೂ?"

"ಹೋಗಿ ಇದೇ ಅಂತ ಮೆಷ್ಟ್ರಿಗೆ ಹೇಳೋದು. ಅವರು ಏನ್ಮಾಡಬೇಕಂತ ಹೇಳ್ತಾರೆ" ಎಂದ ರಮೇಶ್.

"ಇದ್ರೆ ಒಳ್ಳೇದೆ ಆಯ್ತು. ಇದೆ ಅಂತ ತೋರಿಸಿ ಕೊಟ್ಟೋರಿಗೆ ಒಂದು ಲಕ್ಷ ಕೋಡ್ತಾರಂತಲ್ಲ" ಎಂದ ಅಂಗಾರ.

"ದೆವ್ವಾ ಇರೋದೂ ಬೇಡ, ಒಂದು ಲಕ್ಷಾನೂ ಬೇಡ" ಎಂದ ಇಂಗ್ಲಿಷ್‌ಗೌಡ. ಕೊಂಚ ಹೊತ್ತು ಮೌನವಾಗಿ ಸ್ವರ್ಣಧಾರ ಎಸ್ಟೇಟಿನ ಕಡೆಗೆ ನಡೆಯತೊಡಗಿದರು. ಮತ್ತೆ ಇಂಗ್ಲಿಷ್‌ಗೌಡನಿಗೆ ಮೌನ ಬೇಸರವಾಯ್ತು. "ಆ ಬೊಮ್ಮೇಗೌಡನ್ನ ನಮ್ಮ ಜೊತೆ ಬರೋದು ಬೇಡಾಂತ ಒದ್ದೋಡಿಸಿದ್ದು ಒಳ್ಳೇದೇ ಆಯ್ತು. ಅವನು ವೆಂಕಟೇಶ್ವರ ದೇವಸ್ಥಾನದ ಕಡೆಯೋನು. ಜಯಂತಿ ಮನೆಗೆ ಹೋಗಬಹುದು ಅಂತಾನೆ ಬಡ್ಡೀಮಗ ನಾನೂ ಬರ್ತೀನಿ ಅಂದಿದ್ದು" ಎಂದು ತಾವ್ಯಾರೂ ಅಂಥವರಲ್ಲ ಎನ್ನುವಂತೆ ಮಾತಾಡಿದ.

ಚಂದ್ರನಿಗೆ ರೇಗಿತು. "ರ್‍ಯಾಸ್ಕಲ್. ಅವತ್ತು ನಮ್ಮನ್ನ ದಾರೀಲಿ ಜಗಳಕ್ಕೆ ಸಿಕ್ಕಾಕಿಸಿ ಪೋಲೀಸ್ನೋರಿಗೆ ಹೆದರಿ ಓಡೋಗಿದೀಯ, ಈವತ್ತು ಭಾರಿ ಧೈರ್ಯಸ್ತನ ಹಾಗೆ ಮಾತಾಡ್ತೀಯ, ನಿಜ ಬೊಗಳು ನೀನು ಬಂದಿರೋದೂ ಅದಕ್ಕೇ ಅಲ್ವೇನೋ?" ಎಂದು ಇಂಗ್ಲಿಷ್‌ಗೌಡನಿಗೆ ಉಗಿದ.

"ಥುತ್ ಅವತ್ತಿಂದವತ್ತಿಗೆ ಮರ್‍ತು ಬಿಡಬೇಕಂತ ಮಾತಾಡಿಲ್ವ? ಈಗ ಹಳೇ ಸಮಾಚಾರ ತೆಗೀತೀಯಾ? ನಿಜ ಹೇಳು ಬಡ್ಡೀಮಗನೆ ನೀ ಬಂದಿರೋದು ಯಾಕೇಂತ?" ಎಂದು ಇಂಗ್ಲಿಷ್‌ಗೌಡ ಜಗಳ ತೆಗೆದ. ಎಲ್ಲರೂ ದೆವ್ವದ ಬಗ್ಗೆ ಎಷ್ಟು ಸೀರಿಯಸ್ಸಾಗಿದ್ದರೋ ಜಯಂತಿ ಬಗ್ಗೆಯೂ ಹಾಗೇ ಇದ್ದರು. ಒಳಗೊಳಗೇ ಜಯಂತಿಯ ಸ್ವಯಂವರಕ್ಕೆ ಹೊರಟ ರಾಜಕುಮಾರರ ತರ ಎಂದು ಪರಿಭಾವಿಸಿಕೊಂಡಿದ್ದರು. ಇದ್ದಕ್ಕಿದ್ದಂತೆ ಅವರಲ್ಲಿ ನೀ ಯಾಕೆ ಬಂದಿರೋದು? ನೀ ಯಾಕೆ ಬಂದಿರೋದು ಬೊಗಳು? ಎಂದು ಗಲಾಟೆ ಶುರುವಾಯ್ತು. ರಸ್ತೆಯಲ್ಲೇ ನಿಂತು ಗಲಾಟೆ ಮಾಡತೊಡಗಿದರು. ಗುಂಪಿನ ಕ್ಯಾಪ್ಟನ್ ರಫಿಗೆ



ತುಂಬಾ ಪೀಕಲಾಟಕ್ಕೆ ಇಟ್ಟುಕೊಂಡಿತು. ಇದು ಜಗಳದಿಂದ ತೀರ್ಮಾನವಾಗಲೆಂದು ಬಿಟ್ಟರೆ ಹೊಡೆದಾಟ ಆದೀತೆಂದೆ ಅವನು ವಿವೇಕದಿಂದ "ಲೋ ನೋಡ್ರೋ, ನಮಗೆಲ್ಲಾ ಹುಡುಗೀರ್‍ನ ಕಂಡ್ರೆ ತುಂಬಾ ಇಷ್ಟ ಅನ್ನೋದರಲ್ಲಿ ಅನುಮಾನವಿಲ್ಲ. ಅದಕ್ಕೇ ಅವರಿಗೆ, ಅವರ ಮನೆಯವರಿಗೆ ಉಂಟಾಗಿರೋ ಕಷ್ಟ ಪರಿಹಾರ ಮಾಡೋದಕ್ಕೆ ಹೋಗ್ತಿದೀವಿ ಅಲ್ವಾ? ನಾಳೆ ವನಜ ಶಾಮಲ ವನಮಾಲ ಇವರು ಯಾರ ಮನೆಗೆ ಪೋಕ್ರಿಗಳು ಕಲ್ಲೆಸೆದರೂ ಹೋಗೋಲ್ವಾ. ಈ ತರ ಹಲ್ಕಾಗಳ ಹಾಗೇ ಬೀದಿಲಿ ಜಗಳ ಆಡ್ತಾ ನಿಂತುಕೊಂಡರೆ ನೋಡಿದೋರು ಏನಂತಾರೋ? ಕೃಷ್ಣೇಗೌಡರ ಮನೇಲಿ ಜಗಳ ಆಡಿದರೆ ಏನಯ್ಯಾ ಗತಿ. ಅವರುಹೋಗಿ ಮೇಷ್ಟ್ರಿಗೆ ಹೇಳಿದರೆ? ಹೀಗಾಡೋದಾದ್ರೆ ನಾನು ಇಲ್ಲೇ ವಾಪಸ್ಸ ಹೋಗ್ತಿನಪ್ಪಾ" ಎಂದುಬೆದರಿಕೆ ಹಾಕಿ ತಾನು ಕಮ್ಯಾಂಡರ್ ಅನ್ನೋದನ್ನ ಜ್ಞಾಪಿಸಿದ. ತಕ್ಷಣ ಎಲ್ಲರೂ ಜಗಳ ನಿಲ್ಲಿಸಿ "ಸ್ಸಾರಿ ಕ್ಯಾಪ್ಟನ್" ಎಂದು "ಏನ್ರೋ ಸ್ವಲ್ಪನಾದ್ರೂ ಮ್ಯಾನರ್ಸ್ ಇದಿಯೇನ್ರೋ" ಎಂದು ಒಬ್ಬರಿಗೊಬ್ಬರು ಛೀಮಾರಿ ಹಾಕಿಕೊಂಡರು.

ಕೃಷ್ಣೇಗೌಡನ ಮನೆಯಲ್ಲಿ ಜಗಳವಾಡುವ ಪ್ರಮೇಯ ಅವರಿಗೆ ಒದಗಲಿಲ್ಲ. ತಾವು ಕೇವಲ ಯರಾದರೂ ಪೋಕ್ರಿಗಳು ಈ ಕೆಲಸ ಮಾಡುತ್ತಿದ್ದಾರೆಯೇ ಎಂದು ಮಾತ್ರ, ತನಿಖೆ ಮಾಡಲು ಬಂದಿರುವುದಾಗಿಯೂ, ಅದಕ್ಕಿಂತ ಭಿನ್ನವಾದ ಬೇರೇನಾದರೂ ಕಾರಣಗಳಿದ್ದರೆ ನಾಳೆ ತಮ್ಮ ಅಧ್ಯಕ್ಷ ಜಯರಾಮ್ ಬಂದು ಅದನ್ನು ತನಿಖೆ ಮಾಡುತ್ತಾರೆಂದೂ ಹೇಳಿದರು.

ಕಲ್ಲು ಎಲ್ಲೆಲ್ಲಿ ಬೀಳುತ್ತೆ. ಯಾವ ಕಡೆಯಿಂದ ಬರುತ್ತದೆ. ಧಡ್ ಎಂದು ಹೆಂಚಿನ ಮೇಲೆ ಎಸೆದಂತೆ ಬೀಳುತ್ತದೆಯೋ? ಅಥವಾ ಗಳಗಳ ಉರುಳಿದಂತೆ ಬೀಳುತ್ತದೆಯೋ? ಇತ್ಯಾದಿಗಳನ್ನೆಲ್ಲಾ ಕೇಳಿಕೊಂಡರು. ತೋಟದ ಯಾವ ಯಾವ ಜಾಗಗಳಲ್ಲಿ ಕಾವಲು ಕೊರಬೇಕೆಂದು ಪರ್ಯಾಲೋಚಿಸಿದರು. ಆದರೂ ಅವರ ಕಣ್ಣು ದೂರದ ಮೂಲೆಗಳ ನಸುಗತ್ತಲಲ್ಲಿ ಹೊಳೆದಂತಾಗುವ ಲಂಗ ಸೀರೆಗಳತ್ತಲೇ ಓಲುತ್ತಿತ್ತು. ಅವರು ಮನೆಬಿಟ್ಟು ಮಿಣುಕು ಟಾರ್ಚುಗಳೊಂದಿಗೆ ಮೆಟ್ಟಲಿಳಿದರು. ಕೃಷ್ಣೇಗೌಡ "ತಾನೂ ಏನಾದರೂ ಬರಬೇಕೋ?" ಎಂದು ಕೇಳಿದ್ದಕ್ಕೆ ರಫಿ "ಮನೆಯವರಿಗೆ ಯಾವ ತರದ ತೊಂದರೆಯನ್ನೂ ಕೊಡಬಾರದೆಂದು ಮೇಲಿನವರಿಂದ ಆಜ್ಞೆಯಾಗಿದೆ." ಎಂದು ಹೇಳಿ ಬೇಡವೆಂದ.

ಜಯಂತಿ ಕತ್ತಲಿಂದ ಮನೆಗೆ ಬಂದಿದ್ದ ಹುಡುಗರನ್ನೇ ವೀಕ್ಷಿಸಿದಳು. ಈ ಪಡ್ಡೆ ಹುಡುಗರು ಅವಳಿಗೆ ಲೈಟಿನ ಬೆಳಕಿನಲ್ಲಿ ಸುಂದರ ಬೊಂಬೆಗಳಂತೆ ಕಂಡರು. ವಂಕಿ ಕೂದಲಿನ ನೀಲಿ ಕಣ್ಣಿನ ರಫಿ ಕಾಣಿಸಿದ ಅವಳಿಗೆ. ನೋಡುತ್ತಾ



ಹೋದಂತೆ ರಫಿಯೊಬ್ಬನೇ ಪ್ರಕಾಶಮಾನವಾಗಿ ಕಾಣಿಸುತ್ತಾ ಮಿಕ್ಕವರಲ್ಲಾ ಕತ್ತಲಲ್ಲಿ ಕರಗಿ ಹೋಗತೊಡಗಿದರು. ರಫಿ ಎಲ್ಲೋ ಮೋಡಗಳ ಮೇಲೆ ನಿಂತ ಪ್ರವಾದಿಯಂತೆ ಕಂಡ. ಅವಳಿಗೆ ಇದುವರೆಗೂ ಎಲ್ಲ ಹುಡುಗರ ಬಗ್ಗೆಯೂ ಇದ್ದ ನಿರಾಕಾರ ಪ್ರೀತಿ ಇದ್ದಕ್ಕಿದ್ದಂತೆ ರಫಿ ಎನ್ನುವ ದೇವದೂತನ ರೂಪ ಆಕಾರಗಳನ್ನು ಪಡೆದುಕೊಳ್ಳತೊಡಗಿತು. ಅವನ ಗಾಂಭೀರ್ಯ! ಅವನ ಒರಟು ವ್ಯಕ್ತಿತ್ವ! ಅವನ ಅಲಕ್ಷಕ್ಕೀಡಾದ ಕೆದರಿದ ಕ್ರಾಪು! ಅವನ ಬಲವಾದ ತೋಳುಗಳು! ಅವನ ನಗು! ಇದೊಂದು ವಿಚಿತ್ರವಾದ ದರ್ಶನದಂತೆ ಭಾಸವಾಯ್ತು ಅವಳಿಗೆ. ಈ ಕ್ಷಣ ಕಳೆದುಹೋದರೆ ಮತ್ತೆ ತಿರುಗಿ ನರಜನ್ಮಕ್ಕೆ ಬೀಳುತ್ತೇನೆಂದು ಏಕಾಗ್ರತೆಯಿಂದ ನೋಡುತ್ತಾ ಇಂದ್ರಿಯ ಭೂಮಿಕೆಯಾಚೆಗೆ ಸಾಗತೊಡಗಿದಳು. ಅವಳ ಪಂಚೇಂದ್ರಿಯಗಳು ಬರಿಯ ರೂಪ ಸೊಬಗಿನ ಆಕರ್ಷಣೆಯನ್ನು ಮೀರಿ ವ್ಯಕ್ತಿತ್ವದ ಗುರುತ್ವಾಕರ್ಷಣ ಶಕ್ತಿಯಲ್ಲಿ ಲೀನವಾಗತೊಡಗಿದವು. ಆ ಕ್ಷಣ ಅವಳಿಗೆ ಅವಳ ಕಾಣ್ಕೆಯಲ್ಲಿ ಲೀನವಾಗಬೇಕೆಂದೆನ್ನಿಸಿತು.

ಜಯಂತಿ ಗಿರ್ರನೆ ತಿರುಗುವ ಅಗ್ನಿಗೋಲವಾದಳು. ಮನಸ್ಸಿನ ಉನ್ಮತ್ತ ಪರಿಭ್ರಮಣೆಯ ವೇಗದಲ್ಲಿ ಕಿಡಿಗಳು ಕೇಂದ್ರದಿಂದ ಕಳಚಿ ದೂರ ಹಾರುವಂತೆ ಜಾತಿ ಮನೆತನ ಕುಟುಂಬ ಹೆಸರುಗಳೆಲ್ಲಾ ಕಳಚಿ ಕಳಚಿ ಒಯ್ಯನೆ ದೂರ ಹಾರಿದವು. ಅವಳಿಗೆ ತನಗೆ ಕೈಕಾಲುಗಳಿಲ್ಲವೋ ಎಂದು ದಿಗಿಲಾಯ್ತು.



## ಅಧ್ಯಾಯ ೩೫



"ಅಲ್ಲಿ ನೋಡೋ! ಅದೇನದು? ಯಾರೋ ಬರ್ತಿದಾರೆ! ನೋಡು ಬೀಡಿ ಅಲ್ಲಾಡ್ತಿದೆ!" ಗಾಬರಿಯಿಂದ ಇಂಗ್ಲಿಷ್‌ಗೌಡ ರಫಿಯ ಕಿವಿಯಲ್ಲಿ ಕಿರಲಿದ. ರಫಿ ಕಣ್ಣು ನೋಯುವಂತೆ ಕತ್ತಲಲ್ಲಿ ದಿಟ್ಟಿಸಿ ನೋಡಿದ. ಅವನಿಗೆ ಅತ್ತಿಂದಿತ್ತ ಹಾರಾಡುವ ಒಂದು ಮಿಣುಕು ಹುಳು ಮಾತ್ರ ಕಂಡಿತು. "ಥು ನೀನು ಈ ತರ ಗಲಾಟೆ ಮಾಡ್ತಿದ್ದರೆ ಯಾರ್ನೂ ಹಿಡಿಯೋದಕ್ಕೆ ಆಗೋದಲ್ಲ ಕಣೋ" ಎಂದು ಬೇಸರದಿಂದ ಇಂಗ್ಲಿಷ್‌ಗೌಡನಿಗೆ ಬಯ್ದ.

ಇಂಗ್ಲಿಷ್‌ಗೌಡನಿಗೆ ಜಯಂತಿಯ ಮನೆ ಎನ್ನುವ ಥ್ರಿಲ್ ಎಲ್ಲಾ ತಣ್ಣಗಾಗಿ ಕತ್ತಲ ತಂಗಾಳಿಯಲ್ಲಿ ತೋಟದ ನಡುವೆ ಬೆಳಗಿನವರೆಗೂ ಅಡ್ಡಾಡುತ್ತಾ ಇರುವುದು ನೀರಸವಾಗಿ ಕಂಡಿತು. ಪದೇಪದೇ ಮನೆಯ ಬೆಚ್ಚನೆ ಹಾಸಿಗೆ ಹೊದಿಕೆಗಳು ಕಲ್ಪನೆಗೆ ಬರತೊಡಗಿದ್ದವು. ಅವನು ಮೊದಲೇ ಮಿಕ್ಕ ಮೂವರ ಜೊತೆ ಮಾತಾಡಿ ತರಲೆ ತೆಗೆದಿದ್ದರಿಂದ ಮತ್ತೆಲ್ಲಾದರೂ ಜಗಳ ತೆಗೆದುಕೊಂಡಾರೆಂದು ರಫಿ ಅವನನ್ನೇ ತನ್ನೊಡನೆ ಕರೆದುಕೊಂಡು ಮಿಕ್ಕ ಮೂವರನ್ನೂ ಇನ್ನೊಂದು ಪಾರ್ಶ್ವಕ್ಕೆ ಕಳಿಸಿದ್ದ.

ದೊಡ್ಡ ದೊಡ್ಡ ಬಾವಲಿಗಳು ತಮ್ಮ ತೊಗಲಿನ ರೆಕ್ಕೆ ಬಡಿಯುತ್ತಾ ರಪ್ ರಪ್ ಎಂದು ಸದ್ದು ಮಾಡಿಕೊಂಡು ಹಾರಾಡಿದವು. ದೂರದಲ್ಲಿ ಯಾವುದೋ ನಿಶಾಚರ ಹಕ್ಕಿ ಸ್ಕ್ರೀಚ್ ಎಂದು ಸ್ಲೇಟಿನ ಮೇಲೆ ಬಳಪ ಗೀರಿದಂತೆ ಕೂಗಿತು. ಇನ್ನೂ ಎಷ್ಟೋ ಹೊತ್ತು ಇರಬೇಕೆಂದು ಮನಗಂಡ ಅವರು ಮರ ಒಂದರ ಬುಡದಲ್ಲಿ ಕುಳಿತುಕೊಳ್ಳುವ ಹವಣಿಕೆಯಲ್ಲಿದ್ದರು. ಅಷ್ಟರಲ್ಲಿ ಸಮೀಪದಲ್ಲೆಲ್ಲೋ ಧುಪ್ ಎಂದು ಕಲ್ಲುಬಿದ್ದ ಸದ್ದಾಯ್ತು. ಇಬ್ಬರೂ ಮೈಯೆಲ್ಲಾ ಕಣ್ಣಾಗಿ ವೀಕ್ಷಿಸಿದರು. ಏನೂ ಕಾಣಲಿಲ್ಲ. ಅಷ್ಟರಲ್ಲಿ ಇನ್ನೊಂದು ಕಲ್ಲು ಬಿದ್ದ ಸದ್ದು!

"ಅದೇನೋ ಅದೂ!" ರಫಿ ಇಂಗ್ಲಿಷ್‌ಗೌಡನಿಗೆ ಒಂದು ಕಡೆಗೆ ಕೈ ಮಾಡಿ ತೋರಿಸಿದ. ಇಂಗ್ಲಿಷ್‌ಗೌಡನಿಗೆ ದಿಗಿಲು ಶುರುವಾಯ್ತು. "ಎಲ್ಲೋ ಏನೋ?" ಎಂದು ಪಿಸುಮಾತಿನಲ್ಲಿ ಕೇಳುತ್ತಾ ಮೆಲ್ಲನೆ ರಫಿ ಬಳಿಗೆ ಸರಿದ. "ಅಲ್ಲಿ ನೋಡಲ್ಲಿ" ಎಂದು ರಫಿ ತೋರಿಸಿದ. ಇಂಗ್ಲಿಷ್‌ಗೌಡನಿಗೂ ಏನೋ ಅಸ್ಪಷ್ಟ ಆಕೃತಿ ಕಂಡಂತಾಯ್ತು. ಇಂಗ್ಲಿಷ್‌ಗೌಡನಿಗೆ ಹೃದಯ ಬಾಯಿಗೆ ಬಂತು ನೋಡುತ್ತಿದ್ದಂತೆ ಆ ಆಕೃತಿಗೆ ಕೈ ಮೂಡಿದಂತಾಯ್ತು. "ಅಯ್ಯೋ ಪಿಶಾಚಿ! ಕೋಡ್ಗ್ರೂ ಕೈನ" ಎಂದು ಕಿರಲಿದ. ಮಾತು ಹೊರಡಲಿಲ್ಲ. 'ಇನ್ನೂ ಜೀವ ಉಳಿಸಿಕೊಳಲ್ಲು ಸಮಯ ಇದೆ! ಓಡೋದು ಬಿಟ್ಟು ಈ ಸಾಬಿ ಸೂಳೇಮಗ ಗೂಟ ಬಡಿದಂತೆ ನಿಂತಿದಾನೆ!' ಇಂಗ್ಲಿಷ್‌ಗೌಡ ಹೇಗೋ ಗಂಟಲು ಒದ್ದೆ ಮಾಡಿಕೊಂಡು "ದೆಯ್ಯಾ ಕಣಲೇ ರಫಿ! ಓಡ್ರೋ ಓಡ್ರೋ" ಎಂದು ತೊದಲಿದ. ಅವನಿಗೆ ಗಾಬರಿಯಾದಾಗಲೆಲ್ಲಾ ಅವನ ಕಾಲುಗಳು ಒಲಂಪಿಕ್ ಓಟಗಾರನಂತೆ ಅದ್ಭುತವಾಗಿ ಕೆಲಸ ಮಾಡುತ್ತಿದ್ದವು. ಗಟ್ಟಿ ಹಿಡಿದುಕೊಂಡಿದ್ದ ರಫಿಯ ಕೈಯನ್ನು ಕೊಡವಿ ಮಿಂಚಿನ ವೇಗದಲ್ಲಿ ಹಿಂದೊಮ್ಮೆ ಓಡಿದ್ದಂತೆ ಏಲಕ್ಕಿ ಗಿಡಗಳ ನಡುವೆ ಓಡತೊಡಗಿದ.

ರಫಿ ಓಡಲಿಲ್ಲ. ಇವನಿಗೂ ಎದೆ ಹೊಡೆದುಕೊಂಡರೂ ಹೆದರಿ ಬೆನ್ನು ತೋರಿಸುವುದು ಮಿಕ್ಕ ಮೂವರಂತೆ ಇವನಿಗೂ ಸಾಧ್ಯವಿರಲಿಲ್ಲ. ಪ್ರಾಣ ಒತ್ತೆ ಇಟ್ಟು ಸಾಹಸ, ಜಗಳ, ಹೊಡೆದಾಟಗಳನ್ನು ಮಾಡಿ ಮಾಡಿ ಅವರೆಲ್ಲ ಭಯಾನಕ ಪರಿಸ್ಥಿತಿಯಲ್ಲಿ ಮೊಂಡು ಬಿದ್ದು ನಿಲ್ಲುತ್ತಿದ್ದರು. ಈಗಲೂ ರಫಿ ಮೊಂಡಾಗಿ ನಿಂತ. ಆ ಆಕೃತಿ ಚಲಿಸಿದಂತಾಯ್ತು. "ಪರಾರಿಯಾಗ್ತಾನೆ ಕಲ್ಲು ಹೊಡೆದ ಕಳ್ಳ!" ರಫಿ ಹಿಡಿಯಲು ಮುಂದಾದ. ಆದರೆ ರಫಿಗೆ ಎದೆ ಝಲ್ಲೆನ್ನುವಂತೆ ಆ ಆಕೃತ ಓಡದೆ ಕೈಚಾಚಿ ಇವನತ್ತಲೆ ನುಗ್ಗಿ ಬಂತು. ನೋಡುತ್ತಾನೆ! ಜಯಂತಿ! ಜಯಂತಿ ರಫಿಯನ್ನು ತಬ್ಬಿ ಹಿಡಿದಳು.



ಇತ್ತ ಉನ್ಮತ್ತನಂತೆ ಏಲಕ್ಕಿ ಗಿಡಗಳನ್ನು ಪುಡಿ ಪುಡಿ ಮಾಡಿ ಓಡುತ್ತಿದ್ದ ಇಂಗ್ಲಿಷ್‌ಗೌಡನ್ನನು ಮಿಕ್ಕ ಮೂವರೂ ನೋಡಿದರು. "ಸಿಕ್ಕಾ ಕಳ್ಳ" ಎನ್ನುತ್ತ ಅವನ ಬೆನ್ನುಹತ್ತಿ ಬೆರೆಸಾಡಿದರು. ಓಡಿಸಿಕೊಂಡು ಬರುತ್ತಿದ್ದ ಅವರ ಮಾತುಗಳಿಂದ ಗೆಳೆಯರೆಂದು ತಿಳಿದ ಇಂಗ್ಲಿಷ್‌ಗೌಡ ಏದುಸಿರು ಬಿಡುತ್ತಾ ನಿಂತ. ಅವನನ್ನು ನೋಡಿ ಈ ಮೂವರು ಅವಾಕ್ಕಾದರು.

"ಯಾಕೋ ಬೇಕೂಫ ಓಡ್ತೀಯ?" ಎಂದು ರಮೇಶ.

"ದೆವ್ವ.... ದೆವ್ವ..... ನಮ್ಮನ್ನ ಕರೀತು!"

"ರಫಿ ಎಲ್ಲೋ?"

"ಅಲ್ಲೇ ಇದ್ದ."

"ಥು ಸೂಳೇಮಗನೇ, ಅವನ್ನ ಸಿಕ್ಕಾಕಿಸಿ ನೀನು ಓಡಿಬಂದ್ಯಾ! ಮಿತ್ರದ್ರೋಹಿ ನನ್ಮಗನೆ. ಇವತ್ತು ನಿನ್ನ ಕೊಂದಾಕ್ತೀನಿ ತಡಿ."

"ನಿಮ್ಮ ದಮ್ಮಯ್ಯ ನನ್ನ ಬಿಟ್ಬಿಡಿ."

"ಬಿಡೊದು? ರಫಿ ಏನಾದರೂ ಸತ್ತಾಂದರೆ ನಿನ್ನ ಇವತ್ತು ಇಲೇ ಸಾಯಿಸಿ ದೆವ್ವಾ ಸಾಯಿಸ್ತೂ ಅಂತ ಹೇಳ್ತೀವಿ ತಡೆ" ಎಂದ ರಮೇಶ. ಮತ್ತೆ ಗೆಳೆಯನನ್ನು ಸಿಕ್ಕಿಸಿ ಓಡಿದ್ದನ್ನು ಕಂಡು ರಮೇಶನಿಗೆ ಸಿಟ್ಟ ಬಂದಿತ್ತು.

ಚಂದ್ರನಿಗೂ ಕೋಪ ನೆತ್ತಿಗೇರಿ "ಆ ಸಾಬಿ ನನ್ಮಗ ನಾನೇ ಬರ್ತೀನಿ ಕಣೋ ಅಂತ ಹೇಳಿದರೆ ಬೇಡಾಂದ. ಈ ಪುಕ್ಕಲು ಸೂಳೇಮಗನ್ನ ಕರಕೊಂಡು ಹೋಗಿದಾನೆ" ಎಂದು ಇವನನ್ನು ಕರೆದುಕೊಂಡು ಹೋದ ರಫಿಗೂ ಬಯ್ಯತೊಡಗಿದ.

ಅಂಗಾರ ಇಂಗ್ಲಿಷ್‌ಗೌಡನ ಕುತ್ತಿಗೆಗೆ ಕೈಹಾಕಿ "ಒಳ್ಳೇ ಮಾತ್ನಲ್ಲಿ ರಫಿ ಎಲ್ಲಿದ್ದಾನೆ ತೋರಿಸ್ತಿಯೋ ಇಲ್ಲಾ ಸಾಯ್ತಿಯೋ ಎರಡರಾಗಿ ಒಂದು ಬೊಗಳು" ಎಂದ.

"ದೆವ್ವ ಇದಿಯಲ್ರೊ" ಎಂದ ಭಯದಿಂದ ಇಂಗ್ಲಿಷ್‌ಗೌಡ.

"ಪ್ರಾಣಕ್ಕೆ ಪ್ರಾಣ, ಬೋಳೀಮಗನೆ ನಾನಿದೀನಿ ಬಾ! ದೆವ್ವ ನಿನ್ನ ಸಾಯಿಸೋದಕ್ಕೆ ಮೊದಲು ನನ್ನ ಸಾಯಿಸಬೇಕು. ನಡಿ ಬೇಗ" ಎಂದು ರಮೇಶ.

"ತಡಮಾಡಬೇಡ ಕಣೋ ಪುಕ್ಕಲನನ್ಮಗನೆ. ನಾವಿದ್ದೀವಿ ಬಾ" ಎಂದು ಘರ್ಜಿಸಿದ ಅಂಗಾರ. ಮೂವರೂ ಇಂಗ್ಲಿಷ್‌ಗೌಡನನ್ನ ಹಿಡಿದುಕೊಂಡು ಹಿಂದಿರುಗಿದರು. ಹಿಂದಿರುಗಿ ಬರುವಾಗಲೇ ಅವರಿಗೆ ಗೊತ್ತಾಗಿದ್ದ ಇಂಗ್ಲಿಷ್‌ಗೌಡ ಯಾವ ವೇಗದಲ್ಲಿ ಎಷ್ಟೊಂದು ದೂರ ಓಡಿಬಂದಿದ್ದ ಎಂದು.

ಮೂವರೂ, ರಫಿಯೂ ಇವನೂ ಕುಳಿತಿದ್ದ ಜಾಗಕ್ಕೆ ಹತ್ತಿರಾದರೂ. ಅಷ್ಟರಲ್ಲಿ ಇಂಗ್ಲಿಷ್‌ಗೌಡನ ಕಂಗಳಿಗೆ ಮಸುಕಾದ ಒಂದು ಆಕೃತಿ ಕಂಡಿತು.

"ಅಲ್ಲಿ ನೋಡಿ ಬರ್‍ತಿದೆ" ಎಂದ ಭಯದಿಂದ.

"ಏನೋ?"

"ದೆವ್ವಾ ಬರ್‍ತಿದೆ ಓಡ್ರೋ!"

"ಬರ್‍ಲಿ ತಗೋಳೋ"

"ಅಯ್ಯೋ ಸಾಯಿಸ್ತದೆ!"

"ಸಾಯಿಸ್ಲಿ ತಗೋಳೋ"

ರಮೇಶ ನಿರ್ಧಾರದ ದನಿಯಲ್ಲಿ ಹೇಳಿದ. ಇವರು ಅವನು ಓಡಿ ಹೋಗದಂತೆ ಬಿಗಿಯಾಗಿ ಹಿಡಿದಿದ್ದರು. ಇವರ ಕಿರಾತ ಧೈರ್ಯ ನೋಡಿ ನಡುಗಿಹೋದ ಇಂಗ್ಲಿಷ್‌ಗೌಡ. ಈಗಾಗಲೇ ದೆವ್ವಗಳ ಕೈಯಲ್ಲಿ ಸಿಕ್ಕಿಕೊಂಡಿರುವುದಾಗಿ ದೃಢವಾಗಿ ನಂಬಿದ. ಅಷ್ಟರಲ್ಲಿ ಎದುರಿಗೆ ಬರುತ್ತಿದ್ದ ಆಕೃತಿ ಕೆಮ್ಮಿದಂತಾಯ್ತು. ನೋಡಿದರೆ ರಫಿ! ನಾಲ್ವರು ಗೆಳೆಯರಿಗೂ ಪರಮಾನಂದವಾಯ್ತು.

"ಏ ಯಾಕೋ ಹಾಗೆ ಓಡಿದೆ?" ಎಂದು ರಫಿ ಇಂಗ್ಲಿಷ್‌ಗೌಡನನ್ನು ಕೇಳಿದ.

"ನೀ ದೆವ್ವಾ ನೋಡಲಿಲ್ಲೇನೋ?" ಎಂದು ಇಂಗ್ಲಿಷ್‌ಗೌಡ ಕೇಳಿದ

"ಇಲ್ಲಾಪ್ಪಾ".

"ಕಲ್ಲು ಬೀಳಲಿಲ್ಲೇನೋ?"

"ಕಲ್ಲು ಬಿದ್ದಂತೆ ಸದ್ದಾಗಿದ್ದು ನಿಜ" ಎಂದ ರಫಿ.

"ಎಲ್ಲಿ ಬಿತ್ತು ಕಲ್ಲು" ಎಂದು ಕುತೂಹಲದಿಂದ ರಮೇಶ ಕೇಳಿದ.

"ಇಲ್ಲೇ ನಾಲ್ಕು ಮಾರಿನ ಆಚೆ" ಎಂದ ರಫಿ. ತೋರಿಸೆಂದು ಗೆಳೆಯರು ಕೇಳಿದರು. ರಫಿಯ ಜೊತೆ ಇಂಗ್ಲಿಷ್‌ಗೌಡ ದೆವ್ವ ಕಂಡ ಜಾಗಕ್ಕೆ ಹೊರಟರು. "ಬಿಡ್ರೋ ಬರ್‍ತೀನಿ. ಓಡೋಗಲ್ಲ ಪ್ರಾಮಿಸ್" ಎಂದು ಇನ್ನೂ ಬಿಗಿಯಾಗಿ ರಟ್ಟೆ ಹಿಡಿದುಕೊಂಡಿದ್ದ ಗೆಳೆಯರಿಗೆ ಗೋಗರೆದ ಇಂಗ್ಲಿಷ್‌ಗೌಡ.

"ಇವನೆಲ್ಲಿ ಸಿಕ್ಕ" ರಫಿ ಕೇಳಿದ.

"ಓಡೋಗ್ತಿದ್ದ. ಇವನೇ ಕಳ್ಳಾಂತ ಬೆರೆಸಾರಿ ಹಿಡಿದ್ದು. ರಫಿನ ತೋರುಸ್ತಿಯೋ ಇಲ್ಲಾ ಕುತ್ತಿಗೆ ಹಿಸುಕೋಣವೋ ಅಂತ ಹೆದರಿಸಿದ ಮೇಲೆ ಅಯೋಗ್ಯ ನಮ್ಜೊತೆ ಬಂದ" ಎಂದು ಅಂಗಾರ ನಡೆದುದನ್ನು ಹೇಳಿದ.



"ಏನ್ರೋ ಸ್ನೇಹಿತರಿಗೆ ಕುತ್ತಿಗೆ ಹಿಸುಕೋಕ್ಕೇ ಬರ್‍ತೀರಲ್ಲಾ ನ್ಯಾಯವೇನ್ರೋ?" ಎಂದು ಇಂಗ್ಲಿಷ್‌ಗೌಡ ಕೇಳಿದ., ಅವನಿಗೆ ಭಯ ಕೊಂಚ ಕಡಿಮೆಯಾಗತೊಡಗಿತ್ತು.

"ಹಿಸುಕಿದ್ವಾ? ಹಾಗೆ ಹೆದರಿಸ್ದೆ ಇದ್ರೆ ನೀನೆಲ್ಲಿ ಬರ್‍ತಿದ್ದೆ. ಇವನ್ನ ನೋಡಿದರೆ ಪಾಪ ಅನ್ಸುತ್ತೆ. ಇವನು ಯಾಕೆ ಹೀಗೆ ಹೆದರು ಸಾಯ್ತಾನೋ! ಅಷ್ಟೊಂದು ದಿನದಿಂದ ನಮ್ಮ ಜೊತೆ ಇದೀಯಾ. ಇನ್ನೂ ಹೆದ್ರಿ ಸಾಯ್ತೀಯ" ಎಂದು ರಮೇಶ ರಫಿ ಕಡೆಗೆ ತಿರುಗಿ "ನಿಂಗೇನು ಭಯ ಆಗಲಿಲ್ವೇನೋ" ಎಂದು ಕೇಳಿದ.

"ಭಯ ಆಯ್ತು. ಆದರೆ ಹೆದರಿ ಓಡೋಗೋದು ಎಲ್ಲಾದರೂ ಉಂಟೇನಯ್ಯಾ? ನೀವೆಲ್ಲಾ ಏನಂತೀರ ನಾಳೆ. ಥುತ್" ಎಂದು ತಿರಸ್ಕಾರದಿಂದ ತುಪ್ಪಿದ.

"ಹಂಗಿರಬೇಕು ನೊಡು ಕ್ರಾಂತಿಕಾರಿ ಅಂದ್ರೆ. ಅಸ್ಲಿ ಸಾಬ ಕಣೋ ನೀನು" ಎಂದು ಚಂದ್ರ ರಫಿಯನ್ನ ಹೊಗಳಿದ. 'ರಫಿ ಸಾಯೋದಾದ್ರೆ ನಾವೂ ಸಾಯೋಣ' ಅಂತ ಬಂದ ಗೆಳೆಯರನ್ನು ಕಂಡು ರಫಿಗೆ ಹೆಮ್ಮೆಯಾಯ್ತು. ಕೃತಜ್ಞತೆ ತುಂಬಿತು.

"ನೋಡ್ರಪ್ಪ ಇಲ್ಲೇ ಕೂತಿದ್ವಿ. ಅಲ್ಲೇ ಏನೋ ಕಂಡಂಗೆ ಆಯ್ತು" ಎಂದು ಜಾಗ ತೋರಿಸಿದ ರಫಿ. ಅಲ್ಲೆಲ್ಲಾ ಟಾರ್ಚು ಬಿಟ್ಟು ನೊಡಿದರು. ಏನೂ ಕಾಣಲಿಲ್ಲ. ಆದರೆ ಅವರು ಕುಳಿತ ಜಾಗದಲ್ಲಿ ಮಾತ್ರ ಏನೋ ಘಂ ಎಂದು ಸುವಾಸನೆ ಬಂದಂತಾಯ್ತು ಎಲ್ಲರಿಗೂ. "ಏನಿದು ಪರಿಮಳ?" ಎಂದು ಎಲ್ಲ ಆಶ್ಚರ್ಯಪಟ್ಟರು. "ಯಾವುದೋ ಹೂವಿನದಿರಬೇಕು" ಎಂದ ರಫಿ.

ಮಿತ್ರರೆಲ್ಲಾ ವಾಪಸ್ ಹೊರಟರು. ಕೊಂಚದೂರ ಬಂದಮೇಲೂ ರಫಿ ಹತ್ತಿರ ಅದೇ ಪರಿಮಳ ಬಂದಾಂತಾಯ್ತು ರಮೇಶನಿಗೆ. "ಇದೇನೋ ನಿನ್ನತ್ರಾನೂ ಅದೇ ಪರಿಮಳ?" ಎಂದು ರಮೇಶ ಸಂಶಯದಿಂದ ಕೇಳಿದ. "ಯಾರೋ ಬಟ್ಟೆಗೆ ಅತ್ತರ್ ಗಿತ್ತರ್ ತಾಗ್ಸಿರಬಹುದು" ಎನ್ನುತ್ತಾ ರಫಿ ಆ ಕಡೆಗೆ ಮುಖ ತಿರುಗಿಸಿದ. ರಮೇಶನಿಗೆ ಇನ್ನೂ ಅನುಮಾನ ಬಂತು. ಏನೋ ಸಂಭವಿಸಿದೆ ಎಂದು.

"ಏ ರಫಿ ಎಲ್ಲಿ, ಹೀಗ್ತಿರುಗು" ಎಂದು ಆತನ ಮುಖಕ್ಕೆ ಟಾರ್ಚ್ ಬಿಟ್ಟ. ರಫಿಯ ಮುಖ ಕೆಂಪಾಗಿ ಕಣ್ಣಂಚಿನಲ್ಲಿ ಕಂಬನಿ ಕುಳಿತಿತ್ತು.

"ಏನಯ್ಯಾ ರಫಿ? ಏನಾಯ್ತು ಹೇಳೊ? ಯಾಕೋ ಕಣ್ಣಲ್ಲಿ ನೀರು?"

ಎಂದ ರಮೇಶ.

"ಏನಿಲ್ಲಾ ರಮೇಶ" ಎಂದ ರಫಿ ಕಂಠ ಗದ್ಗದವಾದ್ದರಿಂದ ಒಂದು ನಿಮಿಷ ತಡೆದು ಅನಂತರ ಮುಂದುವರಿಸಿದ. "ನನ್ನ ಪ್ರಾಣಕ್ಕೆ ಪ್ರಾಣ ಕೊಡೋದಕ್ಕೆ ಬಂದ ಸ್ನೇಹಿತರಿಗೆ ಸುಳ್ಳೇಳ್ತಿದಿನಲ್ಲಾ ಅಂತ ದುಃಖ ಆಯ್ತು. ಚಿಕ್ಕಂದಿನಿಂದ ತಂದೆ ತಾಯಿ ಇಲ್ಲದೆ ಬೆಳೆದೋನು ನಾನು. ನಿಮ್ಮಂತ ನಾಕು ಜನ ಸ್ನೇಹಿತರನ್ನ ಬಿಟ್ರೆ ಯಾರೂ ಇಲ್ಲ. ಏನಾಯ್ತು ಅಂತ ನಿಮ್ಮಿಂದ ಮುಚ್ಚಿಡೋ ಮನಸ್ಸಿಲ್ಲ. ಇಂಗ್ಲಿಷ್‌ಗೌಡ ಏನನ್ನೋ ಕಂಡು ಓಡಿದ್ನಲ್ಲಾ ಅದು ನಿಜ" ಎಂದ.

ನಾಲ್ವಾರು ಮಿತ್ರರಿಗೂ ಸಿಡಿಲು ಹೊಡೆದಂತಾಯ್ತು. "ಏನಂದೆ?" ಎಂದು ಅವಾಕ್ಕಾಗಿ ನಡೆಯುವುದನ್ನು ನಿಲ್ಲಿಸಿ ನಿಂತುಬಿಟ್ಟರು.

"ನಂಗೂ ಹೆದರಿಕೆ ಆಯ್ತು. ಆದ್ರೆ ಓಡಲಿಲ್ಲ. ಸತ್ತರೆ ಸತ್ತೆ ಅಂದುಕೊಂಡು ಏನಾಗುತ್ತೋ ನೋಡೇ ಬಿಡಬೇಕು ಅಂತ ನಿಂತುಬಿಟ್ಟೆ. ಆ ಆಕಾರ ಸ್ವಲ್ಪ ಸರಿದಾಡ್ತು. ಓಹೋ ಕಳ್ಳ ಓಡೋಗ್ತಾನೆ ಅಂತ ನಾಲ್ಕು ಹೆಜ್ಜೆ ಮುಂದೆ ಹೋದೆ. ಅದೆ ನನ್ನ ಕಡೆಗೆ ಕೈಚಾಚಿಕೊಂಡು ಬಂದು ಬಿಡ್ತು. ನನಗೆ ಎದೆ ಝಲ್ ಅಂದೋಯ್ತು."

"ಅಯ್ಯೋ ದೇವ್ರೇ?" ಎಂದು ಅಂಗಾರ. ಅವರೆಲ್ಲರ ಮೈ ಕೂದಲು ನೆಟ್ಟಗಾಗಿದ್ದವು."ನಾನಲ್ಲೇ ಇದ್ದಿದ್ರೆ ಇಷ್ಟೊತ್ತಿಗೆ ಸತ್ತೋಗಿರ್ತಿದ್ದೆ" ಎಂದ ಇಂಗ್ಲಿಷ್‌ಗೌಡ.

"ಹತ್ರಾ ಬರತ್ಲೂ ನೋಡ್ತಿನಿ, ಜಯಂತಿ! ಬಂದಿದ್ದು ತಬ್ಬಿ ಕೊಂಡಳು."

"ಆ್ಞ."

"ತಬ್ಬಿಕೊಂಡ್ಳ"

"ಅರರೆ" ಇತ್ಯಾದಿ ಉದ್ಗಾರಗಳು ಮಿತ್ರ ಸಮೂಹದಿಂದ ಹೊಮ್ಮಿದವು. ಅವರಿಗೆ ಭಾವೋದ್ವೇಗದ ಏರಿಳಿತ ಭರಿಸಲಸಾಧ್ಯವಾಗಿತ್ತು.

"ಏನಂದ್ಲೋ? ಯಾಕೆ ಬಂದಿದ್ಲೋ?" ಎಂದು ಎಲ್ಲಾ ಕುತೂಹಲದಿಂದ ಕೇಳಿದರು.

"ಏನಿಲ್ಲ, ನಾನು ನಿನ್ನ ಪ್ರೀತಿಸ್ತೀನಿ. ನನ್ನ ಕೈಬಿಡಬೇಡ. ನೀನು ಬಿಟ್ಟರೆ ಗೊಸಾಯಿಗಳ ಜೊತೆಗೆ ಓಡೋಗಿ ಪ್ಯಾಟೆ ಸೂಳೆಮನೆ ಸೇರ್ಕೋತಿನಿ ಅಂತ ತಬ್ಬಿಕೊಂಡು ಕೇಳಿಕೊಂಡ್ಲು ಕಣಯ್ಯ. ಸುಮಾರು ಹೊತ್ತು ತಬ್ಬಿಕೊಂಡೇ ನಿಂತಿದ್ವಿ. ಅಷ್ಟರಲ್ಲಿ ನೀವು ಬಯ್ಯುತ್ತಾ ಮಾತಾಡಿಕೊಂಡು ಬರ್ತಿರೋ ಸದ್ದು ಕೇಳಿ ನಾನಿನ್ನು ಬರಲ ಅಂದಳು. ಬಿಟ್ಟೆ ಮನೆ ಕಡೆ ಹೋದಳು" ಎಂದ ರಫಿ.

ರಫಿ ಬಳಿ ಬರುತ್ತಿದ್ದ ಅವಳ ವಾಸನೆಯನ್ನು ಯಾರೂ



ಅಲ್ಲಗಳೆಯುವಂತೆಯೇ ಇರಲಿಲ್ಲ. ಇದೇನು ನಿಜವೋ ಭ್ರಾಂತಿಯೋ ಅವರಿಗೆ ತೋಚದೆ ತುಂಬಾ ಹೊತ್ತು ಅವನ ಮಾತುಗಳನ್ನು ಅರಗಿಸಿಕೊಳ್ಳುತ್ತಾ ಮೌನವಾಗಿ ನಿಂತರು.

ಸ್ವಲ್ಪ ಹೊತ್ತಾದ ನಂತರ ರಮೇಶ,

"ಅಲ್ವೋ ರಫಿ ಇಂಥಾ ಒಂದು ಸಂತೋಷದ ಸಮಾಚಾರಾನಾ ನಮ್ಮ ಹತ್ರ ಮುಚ್ಚಿಡೋಕೆ ನೋಡ್ತಿದ್ಯೇನೊ ರ್‍ಯಾಸ್ಕಲ್" ಎಂದ.

"ಇಲ್ಲಾ ಕನೋಮ್ಮ ನಂದು ತಪ್ಪಾಯ್ತು. ಇದೊಂದು ಸಾರಿ ಮಾಫ್ ಮಾಡಿ. ದಾರೀಲಿ ಬರ್ತ ನಾನು ಸಾಬ, ಅವಳು ಹಿಂದೂ, ನೀವೆಲ್ಲಾ ಏನಂತಿರೋ, ಏನು ತಿಳ್ಕೋತೀರೋ ಅಂತ ಗಾಬರಿ ಆಯ್ತು. ಆಮೇಲೆ ನನ್ನ ಪ್ರಾಣಕ್ಕೆ ಪ್ರಾಣ ಕೊಡೋದಕ್ಕೆ ಬಂದೋರಿಗೆ ಸುಳ್ಳೇಳಿದೆನಲ್ಲಾ ಅಂತ ದುಃಖ ಆಯ್ತು. ಇನ್ಮೇಲೆ ನಿಮ್ಮತ್ರ ಯಾವುದ್ನೂ ಮುಚ್ಚಿಡೋಲ್ಲ" ಎಂದ. ಗೆಳೆಯರಿಗೆಲ್ಲಾ ಚೈತನ್ಯ ಸಂಚಾರವಾದಂತಾಗಿ ಆನಂದಭರಿತರಾದರು.

ಹೊಟ್ಟೆಕಿಚ್ಚಿನಿಂದ ದ್ವೇಷಿಸಲಾರಂಭಿಸಿದರೆ ಏನು ಮಾಡುವುದೆಂಬ ಚಿಂತೆಯಲ್ಲಿದ್ದ ರಫಿಗೆ ಅವರು ಇದ್ದಕ್ಕಿದ್ದಂತೆ ಸಂತೋಷದಿಂದ ಕುಣಿದು ಕುಪ್ಪಳಿಸಿ ಒಬ್ಬರಿಗೊಬ್ಬರು ಹಸ್ತಲಾಘವ ಕೊಟ್ಟುಕೊಳ್ಳುತ್ತಿದ್ದನ್ನು, ಅದನ್ನು ಇಡೀ ಟೀಮಿನ ವಿಜಯವೆಂದು ತಗೊಂಡಿದ್ದನ್ನು ನೋಡಿ ಆನಂದ ಇಮ್ಮಡಿಸಿತು.

"ಹೆಂಗೇದ್ಲೋ ಅವಳು" ಎಂದ ಅಂಗಾರ.

"ಹೆಂಗೇನೋ, ನೋಡಿಲ್ವಾ ನೀನು" ಎಂದ ರಫಿ ನಾಚಿಕೆಯಿಂದ.

"ನಾವು ನೋಡೊದಕ್ಕೂ ನೀನು ನೋಡಿರೋದಕ್ಕೂ ವ್ಯತ್ಯಾಸ ಇಲ್ವೇನೋ, ಮತ್ತೆ ಮುಚ್ಚಿಡ್ತೀಯಾ?"

"ನೋಡೋ ಅಂಗಾರ, ಅದನ್ನೆಲ್ಲಾ ಹೆಂಗೇಳ್ಲಿ. ದೇವತೆ ಅಂತಾರಲ್ಲ ಹಂಗಿದ್ಲು ಅನ್ನಬಹುದು. ಅವಳಿಗೋಸ್ಕರ ಏನು ಬೇಕಾದರು ತ್ಯಾಗ ಮಾಡ್ತೀನಿ. ಕಷ್ಟ ಅನುಭವಿಸ್ತೀನಿ. ನಾನಿನ್ನೇನು ಹೇಳಲೋ. ಮುಚ್ಚಿಡ್ತಿಲ್ಲಾ. ಬೇರೆಯೋರಿಗೆ ಹೇಳಕ್ಕೆ ಆಗೋಲ್ವೋ ಅದನ್ನೆಲ್ಲಾ. ನಿಂಗೂ ಒಂದು ದಿನ ಹಿಂಗಾದಾಗ ನನ್ನ ಕಷ್ಟ ಅರ್ಥವಾಗುತ್ತೆ ಕಣೋ" ಎಂದ ರಫಿ.

"ನಮಗೆಲ್ಲಯ್ಯಾ ಹಿಂಗಾಗುತ್ತೆ! ಥುತ್, ನಮ್ಮ ಜಲ್ಮಕ್ಕೆ ಬೆಂಕ ಹಾ!" ಎಂದು ಅಂಗಾರ ದುಃಖದಿಂದ ತನ್ನನ್ನ ತಾನೇ ಶಪಿಸಿಕೊಂಡ.

"ಲೇ ಮೋಹಿನಿ ದೆವ್ವಾ ಅಲ್ಲ ತಾನೇ! ಕಾಲು ಸರಿಯಾಗಿತ್ತೋ ತಿರ್‍ಗಾ ಮುರ್‍ಗಾ ಇತ್ತೋ? ತಬ್ಬಿಕೊಂಡೋಳನ್ನ ಸರಿಯಾಗಿ ಮುಟ್ಟಿ ನೋಡಿದಿಯೇನೋ!"

ಎಂದ ಇಂಗ್ಲಿಷ್‌ಗೌಡ.

"ಓಹೋ ಮುಟ್ಟಿ ತಡವಿ...."

"ಎಲ್ಲೆಲ್ಲಿ!!"

"ಥು ಏನೋ ಇಂಗ್ಲಿಷ್‌ಗೌಡ! ಎಲ್ಲೆಲ್ಲಿ ಅಂತ ನಂಗೇನೋ ಗೊತ್ತು. ನನ್ನ ತಲೇನೆ ಕೆಟ್ಟೋಗಿತ್ತು. ಇಂತಾ ಕಡೆ ಅಂತಿಲ್ಲ. ಎಲ್ಲಾ ಕಡೆ" ಎಂದ ರಫಿ.

ಅಷ್ಟಕ್ಕೇ ಅವನ ಗೆಳೆಯರಿಗೆ ತಮಗೇ ಎಲ್ಲಾ ಕಡೆ ಯಾರೋ ಕೈ ಹಾಕಿ ತಡವಿದಂತಾಗಿ ಮೈಯ್ಯೆಲ್ಲಾ ಕಚಗುಳಿ ಎದ್ದು ಕುಣಿದು ಕುಪ್ಪಳಿಸಿ ಮತ್ತೆ ರಫಿಗೆ "ಹೊಡೆದೆಯಲ್ಲಾ ಒಂದು ಛಾನ್ಸು" ಎಂದೆನ್ನುತ್ತಾ ಕೈ ಕುಲಕತೊಡಗಿದರು.

ಅಷ್ಟರಲ್ಲಿ ಇದ್ದಕ್ಕಿದ್ದಂತೆ ಕೆಸರೂರಿನ ಕಡೆಯಿಂದ "ಢೂಂಮ್" ಎಂಬೋಂದು ಸದ್ದು ನೆಲವಲ್ಲಾ ನಡುಗುವಂತೆ ಕಿವಿ ಬಿರಿವಂತೆ ಬಂದು ಅಪ್ಪಳಿಸಿತು. ಪರ್ವತಶ್ರೇಣಿಗಳು ಮಾರ್ದನಿಸಿದುವು.





## ಅಧ್ಯಾಯ ೩೬



ಸುಲೇಮಾನ್ ಬೇರಿಯ ಗುಂಪು ಬ್ರೀಡರ್ ಮಹಮದ್‌ನನ್ನು ಮುಗಿಸಿಬಿಡಲು ನಿರ್ಧರಿಸಿತ್ತು. ಈ ನಿರ್ಣಯ ಮಂಡಿಸಿದವನೇ ಅಬ್ಬಾಸ್. ಅವನನ್ನು ಮುಗಿಸಿ ನಾಪತ್ತೆ ಮಾಡಿದರೆ ತಮಗೆ ಹೆಚ್ಚಿನ ತೊಂದರೆ ಏನಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಮಹಮದ್ ಮುಸಲ್ಮಾನನಾದ್ದರಿಂದ ಜಾತಿದ್ವೇಷ ಹೊತ್ತಿ ಉರಿಯುತ್ತಿದ್ದ ಆ ಊರಲ್ಲಿ ಎಲ್ಲರೂ ಹಿಂದೂಗಳನ್ನೇ ಮೊದಲು ಶಂಕಿಸುತ್ತಾರೆ. ಎರಡನೆಯದಾಗಿ ಮಹಮದ್‌ಗೆ ಈ ಊರಲ್ಲಿ ಯಾರೂ ಹತ್ತಿರದ ಬಂಧುಗಳೇ ಇಲ್ಲದ ಕಾರಣ ಅವನ ನಾಪತ್ತೆಯ ಬಗ್ಗೆ ದೊಡ್ಡ ಹುಯಿಲೇನೂ ಏಳದು. ಮೂರನೆಯದಾಗಿ ಈ ಊರು ಬಿಟ್ಟರೆ ಸಾಕಾಗಿದೆ ಎಂದು ಮಹಮದ್ದೇ ಊರೆಲ್ಲಾ ಹೇಳಿರುವುದರಿಂದ ಅವನ ನಿರ್ಗಮನವನ್ನು ಯಾರೂ ಅಷ್ಟಾಗಿ ಕೂಡಲೇ ಹಚ್ಚಿಕೊಳ್ಳುವುದಿಲ್ಲ. ಈ ರೀತಿಯಾಗಿ ಅಲೋಚಿಸಿ ಅಬ್ಬಾಸ್ ಅವನ ಖೂನಿಯ ವಿವರಗಳನ್ನು ಯೋಚಿಸತೊಡಗಿದ.

ಅವರೆಲ್ಲಾ ಬ್ರೀಡರ್ ಮಹಮದ್ ಮೇಲೆ ಹಲ್ಲು ಮಸೆಯಲು ಕಾರಣ ಅವನು ಮಾಡಿದ ನಮ್ಮಕ್ ಹರಾಂ ಕೆಲಸಕ್ಕೆ. ಗೋಸಾಯಿಬಾಬುವನ್ನು ಪಾಟೀಲರು ಲಂಟಾನದ ಜಿಗ್ಗಿನ ಕಾಡೊಳಗಿರುವ ಧೂಪದ ಮರದ ಬಳಿಗೆ ಕರೆದೊಯ್ಯತ್ತೀಯಾ ಎಂದು ಕೇಳಿರುವುದನ್ನು ಗೋಸಾಯಿಬಾಬು ಇಕ್ಬಾಲ್ ಸಾಬಿ ಹತ್ತಿರ ಮತಾಡುತ್ತ ಬಾಯಿಬಿಟ್ಟ. ಅದು ಸಾಯಂಕಾಲದ ಒಳಗೇ ಸುಲೇಮಾನ್ ಬೇರಿಗೆ ತಲುಪಿತ್ತು. ಅಬ್ಬಾಸ್ ಬೇರಿಯನ್ನು ಕರೆದು ಅವನಿಗೆ ದ್ರೋಹಿ, ಕಷ್ಟಕಾಲದಲ್ಲಿ ಮುಳುಗಿಸಲು ನೋಡ್ತೀಯಾ, ನಾನು ಹಾಳಾದರೆ ನೀನೂ ಹಾಳಾದಂತೆ ತಿಳಿದುಕೋ, ನಿನ್ನನ್ನು ಈಗ ಜೀವಸಮೇತ ಬಿಡೋದಿಲ್ಲ ಎಂದು ಹೂಂಕರಿಸಿದ. ಅವನ ಬೆದರಿಕೆಗಳು ಅನೇಕ ಬಾರಿ ಸತ್ಯವಾಗಿರುವುದನ್ನು ಕಂಡಿದ್ದ ಅಬ್ಬಾಸ್ ಬೇರಿ ಭಯದಿಂದ ನಡುಗಿದ. ಅದಕ್ಕಿಂತ ಮಿಗಿಲಾಗಿ ಸುಲೇಮಾನ್ ಬೇರಿ ಏನು ಮಾಡಿಸಿದ್ದರೂ ಅವನು ಹಾಳಾದರೆ ಇವನೂ ಮುಳುಗಿದಂತೆಯೆ ಎಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಏಕೆಂದರೆ ಆ ಲಂಟಾನದ ಕಾಡಿನೊಳಗೆ ಅಬ್ಬಾಸ್ ಬೇರಿಯ ಹಿತಾಸಕ್ತಿಯೂ ಅಡಗಿತ್ತು. ಆ ಕಾಡಿನ ಅಭೇದ್ಯ ಜಿಗ್ಗಿನೊಳಗೆ ಒಂದಷ್ಟು ಜಾಗ ತೆರವು ಮಾಡಿ ಅಬ್ಬಾಸ್ ಅಫೀಮು ಗಿಡಗಳನ್ನು ಬೆಳಿಸಿದ್ದ ಇನ್ನುನಾಲ್ಕಾರು ತಿಂಗಳಲ್ಲೇ ಕೈಸೇರಲಿರುವ ಲಕ್ಷಾಂತರ ರೂಪಾಯಿ ಅಫೀಮು ಬಯಲಾದರೆ ಏನು ಗತಿ!

ಅಂಗಾಡಿ ಎನ್ನುವ ಪತ್ತೇದಾರನೆ ಪಾಟೀಲರ ಮುಖಾಂತರ ಈ ಸಂಚು ನಡೆಸಿದ್ದಾನೆ. ಈ ಮಾದರಚತ್ ನಮ್ಮಕ್ ಹರಾಮ್ ಬ್ರೀಡರ್ ಮಹಮದ್ ನಮ್ಮ ದಿಕ್ಕು ತಪ್ಪಿಸಿದವ. ಜೊತೆಗೆ ಅವನಿಗೆ ಚೂರಿ ತೋರಿಸಿ ಹೆದರಿಸಿದವ ಸುಲೇಮಾನ್ ಬೇರಿ ಕಡೆಯವನೇ ಎಂದುಚೆನ್ನಾಗಿ ತೊತ್ತಿದೆ. ಅದನ್ನು ಅವನು ಈಗಾಗಲೇ ಹೆಳಿಬಿಟ್ಟಿದ್ದರೆ! ಅಬ್ಬಾಸ್ ಬ್ಯಾರಿಗೆ ಕುದಿಯುವ ರೋಷ ಉಮ್ಮಳಿಸಿತು. ಕೊಂಚ ತಾಳ್ಮೆ ತಗೊಂಡು ಅ ಹರಾಮ್ ಸೈತಾನ ಮಹಮದ್‌ನನ್ನು ಮುಗಿಸಲು ಅವಕಾಶ ಕೊಡು ಎಂದು ಸುಲೇಮಾನ್ ಬೇರಿಯನ್ನು ಕೇಳಿಕೊಂಡ. ಈಗ ಅಬ್ಬಾಸ್, ಮಹಮದ್‌ನನ್ನು ತೀರಿಸಿಯೇ ತನ್ನ ಸ್ವಾಮಿನಿಷ್ಠೆ ತೋರಿಸಬೇಕಿತ್ತು. ಅದಕ್ಕಾಗಿ ಅವನು ಖೂನಿ ಹಂಚಿಕೆಯೊಂದನ್ನು ಸಿದ್ದಪಡಿಸಿದ.

ಅಬ್ಬಾಸ್ ಕೆಸರೂರಿನಿಂದ ಮಂಗಳೂರಿಗೆ ಹೋಗುವ ರಸ್ತೆಯ ಟಾರ್ ಕಂಟ್ರಾಕ್ಟ್ ಹಿಡಿದಿದ್ದ. ಲಕ್ಷಾಂತರ ರೂ.ಗಳ ಈ ಕಂಟ್ರಾಕ್ಟನ್ನು ಚಿಕ್ಕಪುಟ್ಟ ರಸ್ತೆಗಳಿಗೆ ಟಾರು ಕಲೆಸಿದಂತೆ ಮನುಷ್ಯರ ಕೈಯಲ್ಲಿ ಮಾಡಿ ಮುಗಿಸಲು ಸಾಧ್ಯವಿರಲಿಲ್ಲ. ಅದಕ್ಕಾಗಿ ಕಾದ ಟಾರನ್ನು ಸಿಂಪರಿಸುವ ಯಂತ್ರವನ್ನೂ ರೋಡೆಂಜಿನನ್ನೂ



ಮಂಗಳೂರಿನಿಂದ ಬಾಡಿಗೆಗೆ ತಂದಿದ್ದ. ಮಾರನೆ ದಿನ ಬೆಳಗಿನಿಂದಲೇ ಟಾರು ಹಾಕುವ ಕೆಲಸ ಆರಂಭವಾಗಬೇಕಿತ್ತು. ಅದಕ್ಕಾಗಿ ಟಾರು ಕಾಯಿಸುವ ಯಂತ್ರಕ್ಕೆ ರಾತ್ರಿಯೇ ಬೆಂಕಿಹಾಕಬೇಕಿತ್ತು. ಸಾಕ್ಷಾತ್ ಬಡಬಾನಲನಂತೆ ಉರಿಯುವ ಅದರ ಒಲೆಯೊಳಗೆ, ಮಹಮದ್‌ನನ್ನು ಖೂನಿ ಮಾಡಿ ಅವನ ದೇಹವನ್ನು ಹಾಕಿ. ಅದರ ಉಕ್ಕಿನ ಬಾಗಿಲನ್ನುಮುಚ್ಚಿಬಿಡುವುದು ಎಂದು ಜನ್ಮತಃ ಕೊಲೆಪಾತಕಿಯಾದ ಅವನು ಅದರ ವಿವರಗಳನ್ನೂ ರೆಡಿಮಾಡಿದ. ಇದಕ್ಕಾಗಿ ತನ್ನ ಅಫೀಮು ತೋಟ ಕಾಯಲು ನಿಯಮಿಸಿದ್ದ ಯಾಕೋಬನ್ನನು ಕರೆಸಿದ. ಮೃಗಸಮಾನನದ ಯಾಕೂಬ್ ಹಗಲು ರಾತ್ರಿ ಅಫೀಮು ತೋಟ ಕಾಯುವುದೊಂದನ್ನು ಬಿಟ್ಟು ಬೇರೇನನ್ನೋ ತಿಳಿದಿರಲಿಲ್ಲ. ಅವನಿಗೆ ಬುದ್ಧಿ ಎನ್ನುವುದೇ ಇರಲಿಲ್ಲ. ಸುಲೇಮಾನ್ ಬೇರಿಯ ಹಣದ ಬಲ ಒಂದಿದ್ದರೆ ಏನನ್ನು ಬೇಕಾದರೂ ಸಾಧಿಸಬಹುದು ಎಂದು ತಿಳಿದಿದ್ದ. ಅವನೇ ಬ್ರೀಡರ್ ಮಹಮದ್‌ಗೆ ಬೀದಿಯಲ್ಲಿ ಚಾಕು ತೋರಿಸಿ ಹೆದರಿಸಿದನು. ಅವನಿಗೆ ಅಬ್ಬಾಸ್ ಬೇರಿ ತನ್ನ ಕೊಲೆ ನೀಲ ನಕ್ಷೆಯನ್ನೆಲ್ಲ ವಿವರಿಸಿದ. ಸಿದ್ದಪ್ಪ ಹೆಗ್ಡೆ ಇಬ್ಬರೂ ಕೆಸರೂರಿನಲ್ಲೇ ಮನೆ ಮಾಡಿದ್ದರಿಂದ ಮಹಮದ್ ದಿನಾ ಕೆಸರೂರಿನ ಹೋಟೆಲಿನಲ್ಲಿ ಊಟ ಮಾಡಿ ಒಬ್ಬನೇ ಕೆಸರುರಿನ ದಾರಿಯಲ್ಲಿ ಕತ್ತಲಾದ ಮೇಲೆ ಹಿಂದಿರುಗುತ್ತಿದ್ದ. ಆಗ ದಾರಿಯಲ್ಲಿ ಯಾರೂ ಇರದ ಕತ್ತಲ ಏಕಾಂತದಲ್ಲಿ ಅವನನ್ನು ಖತಂ ಮಾಡಿ ತಂದು ಟಾರು ಕಾಯಿಸುವ ಯಂತ್ರದ ಒಲೆಯೊಳಕ್ಕೆ ಹಾಕಿ ಬಾಗಿಲು ಮುಚ್ಚಿಬಿಡಿ ಎಂದು ಯಾಕೂಬ್‌ಗೆ ವಿವರಿಸಿದ. ಇದುವರೆಗೂ ಅಫೀಮು ಗಿಡಗಳನ್ನು ಕಾಯುವ ಯಾಂತ್ರಿಕ ಕೆಲಸದಿಂದ ಬೇಸರಗೊಂಡಿದ್ದ ಯಾಕೂಬ್‌ಗೆ ಈ ಹೊಸ ಜವಾಬ್ದಾರಿ ಹುರುಪು ತಂದಿತು.

ಯಾಕೂಬ್ ಹೋಗಿ ಟಾರು ಕೆಲಸಗಾರರಿಗೆ ನಾಳೆ ಬೆಳಗಿನಿಂದಲೇ ಟಾರು ರಸ್ತೆ ಕೆಲಸ ಆರಂಭಿಸಬೇಕೆಂದೂ ಅದಕ್ಕಾಗಿ ಈಗಲೇ ಟಾರು ಕಾಯಿಸಿಟ್ಟುಕೊಳ್ಳಬೇಕೆಂದೂ ಹೇಳಿದ. ಆತ ಯಾರೋ ಕಂಟ್ರಾಕ್ಟರ್ ಕಡೆಯವನಿರಬೇಕೆಂದು ಊಹಿಸಿದ ಅವರು ಅದರ ಒಲೆಗೆ ಟಾರು ಕರಗುವಷ್ಟು ಬೆಂಕಿ ಮಾಡಿ ಅಲ್ಲಿಂದ ಅರ್ಧ ಮೈಲು ದೂರದಲ್ಲಿ ಖಾಲಿ ಟಾರು ಡ್ರಂಗಳ ಮೇಲೆ ಛಾವಣಿ ಹಾಕಿ ಮಾಡಿಕೊಂಡಿದ್ದ ತಮ್ಮ ಬಿಡಾರಗಳಿಗೆ ಹೋದರು. ಮಹಮದ್ ಬರುವ ಹೊತ್ತಾಯ್ತೆಂದು ರಾತ್ರಿ ಯಾಕೂಬ್ ಮತ್ತು ಅವನ ಮೂವರು ಸಂಗಡಿಗರು ಬಂದು ಯಂತ್ರದ ಒಲೆ ನೋಡುತ್ತಾರೆ! ಬೆಂಕಿ ಸಾಕಷ್ಟು ಇಲ್ಲ! ಇದರಲ್ಲಿ ಹಾಕಿದರೆ ಮಹಮದ್‌ನ ಹೆಣ ಅರೆಬೆಂದು ನಾಳೆ ಪತ್ತೆಯಾಗುವುದರಲ್ಲಿ ಸಂದೇಹವೇ ಇಲ್ಲ. ಅವನಿಗೆ ಸಿಟ್ಟು ಬಂತು. ಇನ್ನೇನು

ಮಹಮದ್ ಯಾವಾಗ ಬೇಕಾದರೂ ಬರಬಹುದು. ಅವನ ಹೆಣ ಇಟ್ಟುಕೊಂಡು ಬೆಂಕಿ ಮಾಡುತ್ತಾ ಕೂರುವುದು ಅಸಾಧ್ಯವಾದ ಮಾತು. ಸಿಟ್ಟಿನ ಗಲಿಬಿಲಿಯಲ್ಲಿ ತನ್ನ ಸಂಗಡಿಗರಿಗೆ ಸರಿಯಾಗಿ ಬೆಂಕಿ ಮಾಡಲು ಯಾಕೂಬ್ ಹೇಳಿದ.

ಅಲ್ಲಯೇ ಆ ಕೆಲಸಕ್ಕಾಗೇ ಸೌದೆ ರಾಶಿ ಪೇರಿಸಿದ್ದರು. ಅದರಿಂದ ಅವನ ಸಂಗಡಿಗರು ಸೌದೆ ತಂದು ತುರುಕ ತೊಡಗಿದರು. ಮಹಮದ್ ಬಂದನೋ ಎಂದು ನಿಮಿಷಕ್ಕೊಮ್ಮೆ ಇಣುಕುತ್ತಾ ಯಾಕೂಬ್ ಬೆಂಕಿ ಭರ್‍ರೋ ಎಂದುಕೆನ್ನಾಲಿಗೆ ಚಾಚುವುದನ್ನು ನೋಡಿ ಹರ್ಷಿಸುತ್ತಿದ್ದ. ಮಹಮದ್ ಸಾಕಷ್ಟು ಹೊತ್ತಾದರೂ ಬರಲಿಲ್ಲ. ಮಿಕ್ಕ ಮೂವರು ಒಂದೊದಾಗಿ ಕೊಳ್ಳಿ ತುರುಕುತ್ತಾ ಬೆಂಕಿ ಧಗಧಗಿಸುವಂತೆ ನೋಡಿಕೊಳ್ಳಲಾರಂಭಿಸಿದರು. ಟಾರು ಮೊದಲೆ ಶಾಖಕ್ಕೆ ಕರಗಿತ್ತು. ಇವರು ಬೆಂಕಿ ಹಾಕಿದೊಡನೆ ಮೆಲ್ಲಗೆ ಇನ್ನೂ ಕಾವೇರತೊಡಗಿತು. ಕೆಲ ಹೊತ್ತಿನೊಳಗೇ ಆ ಯಂತ್ರದ ಗುಡಾಣ ಹೊಟ್ಟೆಯೊಳಗೆ ಟಾರುರವರವ ಕುದಿಯುವುದು ಕೇಳಿಸಿತು. ಆದರೆ ಮಹಮದ್ ದಫನ್ ಆಗುವವರೆಗೂ ಬೆಂಕಿ ಚೆನ್ನಾಗಿ ಉರಿಯಲೇಬೇಕಲ್ಲ!

ನಾಲ್ವರು ಮೃಗದ ತಲೆಗಳಿಗೂ ತಮ್ಮ ಹಂಚಿಕೆಯನ್ನು ಸಮರ್ಪಕವಾಗಿ ಮಾಡಿ ಮುಗಿಸುವ ನಿರ್ಧಾರವೇ ಹೊರತು ಆ ಯಂತ್ರದ ಒತ್ತಡ ಮಾಪಕದ ಮುಳ್ಳನ್ನು ನೊಡಲೇ ಇಲ್ಲ. ಆ ಯಂತ್ರದ ಡೊಳ್ಳಿನಿಂದ ಒಂದು ಪೈಪಿನ ಮುಖಾಂತರ ಹೊರಕ್ಕೆ ಅಳವಡಿಸಿದ್ದ ಆ ಮಾಪಕಕ್ಕೇ ಒಬ್ಬ ಒಲೆಯ ಸೆಕೆ ತಾಳಲಾರದೆ ಅಂಗಿ ಬಿಚ್ಚಿ ಅದ್ನ್ನು ಮುಸುಗು ಹಾಕಿದಂತೆ ನೇತುಹಾಕಿದ. ಅದನ್ನು ನೋಡಿದ್ದರೂ ಆ ಕಸುಬುದಾರರಲ್ಲದೆ ಇವರಿಗೆ ಏನೂ ಗೊತ್ತಾಗುವ ಸಂಭವ ಇರಲಿಲ್ಲ. ಅವರಿಗಿದ್ದುದು ಒಂದೇ ಗುರಿ. ಮಹಮದ್‌ನ ಹೆಣ ತೆಗೆದು ಒಳೆಯೊಳಗೆ ಹಾಕಿದ ಕೂಡಲೆ ಅವನು ಹಿಡಿ ಬೂದಿಯಾಗಿಬಿಡಬೇಕು. ಒತ್ತಡ ಹೆಚ್ಚಿದಂತೆ ಮುಳ್ಳು ಏರುತ್ತಾ ಹೋಯ್ತು. ಅದರ ಡೊಳ್ಳಿಯಲ್ಲಿ ಟಾರು ಭರೋ ಎಂದು ಕುದಿಯುವ ರಭಸವೂಹೆಚ್ಚಾಯ್ತು. ಮುಳ್ಳು ಹೋಗಿ ಕೊನೆ ಮುಟ್ಟ ನಿಂತೇಬಿಟ್ಟಿತು. ಇವರು ಇನ್ನೂ ಇಣುಕಿಣುಕಿ ನೊಡುತ್ತಾ, ಇನ್ನೂ ಬಾರದ ಮಹಮದ್‌ನ್ನನು ಶಪಿಸುತ್ತಾ ಉರಿಮಾಡುತ್ತಲೇ ಇದ್ದರು.

ಕುದಿಯುವ ಟಾರಿನ ಅದಮ್ಯ ಒತ್ತಡ ತನ್ನ ಮಿತಿ ಮೀರಿತು. ಅದನ್ನು ಭರಿಸಲಾರದ ಟಾರೆ ಯಂತ್ರದ ಉಕ್ಕಿನ ಡೊಳ\ಳ್ಳು ಹೊಟ್ಟ "ಢೂಮ್"ಎಂದು ಇಡೀ ಕಾಡು ಗಿರಿ ಕಂದರವೆಲ್ಲಾ ನಡುಗುವಂತೆ ಘರ್ಜಿಸಿ ಸಿಡಿಯಿತು. ಆ ನಾಲ್ವರಿಗೂ ಸದ್ದು ಕೇಳಿದಷ್ಟೇ ಗೊತ್ತು. ಅದರ ಹಿಂದೆಯೇ ಕುದಿಯುವ ಟಾರಿನ



ಬಿರುಮಳೆ ಬಂದೆರಗಿತು. ಟಾರಿನ ಆವಿಗೆ ಹಿಡಿದ ಜ್ವಾಲೆ ಇವರ ಮೈಗೂ ಹತ್ತಿಕೊಂಡಿತು. ಮೈಕೈ ಬೆಂಕಿಯಾದುದನ್ನು ಕಂಡು ನಾಲ್ವರೂ ಓಡೋಡಿ ಬೀದಿ ಬದಿಯ ಮರಳಿನಲ್ಲಿ ಹೊರಳಾಡಿದರು. ಬೆಂಕಿ ನಂದಿತು. ಆದರೆ ಬಿಸಿ ಟಾರಿಗೆ ಮರಳು ಮಣ್ಣು ಚೆನ್ನಾಗಿ ಮೆತ್ತಿಕೊಂಡು ಕರಿಯ ಗಿಲಾವು ಮೈಯೆಲ್ಲಾ ಹಿಡಿಯಿತು. ರೆಪ್ಪೆಯ ಮೇಲೆಲ್ಲಾ ಕುಳಿತಿದ್ದ ಟಾರಿನ ಭಾರಕ್ಕೆ ಕಣ್ಣು ತೆರೆಯಲೂ ಅವರಿಗೆ ಕಷ್ಟವಾಗಿತ್ತು. ಮೈಯೆಲ್ಲಾ ಭಯಂಕರ ಉರಿ. "ಅಯ್ಯೋ ಅಮ್ಮಾ" ಎಂದು ಕೂಗಿಕೊಂಡು ಕೆಸರೂರಿನ ಕಡೆಗೆ ಓಡತೊಡಗಿದರು. ಓಡೋಡುತ್ತಿದ್ದಂತೆಯೇ ಹೆಜ್ಜೆಯ ಸ್ಪಂದನ್ಕಕೆ ಮೆತ್ತಿಕೊಂಡ ಭಾರದ ಟಾರು ಜಗ್ಗಿ ಬೆಂದ ಚರ್ಮ ಟಾರಿನೊಡನೆ ಸುಲಿದು ಇಳಿಯಲಾರಂಭಿಸಿತು.

ಯಾರಿಗೂ, ಇವರು ಯಾರು? ಏಕೆ ಅಲ್ಲಿ ಹೋಗಿದ್ದರು? ಏಕೆ ಟಾರ್ ಡ್ರಂ ಸಿಡಿಯಿತು, ಒಂದು ಗೊತ್ತಾಗಲಿಲ್ಲ. ಸುಟ್ಟ ಇದ್ದಿಲಿನಂತಿದ್ದ ಈ ಆಕೃತಿಗಳನ್ನು ಯಾವ ಜಾತಿಯವರೆಂದು ತಿಳಿಯದೆ ಕೊನೆಗೆ ಹಿಂದುಗಳ ಸ್ಮಶಾನದಲ್ಲಿಯೇ ಹೂಳಿ ಬಂದರು. ಅಬ್ಬಾಸ್ ಬೇರಿ ತನ್ನನ್ನು ಮುಳುಗಿಸಲೆಂದು ಹಿಂದುಗಳೇ ಮಾಡಿದ ಹಂಚಿಕೆ ಇದೆಂದು ಹೇಳತೊಡಗಿದ. ಟಾರು ಕೆಲಸದವರು ತಮ್ಮ ಹೇಳಿಕೆಯಲ್ಲಿ ಯಾರೋ ಸಾಬರು ಬಂದು "ನಮಗೆ ಬೆಂಕಿ ಮಾಡೆಂದು ಹೇಳಿದರು" ಎಂದು ಹೇಳಿಕೆ ಕೊಟ್ಟುದ್ದನ್ನು ತಗೊಂಡು ಅದು ಸಾಬರದೇ ಕೆಲಸ ಎಂದು ಹಿಂದುಗಳು ಹೇಳತೊಡಗಿದರು. ಇಡೀ ಕೆಸರೂರಿನ ಹೊಟ್ಟೆಯೊಳಗಿನ ಟಾರು ಈ ಜಾತಿ ದ್ವೇಷದ ದಳ್ಳುರಿಯಲ್ಲಿ ಮೆಲ್ಲನೆ ಕರಗತೊಡಗಿತ್ತು.

# ಅಧ್ಯಾಯ ೩೭



ಮೆಜಿಶಿಯನ್ ಮುತ್ತು ಟೆಂಟಿನೊಳಗೆ ಚೆನ್ನಾಗಿ ನಿದ್ದೆಯಲ್ಲಿದ್ದ. ಅಂತದರಲ್ಲೂ ಅವನಿಗೆ ಟಾರ್ ಯಂತ್ರ ಸಿಡಿದ "ಢೂಮ್" ಶಬ್ದ ಕೇಳಿ ಪಕ್ಕನೆ ಎಚ್ಚರಾಯ್ತು. ಎದ್ದು ಕುಳಿತು ತನ್ನ ಉಂಡೆ ಅಗಿದು ಹಂದಿ ಉರುಳಿತು ಎಂದು ತಿಳಿದುಕೊಂಡ. ಆದರೂ ಅವನಿಗೆ ಒಂದು ಗುಮಾನಿಯ ರೇಖೆ ಸುಳಿಯದೆ ಇರಲಿಲ್ಲ. ಉಂಡೆ ಸಿಡಿದರೆ ಸದ್ದುಹೆಚ್ಚಾಗಿ ಕೋವಿಯ ಸದ್ದಿಗೂ ಪಟಾಕಿಯ ಸದ್ದಿಗೂ ಹತ್ತಿರಾಗಿ ಇರುತ್ತದೆ. ಆದರೆ ತಾನು ಕೇಳಿದ ಸದ್ದು ಬಂಡೆಯೊಳಗೆ ಡೈನಮೈಟ್ ಸಿಡಿದರೆ ಆಗುವಂಥ ಆಳವಾದ ಸದ್ದಿನಂತೆ ಕೇಳಿತಲ್ಲಾ! ಅಥವಾ ನಿದ್ರೆಯಲ್ಲಿ ಕೇಳಿದ್ದರಿಂದ ಹಾಗಾಯ್ತೆ? ಯೋಚಿಸುತ್ತಾ ಹೊದಿಕೆಯೊಳಗೆ ಹೊರಳಾಡಿದ. ಅವನು ನರಿಗಳಿಗಾಗಿ ಕೆಂಪು ಪಟಾಸು ಮದ್ದನ್ನೂ ಬೆಣಚು ಕಲ್ಲುಗಳನ್ನು ಸೇರಿಸಿ ಒದ್ದೆ ಮಾಡಿ ಗಟ್ಟಿ ಉಂಡೆಯೊಂದನ್ನು ಬಟ್ಟೆಯಲ್ಲಿ ಕಟ್ಟಿ ಒಣಗಿಸುತ್ತಿದ್ದ. ಒಣಗಿದ ಮೇಲೆ ಆ ಉಂಡೆಯನ್ನು ಒತ್ತಿದರೆ ಸಾಕು ಬೆಣಚು ಕಲ್ಲುಗಳು ಒಂದಕ್ಕೊಂದು ತಿಕ್ಕಿದ ಕೂಡಲೇ ಕಿಡಿಹಾರಿ ಉಂಡೆ ಸಿಡಿಯುತ್ತಿತ್ತು. ಇದಕ್ಕೆ ಕರುಳು ಅಥವಾ ಇನ್ಯಾವುದಾದರೂ ಕೊಳೆತು ವಾಸನೆ ಬರುವುದನ್ನು ಸುತ್ತಿ ಇಟ್ಟರೆ ನರಿಗಳುಇದನ್ನು



ಅಗಿದು ದವಡೆ ಸಿಡಿದು ಸಾಯುತ್ತಿದ್ದವು. ಅವು ಸಾಧಾರಣ ಗಾತ್ರ ಉಂಡೆಗಳು. ಈ ಸಾರಿ ಅವನು ಕಾಡು ಹಂದಿಗಳಿಗೆಂದೇ ದೊಡ್ಡ ಗಾತ್ರದವನ್ನು ಮಾಡಿ ಇಟ್ಟು ಬಂದಿದ್ದ. ಸದ್ದು ಕೇಳಿ ಎದ್ದು ಕುಳಿತವನಿಗೆ ಒಂದು ಹಂದಿ ಉರುಳಿತು ಎಂಬ ಸಂತೋಷ. ಜೊತೆಗೆ ಅನುಮಾನ, ಎರಡೂ ಆಯ್ತು.

ಮಸೀದಿಯ ಹತ್ತಿರ ಲಂಟಾನದ ಜಿಗ್ಗಿನ ಕಾಡಿನಲ್ಲಿ ಒಂದು ಸಣ್ಣ ಸುರಂಗದಂಥ ಹಾದಿ ಇದೆ. ಮುತ್ತುವು ಬಾಬುವೂ ಪಾಟೀಲರನ್ನು ಧೂಪದ ಮರದ ಬಳಿಗೆ ಕರೆದೊಯ್ಯಲು ದಾರಿ ಹುಡುಕುತ್ತಿದ್ದಾಗ ಈ ಸುರಂಗ ನೋಡಿದರು. ಇದೇ ಅಬ್ಬಾಸ್ ಬೇರಿ ಅಫೀಮು ತೋಟಕ್ಕೆ ಹೋಗಲು ಉಪಯೋಗಿಸುತ್ತಿದ್ದ ದಾರಿ. ಮುತ್ತು ಮತ್ತು ಬಾಬು ಅದರೊಳಗೆ ಕೊಂಚ ದೂರ ನುಸಿದು ಹೋಗಿ ಅದು ಧೂಪದ ಮರದ ದಿಕ್ಕಿನಲ್ಲೇ ಸಾಗುತ್ತದೆಂದು ಖಾತ್ರಿ ಮಾಡಿ ಕೊಂಡರು. ಸರಿ ನಾಳೆ ಇನ್ನೊಮ್ಮೆ ಇದನ್ನು ಸಾದ್ಯಂತವಾಗಿ ಪರೀಕ್ಷಿಸಿ ಪಾಟೀಲರನ್ನು ಇದರಲ್ಲಿ ಕರೆದುಕೊಂಡು ಹೋಗುವುದೆಂದು ನಿರ್ಧರಿಸಿದ ಬಾಬು ವಾಪಸ್ಸು ಆ ದಾರಿಯಲ್ಲೇ ಬರುತ್ತಾ ಅಲ್ಲೆಲ್ಲಾ ಕಾಡುಹಂದಿಗಳು ನೆಲವನ್ನು ಹೊಸದಾಗಿ ಉಳುಮೆಮಾಡಿ ಹುಳು ಹುಪ್ಪಟೆ ತೆಗೆದು ತಿಂದಿರುವುದನ್ನು ಮುತ್ತು ಕಂಡ. ಹಂದಿಗೆ ಉಂಡೆ ಇಟ್ಟು ಕೊಲ್ಲಲು ಇದು ಸರಿಯಾದ ಜಾಗವೆಂದು ನಿರ್ಧರಿಸಿದ. ಅದಕ್ಕೇ ಅವನು ಹಂದಿಗೆಂದೇ ವಿಶೇಷವಾಗಿ ತಯ್ಯಾರಿಸಿದ ದಪ್ಪ ಉಂಡೆಗಳನ್ನು ನರಿಯ ಕರುಳಿನಲ್ಲಿ ಸುತ್ತಿ ಸಂಜೆಯಾಗುತ್ತಿದ್ದಂತೆಯೇ ಯಾರಿಗೂ ಕಾಣದಂತೆ ಬಂದು ಇಟ್ಟಿದ್ದ. ಒಟ್ಟು ಮೂರು ಉಂಡೆಗಳನ್ನು ಇಟ್ಟು ಅವನ್ನಿಟ್ಟಿದ್ದ ಜಾಗ ಖಾತ್ರಿ ಮಾಡಿಕೊಂಡಿದ್ದ.

ಸದ್ದು ಕೇಳಿ ಎಚ್ಚರಾದ ಮುತ್ತು ರಾತ್ರಿ ಹಂದಿ ಎಲ್ಲಾದರೂ ಚೇತರಿಸಿಕೊಂಡು ಎದ್ದು ತಪ್ಪಿಸಿಕೊಂಡು ಪಲಾಯನ ಮಾಡುತ್ತದೆಯೇ ಎಂಬ ಚಿಂತೆಯಲ್ಲೇ ನಿದ್ದೆ ಬರದೆ ಹೊರಳಾಡುತ್ತಾ ಕಳೆದ. ಬೆಳಕಿನ ಕಿರಣಗಳು ಹೊಮ್ಮುತ್ತಿದ್ದಂತೆಯೇ ಮುತ್ತು ಯಾರಿಗೂ ಕಾಯದೆ ಓಡಿದ. ಬಾಬು ಬೆಳಿಗ್ಗೆ ಬಂದು ನೋಡಿದಾಗ ಮುತ್ತು ಟೆಂಟಿನಲ್ಲಿ ಇರಲಿಲ್ಲ. ಬಾಬು ಒಬ್ಬನೇ ಸಂಶೋಧನ ಕೇಂದ್ರಕ್ಕೆ ಹೋಗಿ ಪಾಟೀಲರಿಗೆ ಧೂಪದ ಮರದ ದಿಕ್ಕಿನಲ್ಲಿ ಹೋಗುವ ಒಂದು ದಾರಿ ನೋಡಿರುವುದಾಗಿಯೂ ಅದನ್ನು ನಾಳೆ ಸಮಗ್ರವಾಗಿ ನೋಡಿ ನಾಳಿದ್ದು ಕರೆದುಕೊಂಡು ಹೋಗುವುದಾಗಿಯೂ ತಿಳಿಸಿದ. ನಾಳಿದ್ದು ಬೆಳಗಿನ ಝಾವ ಅವರು ಬಂದು ಮಸೀದಿಯ ಹಿಂದೆ ತನಗಾಗಿ ಕಾಯಬೇಕೆಂದು ಕಾರ್ಯಕ್ರಮದ ವಿವರಗಳನ್ನು ತಿಳಿಸಿ ಹೊರಟ.

ಇತ್ತ ಮೆಜಿಶಿಯನ್ ಮುತ್ತು ನಸುಕಿನಲ್ಲೇ ಲಂಟಾನದ ಜಿಗ್ಗಿನಲ್ಲಿ ಇದ್ದ. ಸತ್ತ ಹಂದಿಯನ್ನು ಊಹಿಸಿಕೊಂಡು ಅತ್ತಿತ್ತ ಕಣ್ಣಾಡಿಸಿದ. ಏನೂ ಕಾಣಲಿಲ್ಲ. ಅಷ್ಟೇ ಅಲ್ಲ ಗಾಯಗೊಂಡ ಹಂದಿ ಬಿದ್ದು ಎದ್ದು ಹೋದ ಯಾವ ಕುರುಹೂ ಕಾಣಲಿಲ್ಲ. ಹಂದಿ ಉಂಡೆಯನ್ನು ಅಗಿದಿಲ್ಲವೆಂದ ತೀರ್ಮಾನಕ್ಕೆ ಬಂದು ಉಂಡೆಯ ಮೇಲಿನ ಕರುಳನ್ನೆಲ್ಲಾ ಯಾವುದೋ ಪ್ರಾಣಿ ಸುಲಿದು ತಿಂದು ಬರಿ ಉಂಡೆಯನ್ನು ಮಾತ್ರ ಬಿಟ್ಟು ಹೋಗಿತ್ತು. ಮೂರನೆಯ ಉಂಡೆ ಇಟ್ಟಲ್ಲಿಗೆ ಹೋದ ಮುತ್ತು! ಅವನಿಗೆ ಮೈಮೇಲೆ ಕುದಿವ ನಿರು ಬಿದ್ದಂತಾಯ್ತು! ಉಂಡೆ ನಾಪತ್ತೆ!

ಸುತ್ತೆಲ್ಲಾ ಎಲೆ ಕಸ ಕಡ್ಡಿಗಳ ರಾಶಿ. ಮುತ್ತು ನಿಂತವನು ನಿಂತೇ ಬಿಟ್ಟ. ಕಾಲನ್ನೆತ್ತಿ ಇಡುವುದಕ್ಕೂ ಅಂಜಿಕೆ. ಎಲ್ಲಿ ಉಂಡೆ ಕಾಲಡಿಯಲ್ಲಿ ಇದೆಯೋ ಎಂದು. ಹಾಗೇ ಕೈ ಚಾರಿ ಒಂದು ಗಿಡದ ಟೊಂಗೆ ಮುರಿದುಕೊಂಡು ಪೊರಕೆ ರೀತಿ ಮಾಡಿ, ಕಾಲು ಹಾದಿನ ಕಸಕಡ್ಡಿಗಳನ್ನೆಲ್ಲಾ ಗುಡಿಸುತ್ತ ಮೆಲ್ಲಗೆ ಅಲ್ಲಿಯೇ ಹಿಂದಕ್ಕೆ ಮುಂದಕ್ಕೆ ಹುಡುಕಾಡಿದ. ಏನೂ ತೋಚಲಿಲ್ಲ. ಎಷ್ಟು ಕಣ್ಣಾಡಿಸಿದರೂ ಏನೂ ಕಾಣಲಿಲ್ಲ. ಇಟ್ಟ ಜಾಗ ಮರೆತೆನೋ ಎಂದು ಯೋಚಿಸಿ ಯೋಚಿಸಿ ತಲೆನೋವು ಬಂತು. ಮಿಕ್ಕೆಲ್ಲಕ್ಕಿಂತ ಅವನಿಗೆ ಮೂರನೆ ಉಂಡೆ ಇಟ್ಟಿದ್ದ ಜಾಗ ಚೆನ್ನಾಗಿ ಜ್ಞಾಪಕ ಇತ್ತು.

ಅತ್ಯಂತ ಅಪಾಯಕಾರಿ ಆಸ್ಫೋಟಕವಾದ ಅದನ್ನು ಅಲ್ಲೇ ಬಿಟ್ಟು ಹೋದರೆ ಪ್ಲಾಸ್ಟಿಕ್ ಕಾಗದಲ್ಲಿ ಸುತ್ತಿದ್ದ ಅದು ಎಂದಾದರೊಂದು ದಿನ ಸಿಡಿದು ಯಾರನ್ನಾದರೂ ಕೊಲ್ಲವುದರಲ್ಲಿ ಅನುಮಾನವಿಲ್ಲ. ಎಷ್ಟು ಹುಡುಕಿದರೂ ಕಾಣದ ಅದನ್ನು ಮುತ್ತು ಇನ್ನೇನು ತಾನೆ ಮಾಡಿಯನು. ಮುತ್ತು ಗಾಬರಿಯಿಂದ ಇವರ ಟೆಂಟಿನ ಬಿಡಾರಗಳ ಕಡೆಗೆ ಹೊರಟ. ಹೋಗಿ ಅಲ್ಲಿ ಇದ್ದ ಇವನಂಥ ಹಿರಿಯರನ್ನೆಲ್ಲಾ ಕರೆದು 'ಹಿಂಗಾಗಿದೆ' ಎಂದುಹೇಳಿದ. ಉಂಡೆ ಕಡೆದುಹೋಗಿದೆ ಎನ್ನುವ ವಾರ್ತೆ ಕೇಳಿ ಇಡೀ ಗುಂಪಿಗೆ ಗುಂಪೇ ಧರೆಗಿಳಿದುಹೋದರು. ಆ ಯಜಮಾನರುಗಳೆಲ್ಲಾ ಅವನಿಗೆ ಚೆನ್ನಾಗಿ ಬೈದರು. ಮತ್ತೆ ಇವನೊಡನೆ ಹೋಗಿ ಹುಡುಕಲು ಅವರಿಗೆ ದಿಗಿಲು. ಏಕೆಂದರೆ ಉಂಡೆ ಎಲ್ಲಿದೆ ಎಂದು ಯಾರಿಗೆ ಗೊತ್ತು. ಯಾವುದಾದರೂ ಪ್ರಾಣಿ ಅದನ್ನು ಯಾವುದೋ ಅಗಮ್ಯ ಸ್ಥಳಕ್ಕೆ ಒಯ್ದಿದ್ದರೆ ಬಚಾವ್. ಇಲ್ಲವಾದರೆ ಮಾತ್ರ ಅದರಿಂದ ಎಂಥ ಅನಾಹುತ ಕಾದಿದೆ ಎಂದರೆ ನಮ್ಮನ್ನಷ್ಟೂ ಜನರನ್ನು ಜೇಲಿಗೆ ಕಳಿಸಲು ಅದು ಸಾಕು ಎಂದು ಹಿರಿಯರೆಲ್ಲಾ ಮುತ್ತುವಿಗೆ ಮತ್ತಷ್ಟು ಉಗಿದರು. ಎಲ್ಲರಿಗೂ ಅಳು ಬರುವಷ್ಟು ಕಳವಳವಾಗಿತ್ತು. ಆದರೆ ಏನು ಮಾಡುವುದು ಎಂದು ಅವರಿಗೆ ತೋಚಲಿಲ್ಲ.



ಅಷ್ಟರೊಳಗೆ ಗೊಸಾಯಿ ತಾನಾಜಿ ಓಡೋಡಿ ಬರುತ್ತಿರುವುದು ಕಂಡಿತು. ಉಂಡೆಯಿಂದಲೇ ಏನೋ ಅನಾಹುತವಾಗಿದೆ ಎಂದು ನೋಡಿದವರೆಲ್ಲಾ ಹೆದರಿ ಹೋದರು. ಆದರೆ ತಾನಾಜಿ ಇನ್ನೊಂದು ದುರ್ವಾರ್ತೆ ತಂದಿದ್ದ. ತಾವು ಶಿಕಾರಿ ಮಾಡಿ ತಂದಿದ್ದ ನರಿಗಳ ತಲೆಗಳನ್ನೆಲ್ಲಾ ಊರ ಪಕ್ಕದ ಹಾಳುಬಾವಿಗೆ ಹಾಕಿದ್ದರು. ಕೃಷ್ಣೇಗೌಡ ಹೆಂಡತಿ ಕರೆತರಲು ಜನ ಕಳಿಸಿದಾಗ ಹೆಂಡತಿ ತವರಲ್ಲಿ ಇರಲಿಲ್ಲವಂತೆ! ಕೃಷ್ಣೇಗೌಡ ಗಾಬರಿಯಾಗಿ ಊರಿನ ಸುತ್ತಲಿನ ಕೆರೆ ಕೊಳ ಬಾವಿಗಳನ್ನು ಹುಡುಕಿಸದನಂತೆ. ಆಗ ಊರ ಪಕ್ಕದ ಹಾಳು ಬಾವಿಯಲ್ಲಿದ್ದ ನರಿಯ ತಲೆಬುರುಡೆಯ ಎಲುಬಿನ ರಾಶಿ ಪತ್ತೆಯಾಯ್ತಂತೆ. ಹಿಂದುಗಳೆಲ್ಲಾ ಮಾಂಸ ಮಾರುವ ಸಾಬರು ನಮಗೆ ಇಲ್ಲಿಯವರೆಗೆ ನಾಯಿ ಮಾಂಸವನ್ನೇ ಕುರಿ ಮಾಂಸ ಎಂದು ಮಾರಿ ನೆಪಕ್ಕೆ ನಾಲ್ಕು ಕುರಿ ಕಡಿದಿದ್ದಾರೆ ಎಂದು ರೊಚಿಗೆದ್ದಿದ್ದಾರೆ ಎಂದು ವರ್ತಮಾನ ಕೊಟ್ಟ. ಎಲ್ಲಾ ಗುಂಪುಗೂಡಿ ಸಾಬರಿಗೆ ತಿಥಿ ಮಾಡಲು ಯೋಚಿಸುತ್ತಿದ್ದಾರೆಂದು ಹೇಳಿದ.

ಕೂಡಲೇ ಗೋಸಾಯಿಗಳ ಮುಖಂಡರಲ್ಲೊಬ್ಬ ಮುದುಕ "ಹೋಗಿ ಅವರಿಗೆ ನಾವೇ ಅದರೊಳಗೆ ನರಿ ತಲೆ ಎಸೆದಿದ್ದು ಎಂದು ಹೇಳಿ ಬಿಡೋಣ. ನಾವು ಮಾಡಿದ ಕೆಲಸಕ್ಕೆ ಅವರು ಯಾಕೆ ಕಡಿದಾಡಬೇಕು" ಎಂದು ಹೇಳಿದ. ಅವನ ಮಾತಿಗೆ ಸಮ್ಮತಿಸಿದ ನಾಲ್ಕಾರು ಜನ ಎದ್ದು ಗುಂಪಾಗಿ ಊರೊಳಕ್ಕೆ ಹೊರಟರು.

ದಾರಿಯಲ್ಲಿ ತಲೆಬಿಸಿ ಆಚಾರಿ ಸಿಕ್ಕ. ಅವನುಸೀತಾ ಅನ್ನುವ ಗೋಸಾಯ್ತಿಗೆ ಸಂದರ್ಶನ ನೀಡಲು ಹೊರಟಿದ್ದ. ಇವರನ್ನೆಲ್ಲಾ ಕಂಡು ಏನು? ಎತ್ತ! ಎಂದು ವಿಚಾರಿಸಿದ. ವಿಷಯ ಕೇಳಿದನಂತರ "ಸುಮ್ಮನೆ ಹಿಂದಿರುಗಿ, ಜನ ತೀರಾ ರೊಚ್ಚಿಗೆದ್ದಿದ್ದಾರೆ. ನಿಮ್ಮ ಮಾತನ್ನು ಯಾರೂ ಕೇಳುವ ಸ್ಥಿತಿಯಲ್ಲಿಲ್ಲ. ಇಲ್ಲಾ ನಿಮ್ಮನ್ನು ಹಿಂದೂಗಳೂ ಚಚ್ಚುತ್ತಾರೆ. ಅಥವಾ ಈ ವೇಳೆಗಾಗಲೇ ಹೊಡೆದಾಟ ಆಗಿದ್ದರೆ ನಿಮ್ಮಿಂದ ಗಲಾಟೆ ಆಯ್ತೆಂದು ಸಾಬರು ನಿಮ್ಮನ್ನು ಚಚ್ಚುತ್ತಾರೆ. ಈ ಇಬ್ಬರಿಂದಲೂ ಹೇಗೋ ಬಚಾವ್ ಆದರೂ ಕೊನೆಗೆ ಪೋಲೀಸರು ನಿಮಗೆ ಹೇಳಿಕೆ ಇತ್ಯಾದಿಗಳ ಚಿತ್ರಹಿಂಸೆ ಕೊಡುತ್ತಾರೆ. ಈಗ ಬಾಯಿ ಮುಚ್ಚಿಕೊಂಡು ಹೋಗಿ ತಣ್ಣಗೆ ಮಲಗಿ. ನಾಲ್ಕು ಜನ ಸಾಬರಿಗೆ ಮೂಳೆ ಮುರಿಯೋ ಹಂಗೆ ಬಿದ್ದರೆ ನಿಮಗೇನು ತೊಂದರೆ. ಕೊಬ್ಬು ಹೆಚ್ಚಾಗಿದೆ ಅವರಿಗೆ. ಇಳಿಸಲಿ" ಎಂದು ಹೇಳಿದ.

ಗೋಸಾಯಿಗಳು ಇನ್ನೂ ಭಯಗ್ರಸ್ತರಾದರು. ಒಂದು ಅತ್ಯಂತ

ಅಪಾಯಕಾರಿ ತಪ್ಪನ್ನು ಮುತ್ತು ಮಾಡಿಯಾಗಿದೆ. ಈಗ ಇನ್ನೊಂದು! ಅಷ್ಟರಲ್ಲಿ ಗೋಸಾಯಿಬಾಬು ಬಂದು ಏನೆಂದು ಕೇಳಿ ತಿಳಿದುಕೊಂಡ. ಆಚಾರಿಯ ನಿರ್ಗಮನಾನಂತರ ಅವರೆಲ್ಲಾ ಕುಳಿತುಕೊಂಡು ಸಮಾಲೋಚನೆ ನಡೆಸಿದರು. ಕೊನೆಗೆ ಇವತ್ತು ಸಾಯಂಕಾಲದ ಒಳಗೆ ಊರು ಖಾಲಿ ಮಾಡಿ ಪರಾರಿಯಾಗುವುದಿಲ್ಲದೆ ಬೇರೆ ಗತ್ಯಂತರವೇ ಇಲ್ಲವೆಂದು ತೀರ್ಮಾನಿಸಿದರು. ಗೋಸಾಯಿ ಹೆಂಗಸರು ತಮ್ಮ ಮೇಯಲು ಬಿಟ್ಟ ಕೋಳಿಗಳಿಗಾಗಿ ಹುಡುಕಾಡತೊಡಗಿದರು. ಗಂಡಸರು ತಮ್ಮ ಹೇರು ಹೊರುವ ಕತ್ತೆಗಳನ್ನು ಹುಡುಕಿ ತರಲು ಹೊರಟರು. ಮಿಕ್ಕವರು ಟೆಂಟು ಮಡಿಚುತ್ತಾ ಸಾಮಾನು ಸರಂಜಾಮು ಕಟ್ಟತೊಡಗಿದರು.

ಗೋಸಾಯಿಬಾಬು ಮಾತ್ರ ಇಕ್ಬಾಲ್ ಸಾಬಿ ಹತ್ತಿರಕ್ಕೆ ಓಡಿದ. ಅವನಿಂದ ಬಾಬುಗೆ ಬಾಕಿ ಹಣ ಬರಬೇಕಾಗಿತ್ತು. ಅದಕ್ಕಾಗಿ,

ಇಕ್ಬಾಲ್ "ಇವತ್ತಿಲ್ವಲ್ಲಯ್ಯ ನಾಳೆ ಬಾ" ಎಂದ.

"ಇವತ್ತು ಸ್ವಲ್ಪ ಅರ್ಜಂಟಿತ್ತು."

"ಯಾಕೇ ಸ್ವಲ್ಪ ಕೊಡ್ತೀನಿ. ನಾಳೆ ಮಿಕ್ಕಿದ್ದು ತಗೋ."

"ನಾಳೆ ನಾನು ಊರ್‍ನಾಗಿರಲ್ಲ?"

"ಊರ ಬಿಟ್ಹೋಗ್ತೀರೇನ್ರೋ? ಯಾಕೋ?"

ಕೊಂಚ ಗಾಬರಿಯಾದ ಬಾಬು"ಇಲ್ಲ ಇಲ್ಲ. ಹಂಗೇನೂ ಇಲ್ಲ. ನಾಳೆ ಕಾಡಿಗೆ ಪಾಟೀಲರನ್ನ ಇನ್ನೊಂದಿಬ್ರನ್ನ ಕರಕೊಂಡು ಹೋಗಬೇಕಿತ್ತು." ಎಂದ

"ಓ ಹಂಗಾ! ತಗೋಳ್ಳಪ್ಪ ನಿಂದು ದುಡ್ಡು ನಂಗ್ಯಾಕೆ. ಪಕ್ಕದಂಗಡಿಯಿಂದ ಇಸಗೊಡ್ತೀನಿ" ಎಂದ ಇಕ್ಬಾಲ್ ಸಾಬಿ ದುಡ್ಡು ತೆಗೆದುಕೊಟ್ಟ. ಬಾಬು ಹಣ ತಗೊಂಡವನೇ ನೇರ ಬಂದ ವೇಗದಲ್ಲೇ ಹಿಂದಿರುಗಿದ.



## ಅಧ್ಯಾಯ ೩೮



"ನಾಳಿದ್ದು ಸಂಶೋಧನ ಕೇಂದ್ರದ ಪಾಟೀಲರನ್ನ ಇನ್ನೊಂದಿಬ್ರನ್ನ ಕೆಸರೂರನ್ನ ಸುತ್ತುವರಿದಿದ್ದ ಲಂಟಾನದ ಕಾಡಿನೊಳಕ್ಕೆ ಗೋಸಾಯಿ ಬಾಬು ಕರೆದೊಯ್ಯಲಿದ್ದಾನೆ" ಎನ್ನುವ ಸುದ್ದಿ ಅವತ್ತು ರಾತ್ರಿಯೊಳಗೇ ಅಬ್ಬಾಸ್ ಬೇರಿಗೂ ಸುಲೇಮಾನ್ ಬೇರಿಗೂ ತಲುಪಿತು. ಸುಲೇಮಾನ್ ಬೇರಿಗೆ ಅಬ್ಬಾಸ್ ಬೇರಿಗೆ ಈಗ ಪಾಟೀಲರ ಗುಂಪಿನ ನಡವಳಿಕೆಗಳ ಬಗ್ಗೆ ಹೆಚ್ಚಿನ ಅನುಮಾನ ಉಳಿಯಲಿಲ್ಲ. ಅವರೂ ಒಂದು ಕತೆಯನ್ನು ಊಹಿಸಿಕೊಂಡಿದ್ದರು. ಅದಕ್ಕೆ ತಕ್ಕಂತೆ ವರ್ತಮಾನ ದಾಖಲೆಗಳನ್ನೂ ಸಾಕ್ಷ್ಯಗಳನ್ನೂ ಒದಗಿಸತೊಡಗಿತ್ತು. ಅವರು ತಿಳಿದ ಹಾಗೆ ಅವರು ಊಹಿಸಿದ್ದಕ್ಕಿಂತ ಬಿಗಿಯಾದ ಉರುಳೊಂದು ಅವರ ಕುತ್ತಿಗೆಯ ಸುತ್ತಾ ಸುತ್ತಿ ಬರುತ್ತಿತ್ತು. ಕಳವಳದಿಂದ ಅಬ್ಬಾಸ್ ಬೇರಿ ಸುಲೇಮಾನ್ ಬೇರಿಯನ್ನು ನೋಡಿದ. ಇಬ್ಬರ ಮನಸ್ಸಿನಲ್ಲೂ ಒಂದೇ ಇತ್ತು. ಇದನ್ನು ಅವರು ಮೊದಲೇ ಚೆನ್ನಾಗಿ ಯೋಚಿಸಿ ಮಾತಾಡಿ ಮುಗಿಸಿದ್ದರು. ಆ ಕಾಡಿಗೆ ಅವರು ಮೂರ್‍ನಾಲ್ಕು

ಕಡೆಗಳಿಂದ ಬೆಂಕಿ ಇಕ್ಕಿದರೆ ಅದರೊಳಗೆ ಇರಬಹುದಾದ ಸಾಕ್ಷ್ಯಾಧಾರಗಳೆಲ್ಲ ಸುಟ್ಟು ಬೂದಿಯಾಗ್ತವೆ. ಆಮೇಲೆ ಅವರು ಯಾವುದರ ಆಧಾರದ ಮೇಲೆ ತನಿಖೆ ಮುಂದುವರೆಸುತ್ತಾರೆ ಎನ್ನುವುದೇ ಅದು.

ಸುಲೇಮಾನ್ ಬ್ಯಾರಿ ಅಬ್ಬಾಸನ ಕಾತರವನ್ನು ನೋಡಿ ಶಾಂತನಾಗಿ ನೆಮ್ಮದಿಯ ಧ್ವನಿಯಲ್ಲಿ ಹೇಳಿದ "ಅರ್ಜಂಟು ಮಾಡಬಾರದು ಅಬ್ಬಾಸ್. ನಾಳೆ ಚೆನ್ನಾಗಿ ಬಿಸಿಲು ನೆತ್ತಿಗೇರಲಿ. ಆಮೇಲೆ ಬೆಂಕಿ ಕೊಡು. ಇಲ್ಲದಿದ್ದರೆ ಪ್ರತಿವರ್ಷ ಆಗೋ ಹಾಗೇ ಎಲ್ಲೋ ಒಂದು ಕಡೆ ಸ್ವಲ್ಪ ಸುಟ್ಟು ಬೆಂಕಿ ನಿಂತು ಹೋಗುತ್ತೆ. ಅಷ್ಟರೊಳಗೆ ಇವರು ಸರಿಯಾಗಿ ಕಾಡೊಳಗೆ ಇರ್ತಾರೆ. ಸಾಕ್ಷ ಮಾತ್ರ ಅಲ್ಲ ಸಾಕ್ಷ ಪತ್ತೇ ಮಾಡೋದಕ್ಕೆ ಹೋದೋರೂ ಖತಂ ಆಗೋಗಬೇಕು. ಒಂದು ಕಡೆ ಬೆಂಕಿ ಕೊಟ್ಟರೆ ಅದಕ್ಕೆ ಸಾಲದು. ನಾಲ್ಕಾರು ಕಡೆ ಕೊಡಬೇಕು" ಎಂದ.

ಅವರಿಗೆ ಇದು ಪ್ರತಿವರ್ಷವೂ ಬೆಳೆಯುತ್ತಾ ಜಿಗ್ಗು ದಟ್ಟವಾಗುತ್ತಾ ಬರುತ್ತಿರುವ ಲಂಟಾನ ಎನ್ನುವ ಕಲ್ಪನೆ ಬರಲಿಲ್ಲ. ಪ್ರತಿವರ್ಷದಂತೆಯೆ ಈ ವರ್ಷವೂ ಎಂದು ತಿಳಿದರು. ಅಬ್ಬಾಸ್‌ಬೇರಿ ಈ ಅಮೋಘ ಸಂಚಿಗೆ ತನ್ನ ಮೆಚ್ಚುಗೆ ಸೂಚಿಸಿ ತನ್ನ ಸಾಮಿಲ್ಲಿನಲ್ಲಿ ಕಳ್ಳ ಸಾಗಾಣಿಕೆಗೆ ಚತುರರಾದ ಇಬ್ಬರು ಕೇರಳದ ಬ್ಯಾರಿಗಳನ್ನು ಇದಕ್ಕೆ ನಿಯಮಿಸಿ ಅವರಿಗೆ ಬೆಂಕಿ ಕೊಡಲು ಹೋಗಬೇಕಾದ ದಾರಿ ಇತ್ಯಾದಿಗಳನ್ನೆಲ್ಲಾ ಸಮಗ್ರವಾಗಿ ವಿವರಿಸಿದ.

ಇತ್ತ ಕೆಸರೂರಿನ ಕ್ರಾಂತಿಕಾರಿಗಳೈವರಿಗೆ ಒಂದು ಬೃಹತ್ ಸಮಸ್ಯೆ ಎದುರಾಗಿತ್ತು. ಜಯಂತಿ ರಫಿಯನ್ನು ಲೌವ್ ಮಾಡಿದಳು. ಹುಡುಗಿಯ ಪ್ರೀತಿಯ ಚಿದಂಬರ ರಹಸ್ಯವನ್ನೇನೋ ಅವರ ಪಾಲಿಗೆ ಭೇದಿಸಿ ಆಗಿತ್ತು. ಅದರೆ ಮುಂದೇನು? ಸಿನಿಮಾದಲ್ಲಾದರೋ ಖಳನಾಯಕರು ಕೇಡಿಗಳು ಎಲ್ಲಾ ಇರುತ್ತಾರೆ. ಅವರು ನಾಯಕರನ್ನು ಬೆನ್ನಟ್ಟಿ ನಾಯಕಿಯನ್ನು ಅಪಹರಿಸಿ ಬಗೆ ಬಗೆಯ ಕಷ್ಟಗಳನ್ನು ಕೊಟ್ಟು ನಾಯಕನಿಗೂ ಕೊಂಚ ಕೆಲಸ ಕೊಡುತ್ತಾರೆ. ನಾಯಕ ಹೋರಾಡಿ ನಾಯಕಿಯನ್ನು ಬಿಡಿಸಿ ಖಳರನ್ನೆಲ್ಲಾ ಸೋಲಿಸಿ ಅನಂತರ ಕಾಡಿನ ಮಧ್ಯೆ ಪ್ರೇಮವೇ ಎಂದೆಂದೂ ಗೆಲ್ಲುವುದೆಂದು ಅನೇಕ ತರುಣಿಯರ ವೃಂದದೊಳಗೆ ಡ್ಯಾನ್ಸ್ ಮಾಡುತ್ತಾ ಹಾಡುತ್ತಾನೆ. ಆದರೆ ಈ ಕ್ರಾಂತಿಕಾರಿಗಳಿಗೆ ಪ್ರೇಮ ಪ್ರಕರಣ ಒಂದು ದಿಗ್ದರ್ಶನವಿಲ್ಲದ ಸಿನೆಮಾ ಆದಂತಾಯ್ತು. ಮುಂದೇನೆಂದು ತೋಚದೆ ಕೃಷ್ಣಪ್ಪನ ಹೆಂಡತಿಯ ಶವ ಹುಡುಕುವವರ ಜೊತೆ ಅಲ್ಲಲ್ಲಿ ಅಡ್ಡಾಡಿದರು. ಅಷ್ಟರಲ್ಲಿ ಆಕೆ ಕೆಸರೂರಿನಲ್ಲೆ ಇದ್ದ ತಂಗಿ ಮನೆಯಲ್ಲಿದ್ದಾಳೆಂದು ವರ್ತಮಾನ ಬಂತು. ಕೆಲಸವೇ ಇಲ್ಲದೆ ಟಾರ್ ಯಂತ್ರ ಒಡೆದಲ್ಲಿಗೆ ಒಮ್ಮೆ ಭೇಟಿ ನೀಡಿ



ಅನಂತರ ಜಯಂತಿ ಬಂದಿರಬಹುದೆಂದು ಕಾಲೇಜಿಗೆ ಹೋದರು.

ಕ್ಲಾಸಿಗೆ ಜಯಂತಿಯೇನೋ ಬಂದಿದ್ದಳು. ಆಕೆಯ ನಡೆ ನುಡಿ ಓಡಾಟಗಳತ್ತ ಕ್ರಾಂತಿಕಾರಿಗಳು ಓರೆನೋಟ ಬೀರುತ್ತಲೇ ಇದ್ದರು. ಆದರೆ ಜಯಂತಿ ಮಾತ್ರ ಇವರಾರನ್ನು ಕೊಂಚವೂ ಗಮನಿಸದೆ ನಿನ್ನೆ ಏನೂ ಸಂಭವಿಸಿಯೇ ಇಲ್ಲವೆನ್ನುವಂತೆ ಎಂದಿನಂತೆ ಕ್ಲಾಸಿಗೆಹೋದಳು. ಕ್ಲಾಸಿನಲ್ಲೂ ಕೂಡ ಅದೇ ರೀತಿ ವರ್ತಿಸಿದಳು. ಇದರಿಂದ ರಫಿ ತೀರಾ ಪೆಚ್ಚಾದ. ಮಿತ್ರರೆದುರು ಮರ್ಯಾದೆ ಹೋಯ್ತೆಂದು ಅವನಿಗೆ ಅನ್ನಿಸಿತು. ಕ್ಲಾಸಿಗೆ ಬರಲೇಬಾರದಿತ್ತು ಎಂದೆನ್ನಿಸಿತು. ಅವನ ಮಿತ್ರರೆಲ್ಲಾ ಎಷ್ಟೇ ಸಮಾಧಾನ ಹೇಳಿದರೂ ಅವನ ನಿರುತ್ಸಾಹ ಇಳಿಯಲೇ ಇಲ್ಲ.

ಮುಂದಿನ ಪೀರಿಯಡ್ಡಿನಲ್ಲೂ ರಫಿ ಅವನ ಮಿತ್ರರಿಗೆ ಎಲ್ಲೂ ಕಾಣಲಿಲ್ಲ. ಚಂದ್ರ ಇದನ್ನು ಗಮನಿಸಿ "ಲೋ ರಮೇಶ ಈ ಸಾಬ ಎಲ್ಲಿ ಕಾಣ್ತಿಲ್ಲವಲ್ಲೋ. ಮತ್ತೆ ನಮ್ಮನ್ನು ಹಾಳು ಭಾವಿ ಹುಡುಕೋ ಹಂಗೆ ಮಾಡ್ತಾನೆ!" ಎಂದು ಗೆಳೆಯರಿಗೆ ತಿಳಿಸಿ ದಿಗಿಲು ಹುಟ್ಟಿಸಿದ. ಎಲ್ಲರೂ ಇನ್ನು ನೋಡಿ ತಾವು ಕಾಲೇಜಿಗೆ ಚಕ್ಕರ್ ಹೊಡೆದು ರಫಿ ರೂಮಿನ ಕಡೆ ಓಡಿದರು.

ರಫಿ ಅಳುತ್ತಾ ಕುಳಿತಿದ್ದ. ರಮೇಶನಿಗೆ ಸಿಟ್ಟು ಬಂದು "ಏನು ಬಂತೋ ರೋಗ ನಿನಗೆ ಸಾಬಿ?" ಎಂದ.

"ಜಯಂತಿ ನನ್ನಕಡೆ ಒಂದೇ ಒಂದು ಸಾರಿನೂ ನೋಡ್ಲಿಲ್ಲ. ನಿನ್ನೆ ತನ್ನ ತಬ್ಬಿಕೊಂಡು ಹಂಗೆಲ್ಲಾ ಹೇಳಿದೋಳು ಹಿಂಗೆ ಮಾಡಬಹುದ? ನನಗೆ ನಿಮಗೆ ಮುಖ ತೋರಿಸೋಕ್ಕೆ ಆಗೋಲ್ಲ. ನನ್ಪಾಡಿಗೆ ನನ್ನ ಬಿಟ್ಬಿಡಿ" ಎಂದು ಬಿಕ್ಕುತ್ತಾ ಹೇಳಿದ. ಮಿತ್ರೆಲ್ಲರಿಗೂ ಗಾಬರಿಯಾಯ್ತು. ಎಲ್ಲರೂ ಈಚೆಗೆ ಬಂದು ಮುಖ ಮುಖ ನೋಡಿಕೊಂಡರು. "ಇದೊಳ್ಳೆ ತಾಪತ್ರಯ! ಹಂಗಾರೆ ನಿನ್ನೆ ತಬ್ಬಿಕೊಂಡೋರು ಯಾರು? ಅದರ ಕಾಲು ಹಿಂದ್ಮುಂದಾಗಿದೆಯಾಂತ ನೋಡಬಾರ್ದು! ಎಲ್ಲ ಹೇಳೋಹಂಗೆ ಮೋಹಿನಿ ದೆವ್ವಾನ!" ಎಂದು ರಮೇಶ ಸ್ವಗತದ ಥರ ಮಾತಾಡಿದ. ಅವನು ಮಿಕ್ಕವರ ಜೊತೆ ಪರ್ಯಾಲೋಚಿಸಿ ಏನಾದರಾಗಲಿ, ಇನ್ನು ಮೇಷ್ಟ್ರಿಗೋ ಜಯರಾಂಗೋ ಹೇಳಿಬಿಡಬೇಕೆಂದು ತೀರ್ಮಾನಿಸಿ ಒಬ್ಬನೇ ಟಿ.ಬಿ. ಕಡೆಗೆ ಹೊರಟ. ಟಿ.ಬಿಯಲ್ಲಿ ಅಂಗಾಡಿ ಒಬ್ಬನೇ ಕುಳಿತಿದ್ದ. ರಾಮಚಂದ್ರ ಜಯರಾಂ ಇಬ್ಬರೂ ಇಲ್ಲೆಂದು ತಿಳಿಸಿದ. ಜಯರಾಂ ಕೃಷ್ಣೇಗೌಡನ ಮನೆಗೆ ಸಂದರ್ಶನಕ್ಕೆ ಹೋಗಿದ್ದಾರೆಂದು ರಾಮಚಂದ್ರನೂ ಅವರೊಡನೆ ಹೋಗಿರಬಹುದೆಂದು ಹೇಳಿದ.

ಅಂಗಾಡಿ ಚಿಂತಾಕ್ರಾಂತನಾಗಿದ್ದ. ರಾತ್ರಿ ಅವರು ನೋಡಿದ ಘೋರ

ಚಿತ್ರ; ಆ ನಾಲ್ವರು ಜೀವಂತವಾಗಿದ್ದಂತೆಯೇ ಸುಲಿದುಕೊಳ್ಳುತ್ತಾ ಬಂದುದು ಇನ್ನೂ ಅವನ ಕಣ್ಮುಂದೆಯೇ ಸುಳಿಯುತ್ತಿತ್ತು. ಅವನು ರಮೇಶನನ್ನು ಇಲ್ಲಿನ ಹರಿಜನರನ್ನೆಲ್ಲಾ ಮುಸಲ್ಮಾನರಗಿ ಮತಾಂತರ ಮಾಡ್ತಾರಂತೆ. ನಿನಗೇನಾದರೂ ಗೊತ್ತೆ? ಎಂದು ಕೇಳಿದ.

"ಸೇರಿಸ್ಕೋಬೇಕಂತಿದಾರೇಂತ ಯಾರೋ ಹೇಳಿದ್ರು. ಸೇರಿಸ್ಕೊಳ್ಳಿ ಬಿಡೀ ಸಾರ್! ಯಾವನು ಯಾವ ಜಾತಿಗೆ ಸೇರಿದರೆ ನಮಗೇನು. ನಾವಂತೂ ಜಾತಿ ಧರ್ಮ ಎಲ್ಲಾ ಬಿಟ್ಟಾಗಿದೆ" ಎಂದ ರಮೇಶ.

"ಹಾಗಲ್ಲ ಅವರು ಹಿಂದೂ ಧರ್ಮ ಬಿಡ್ತಾರಂತ ನನಗೆ ಬೇಸರ ಅಲ್ಲ. ಈಗಾಗಲೆ ನಾಯಿ ಮಾಂಸ ತಿನಿಸಿದ್ದಾರೆ ಅಂತ ಮಾಂಸದಂಗಡಿ ಹತ್ರ ಗಲಾಟೆ ಆಗಿ ಪೋಲೀಸ್ನೋರು ಮಾಂಸ ಮಾರ್‍ತಿದ್ದವರನ್ನೆಲ್ಲಾ ಹಿಡಿದುಕೊಂಡು ಬಂದು ಲಾಕಪ್ ಒಳಗೆ ಹಾಕಿದ್ದಾರೆ. ಸಾಬರ ಕೇರಿಯಲ್ಲಾಗಲೆ ದೊಂಬಿಗೆ ಏರ್ಪಾಟಾಗಿದೆಯಂತೆ. ಇದರ ಜೊತೆಗೆ ಹರಿಜನರನ್ನ ಮತಾಂತರ ಮಾಡ್ತಾರಂತೆ ಅನ್ನೋದೂ ಸೇರಿಕೊಂಡರೆ ಏನಾಗಬಹುದು" ಎಂದ ಅಂಗಾಡಿ.

"ಈ ಊರು ಕಂಪ್ಲೀಟು ಎಕ್ಕುಟ್ಟಿಹೋಗಿದೆ ಸಾರ್, ಒಂದು ದಂಗೆ ಆಗಿ ಕ್ರಾಂತಿ ಆಗ್ಬೇಕು ಇದು ಸರಿಹೋಗ್ಬೇಕಾದ್ರೆ ಅಷ್ಟೇ."

"ದೊಂಬಿ ದಂಗೆ ಕ್ರಾಂತಿ ಇದರಲ್ಲೆಲ್ಲಾ ಪ್ರಾಣ ಕಳಕಳ್ಳೋರು ಕಡ್ಡಾಯವಾಗಿ ನಿರಪರಾಧಿಗಳು ಮುಗ್ಧರು. ಅದರಲ್ಲೂ ಹೆಂಗಸರು, ಮಕ್ಕಳು, ಬರೇ ಗೂಂಡಗಳೇ ಹೊಡೆದಾಡಿಕೊಂಡು ಸತ್ರೆ ಪೀಡೆ ಕಳೆಯಿತೆಂದು ಸಂತೋಷಪಡಬಹುದಿತ್ತು" ಅಂದ ಅಂಗಾಡಿ. ಆದರೆ ರಮೇಶನಿಗೆ ಇದನ್ನೆಲ್ಲಾ ತಲೆಗೆ ಹಚ್ಚಿಕೊಳ್ಳುವಷ್ಟು ವ್ಯವಧಾನ ಇರಲಿಲ್ಲ.

"ಜಯರಾಮ್ ಯಾಕೆ ಗೌಡರ ಮನೆಗೆ ಹೋದ್ರು ಸಾರ್?" ಎಂದ.

"ಅದೇನೋ ದೆವ್ವದ ಕಾಟಕ್ಕೆ ಸಂಬಂಧಪಟ್ಟಂತೆ ಅವರನ್ನೆಲ್ಲಾ ಇಂಟರ್‌ವ್ಯೂ ಮಾಡಬೇಕಾಗಿದೆ ಅಂತ ಹೋದರಪ್ಪ" ಎಂದ ಅಂಗಾಡಿ.

"ಹಾಗಾದ್ರೆ ನಾನು ಕೊನೆಗೆ ಅವರನ್ನ ನೋಡ್ತೀನಿ ಸಾರ್" ಎಂದವನೆ ಶರಾಬು ಅಂಗಡಿ ಕಡೆ ಹೊರಟ, ಅವತ್ತು ರಜ ಹಾಕಿ ಬರೋದಕ್ಕೆ.





# ಅಧ್ಯಾಯ ೩೯

ರಾಮಚಂದ್ರ ಜಯರಾಂ ಜೊತೆ ಹೋಗಿರಲಿಲ್ಲ. ಜಯರಾಂ ಕೃಷ್ಣೇಗೌಡರ ಮನೆಯಿಂದ ಬರುತ್ತ ಟಿ.ಬಿ. ಹತ್ತಿರ ದಾರಿಯಲ್ಲಿ ಎದುರಾದ. ರಾಮಚಂದ್ರನ ಜೊತೆ ಜಯರಾಂ ಕಟುವಾಗಿ ಜಗಳ ಆಡಿದ.

"ನೋಡೋ ನೀನು ತರಬೇತಿ ಇಲ್ಲದ ಹುಡುಗ್ರನ್ನ ಅಲ್ಲಿಗೆ ಕಳಿಸಬೇಡಾಂತ ಹೇಳಿದೆ. ನೀನು ಅದನ್ನು ಸೀರಿಯಸ್ಸಾಗಿ ತಗೋಳ್ಳಲಿಲ್ಲ. ಈಗ ಈ ಹುಡುಗ್ರು ಆ ಸಮಸ್ಯೆಯ ಒಂದು ಭಾಗ. ನಿನ್ನಂಥ ಗುರೂಗೆ ತಕ್ಕಂಥಾ ಶಿಷ್ಯರು ಕಣಯ್ಯ, ಥುತ್" ಎಂದ ಜಯರಾಮ ಬಯ್ದು.

"ಯಾಕೋ ಮಹರಾಯನೆ? ಏನಾಯ್ತೊ ಇಂಟರ್‌ವ್ಯೂನಲ್ಲಿ? ಏನ್ ಪೋಕ್ರಿ ಕೆಲಸ ಮಾಡಿದಾರಯ್ಯ? ಕೃಷ್ಣೇಗೌಡ ಏನಾದರೂ ದೂರು ಹೇಳಿದ್ನೇನಯ್ಯಾ? ಅದೇನು ನಡೀತು ಅದನ್ನಾದರೂ ಹೇಳಿ ಆಮೇಲೆ ಬಯ್ಯೋ" ಎಂದು ರಾಮಚಂದ್ರ ಕಾತರದಿಂದ ಕೇಳಿದ.

"ಹೇಳ್ತೀನಿ ಕೇಳು. ಸಾಧಾರಣವಾಗಿ ಇವನ್ನೆಲ್ಲಾ ಯಾರಿಗೂ ಹೇಳೋಲ್ಲ. ಆದರೆ ನೀನು ನಾಳೆ ವಿಚಾರವಾದೀಂತ ತನಿಖೆ ಮಾಡೊದಕ್ಕೆ ಹೋದೋನು ಮತ್ತೆ ಇಂಥಾ ಕೆಲಸ ಮಾಡಬಾರ್ದು ಅಂತ ಇದನ್ನ ಹೇಳ್ತಾ ಇದೀನಿ. ಕೃಷ್ಣೇಗೌಡ ಒಬ್ಬನ್ನ ಬಿಟ್ಟು ಮಿಕ್ಕೋರು ಯಾರೂ ದೈಯ್ಯದ ವಿಷ್ಯಾನೆ ಎತ್ಲಿಲ್ಲ. ಅವನ ಹೆಂಡ್ತಿಗೆ ಒಂದೇ ಮಗು ಆಗಿರೋದಕ್ಕೆ ಕೃಷ್ಣೇಗೌಡನ ಚಾಳಿಗಳೇ ಕಾರಣ. ಮನೇ ಮೇಲೆ ಕಲ್ಲು ಬೀಳೋದಕ್ಕೆ ಕೃಷ್ಣೇಗೌಡನ ಪ್ರೇಯಸಿಯರಾದ ಗೋಸಾಯಿ ಹೆಂಗಸೆ ಮೊದಲು ಕಾರಣ. ಅನಂತರ ಅವರು ಕಲ್ಲು ಹೊಡೆದಾಗ ಇವನು ಕಾವಲು ಕಾಯೋ ನೆವ ತಗೊಂಡು ಹೊರಗೆ ಹೋಗದೆ ಉಪೇಕ್ಷಿಸಲು ಅಂತ ತಾನೇ ಹಲವಾರು ಬಾರಿ ಕಲ್ಲೆಸೆದೆ ಅಂತಾಳೆ."

"ಅವನ ಮಗಳು ಜಯಂತಿ ಆ ಹುಡುಗ್ರು ಬರ್‍ಲೀಂತ ನಾನೇ ಕಲ್ಲೆಸೆದೆ. ರಫೀನ ನಾನು ಪ್ರೀತಿಸ್ತೀನಿ ಸಾರ್. ಅವನು ನನ್ನ ಮದುವೆಯಾಗೋ ಹಾಗೆ ಮಾಡೀ ಸಾರ್. ಇಲ್ದಿದ್ರೆ ಗೋಸಾಯಿಗಳ ಜೊತೆ ಓಡೋಗಿ ಸೂಳೇಮನೆ ಸೇರ್‍ಕೋತೀನಿ ಅಂತಾಳೆ."

"ಕೃಷ್ಣೇಗೌಡ ಮಾತ್ರ ತಾತ್ಸಾರದಿಂದ ಪ್ರತಿವರ್ಷಾನೂ ಈ ಕಾಲದಲ್ಲಿ ಮನೇಮೇಲೆ ಎಂಥದೋ ಉರುಳಿದ ಸದ್ದಾಗಿತ್ತು. ಸಾರ್. ನಾವ್ಯಾರೂ ಗಮನ ಕೊಡ್ತಿರಲಿಲ್ಲ. ಈ ಸಾರಿ ಮಾತ್ರ ಇವರೆಲ್ಲಾ ಪುಕಾರೆಬ್ಬಿಸಿ ನನ್ನ ತಲೆಕೆಡಿಸಿ ರಾದ್ಧಾಂತ ಅನಾಹುತ ಮಾಡಿಸಿದ್ರು. ದಯಮಾಡಿ ನನ್ನ ಹೆಂಡ್ತೀಗೆ ನಾಕು ಬುದ್ದಿವಾದದ ಮಾತು ಹೇಳಿ ಅಂತಾನೆ. ನಾನು "ಬ್ಲಡಿ ನ್ಯೂಸೆನ್ಸ್" ಅಂದಿದ್ದು ಸರಿನೋ ತಪ್ಪೋ ಹೇಳು" ಎಂದು ಒಂದೇ ರಭಸದಲ್ಲಿ ಹೇಳಿ ಮುಗಿಸಿದ.

"ಮೈಗಾಡ್! ದಟ್ ಗರ್ಲ್! ಏನಯ್ಯ ಬಗ್ಗಿಸಿದ ತಲೆ ಎತ್ತುತ್ತಾ ಇರ್ಲಿಲ್ಲಾ ಅವರು. ಇದ್ದಕ್ಕಿದ್ದಂತೆ ಅವಳಿಗೆ ಪ್ರೀತಿ ಶುರುವಾಯಿತೇನಪ್ಪಾ!

"ಇದ್ದಕ್ಕಿದ್ದಂತೆ ಅಂತ ನಾವು ಹೇಳ್ತೀವಿ. ಅವಳನ್ನ ಕೇಳಿದರೆ ರಫೀನ ಅವಳು ಎಂದಿನಿಂದಲೋ ಪ್ರೀತಿಸ್ತಿದೀನಿ ಅಂತ ದೃಢವಾಗಿ ನಂಬಿರ್ತಾಳೆ. ಅವಳಿಗೆ ತನ್ನದೇ ಆದ ಕತೆ ಬಂದಿರುತ್ತೆ. ಅದಕ್ಕೆ ಸಾಕ್ಷಾಧಾರ ಹುಡುಕ್ತಾ ಸಂಗ್ರಹಿಸ್ತಾ ಇರ್ತಾಳೆ. ಹೆಚ್ಚು ಕೇಳಿದರೆ ಅವಳ ಪ್ರೀತಿ ಜನ್ಮಜನ್ಮಾಂತರಕ್ಕೆ ಹೋಗ್ತದೆ."

"ರಫಿ ಏನನ್ನಬಹುದು?"

"ಏನಂತಾನೆ? ಅವಳನ್ನ ಹೆಚ್ಚಿಗೆ ನೋಡಿದರೆ ನಂಗೂ ನಿಂಗೂ ತಲೆ ಕೆಡುತ್ತೆ. ಹಾಗಿದಾಳೆ! ಇನ್ನು ಹುಡುಗ ರಫಿ ಏನೇಳ್ತಾನೆ? ನನ್ನ ಹೃದಯದೊಳಗೆ ನನಗೆ ತಿಳಿಯದಂತೆ ಅವಳ ಬಗ್ಗೆ ಪ್ರೀತಿ ಹುದುಗಿತ್ತು ಅಂತಾನೆ. ಅದನ್ನ ನಂಬಿಕೊಂಡೇ ಹೇಳ್ತಾನೆ. ನೀನು ಪ್ರೀತಿಸ್ದಾಗ ಮೊದಲು ನಿನಗೇನನ್ನಿಸಿತ್ತು ಯೋಚಿಸ್ಕೋ? ಮನಸ್ಸಿನ ಮಾಯಾಶಕ್ತಿಯ ಬಗ್ಗೆ ಬರಹಗಾರನಾಗಿ ನನಗನ್ನಿಸ್ತಿದೆ, ಅದನ್ನ ಸ್ವತಂತ್ರವೋ ವಿಧಿ ನಿಯಮಗಳಿಗೆ ಅಧೀನವೋ ಅಂತ ವಿಶ್ಲೇಷಣೆ ಮಾಡೋದಕ್ಕೆ ಹೋಗೋದೇ ತಪ್ಪು. ಮನಸ್ಸಿಗೆ ಮನಸ್ಸು ಪ್ರಜ್ಞೆಗೆ ಪ್ರಜ್ಞೆ ಯಾವುತ್ತೂ ವಿಶ್ಲೇಷಣೆಯ ವಸ್ತು ಆಗೋದೇ ಇಲ್ಲ ಕಣೋ. ನಿನ್ನೆ ಪಾಟೀಲರು ಮಾತಾಡ್ತಿದ್ದಾಗ ನಾನು ಮಾತಾಡದೆ ಕೂತುಕೊಂಡು ಇದನ್ನೇ ಯೋಚಿಸಿದ್ದೆ."

"ಸರಿಯೋ ಮಾರಾಯ ಈ ಸಾಬರ ಹುಡುಗಾ ಆ ಹಿಂದೂ ಹುಡುಗಿ ಪ್ರೀತಿಸೋಕ್ಕೆ ಶುರುಮಾಡಿ, ಅದಕ್ಕೆ ನಮ್ಮ ಪ್ರಭಾವಾನೆ ಕಾರಣ ಅಂತಾಗಿ, ಹಿಂದೂಗಳು ಸಾಬ್ರೂ ಸೇರಿ ನಮಗೆ ತದುಕ್ತಾರಲ್ಲಯ್ಯ. ತುಮಕೂರಿನಲ್ಲೂ ಹೀಗೆ ಯಾವುದೋ ಸಣ್ಣದರಿಂದ್ಲೆ ಶುರುವಾಗಿ ರಾದ್ಧಾಂತ ಆಗಿ ಅದಕ್ಕೆ ನಾನೇ ಕಾರಣ, ಅಂತಾಯ್ತು ಕೊನೆಗೆ. ಹೋಗ್ಲಿಬಿಡು ನಂಗೇನೂ ಹೊಸದಲ್ಲ. ಆದರ್ಶ ಇಟ್ಟುಕೊಂಡು ಬದುಕೋರಿಗೆ ಇವೆಲ್ಲಾ ಅನಿವರ್ಯಾಂತ ಕಾಣ್ತದೆ." ಎಂದ. ಅವನ ಮುಖದಲ್ಲಿ ಚಿಂತೆ ಎದ್ದು ಕಾಣುತ್ತಿತ್ತು.



ಅಷ್ಟರೊಳಗೆ ಸರಿಯಾಗಿ ರಮೇಶ ಎದುರಿಗೆ ಬಂದ. ಅವನು ಚಿಂತಾಕ್ರಾಂತನಂತೆ ಮುಖ ಮಾಡಿಕೊಂಡಿದ್ದ. "ನಮಸ್ಕಾರ ಸಾರ್" ಎಂದ.

"ಏನಯ್ಯ ಏನಾಯ್ತು ನಿನ್ನೆ. ದೆಯ್ಯಗಿಯ್ಯ ಪತ್ತೆಮಾಡಿದ್ರೋ ಅಥವಾ ಮನುಷ್ಯರೇನೋ" ಎಂದು ರಾಮಚಂದ್ರ ಕೇಳಿದ.

"ಒಂದು ಕೆಲಸ ಆಗಿದೇ ಸಾರ್ ಅದನ್ನ ನಿಮಗೆ ಹೇಳೋಣ ಅಂತಾನೇ ಆಗ್ಲಿಂದ ಹುಡುಕಿಕೊಂಡು ತಿರುಗ್ತಿದೀನಿ. ನಿನ್ನೆ ತೋಟ ಕಾವಲು ಕಾಯ್ತಿರಬೇಕಾದರೆ ರಫೀನು ಇಂಗ್ಲಿಷ್‌ಗೌಡಾನು ಒಂದ್ಕಡೆ ಇದ್ರು. ನಾನು, ಚಂದ್ರ, ಅಂಗಾರ ಇನ್ನೊಂಡ್ಕಡೆ ಇದ್ವಿ. ಅವರಿಗೆ ಕಲ್ಲು ಬಿದ್ದಂಗಾಯ್ತಂತೆ. ನೋಡಿದರೆ ಏನೋ ಆಕಾರ ಕಂಡಂತೆ ಆಯ್ತಂತೆ. ಇಂಗ್ಲಿಷ್‌ಗೌಡ ನೋಡಿದೋನು ಹೆದರಿಕೊಂಡು ಓಡಿಬಂದ. ನಾವು ಅವನ್ನ ಹಿಡಿದು. ತಿರುಗಿ ಹೋದಾಗ ರಫಿ ಒಬ್ನೆ ಇದ್ದ. ಅವನು ಧೈರ್ಯಮಾಡಿ ಆಕಾರಾನ ಹಿಡುಕೊಳ್ಳೋಕೆ ಹೋದ್ನಂತೆ ಸಾರ್. ಆ ಅಕಾರಾನೆ ಬಂದು ಇವನ್ನ ತಬ್ಬಿ ಹಿಡಿಕೊಂತಂತೆ. ಎಲ್ಲಾ ಥೇಟ್ ಜಯಂತಿ ತರಾನೆ ಇತ್ತಂತೆ. ರಫಿ ನನ್ನ ಕೈಬಿಡಬೇಡ ಅಂತ ಹೇಳ್ತಂತೆ. ಈವತ್ತು ಕಾಲೇಜಿನಲ್ಲಿ ಜಯಂತಿ ತನ್ನ ಪಾಡಿಗೆ ತಾನು ಇದ್ದದ್ದು ನೋಡಿ ರಫಿ ಬೇಜಾರು ಮಾಡಿಕೊಂಡು ಗೋಳೋ ಅಂತ ಆಳ್ತ ರೂಮಲ್ಲಿ ಕೂತಿದಾನೆ ಸಾರ್. ನಮಗೆ ಇದೇನು ಮೋಹಿನಿ ದೆವ್ವಾ ಅಂತಾರಲ್ಲಾ ಹಂಗೇನಾದರೂ ಇರಬಹುದಾ ಅಂತ ಗಾಬರಿ ಆಗಿದೆ ಸಾರ್" ಎಂದು ಮುಗ್ಧ ಪ್ರಾಮಾಣಿಕತೆಯಿಂದ ಅದರೆ ಕಳವಳದಿಂದ ಹೇಳಿದ.

ರಾಮಚಂದ್ರ ಜಯರಾಂ ಮುಖಮುಖ ನೋಡಿಕೊಂಡರು. ರಾಮಚಂದ್ರ ಏನನ್ನೋ ಹೇಳಲು ಬಾಯಿ ತೆರೆದಿದ್ದ. ಅಷ್ಟರಲ್ಲಿ ಜಯರಾಂ ಅವನ್ನನು ತಡೆದು, "ರಮೇಶ ನಿನಗೇನು ಹುಚ್ಚೇನಯ್ಯ ದೆವ್ವ ಅಂತೀಯಲ್ಲ" ಎಂದ.

"ಹಂಗಾರೆ ಮತ್ತೇನಿರಬಹುದು ಸಾರ್?"

"ಮತ್ತೇನು ಜಯಂತೀನೆ, ಅವಳು ರಫೀನ ಪ್ರೀತಿಸ್ತಾಳೆ. ಹಾಗಂತ ಕಾಲೇಜಲ್ಲಿ ನಿಮ್ಮ ಕಡೆ ಹಲ್ಲು ಕಿರೀತ ಕಣ್ಣು ಹೊಡೀತ ಇರೋದಕ್ಕೆ ಆಕೆ ಏನು ಬೀದಿ ಸೂಳೇನೇನಯ್ಯ. ನೀವೇನು ರಸ್ತೆ ಗಿರಾಕಿಗಳೋ? ಹೇಳು" ಎಂದ ಜಯರಾಮ.

ರಮೇಶನ ಮುಖ ಸಂತೋಷದಿಂದ ಅರಳಿತು. "ಹಂಗಾರೆ ರಫಿಗೆ ಹೇಳಬಹುದಾ ಸಾರ್" ಎಂದ.

"ಓ ಯಸ್! ರಫಿಗೆ ಬೇಕಾದರೂ ಹೇಳು, ಯಾರಿಗೆ ಬೇಕಾದರೂ ಹೇಳು. ಮುಂದಾಗೋದಕ್ಕೆಲ್ಲಾ ಮಾತ್ರ ತಯಾರಾಗಿರಿ, ಹೋಗ್ ನಡೆ" ಎಂದ.

ರಮೇಶ ಪಾನಮತ್ತನಂತೆ ಸಂತೋಷದಿಂದ ತೂರಾಡುತ್ತಾ ಹೊರಟ.

ಜಯರಾಮ ಹಿಂದಿನಿಂದ ಕೂಗಿದ. "ರಫಿಗೆ ಹೇಳೋ ನಮಗೆಲ್ಲಾ ಸ್ವೀಟು ಕೊಡೋದಕ್ಕೆ" ಎಂದ.

"ಅಲ್ಲಯ್ಯಾ ಈ ಊರಿನ ಪರಿಸ್ಥಿತೀಲಿ ನೀನು ಏಕ್‌ದಂ ಹೇಳಿ ಬಿಡೋದೇನೋ?" ಎಂದು ಹೇಳಿದ ರಾಮಚಂದ್ರ.

"ಅಲ್ಲಾ ಆ ಕಳ್ಳ ಹುಡುಗಿ ನನಗೆ ಇಂಟರ್‌ವ್ಯೂನಲ್ಲಿ ಈ ವಿಷ್ಯ ತಿಳಿಸಲೇ ಇಲ್ವಲ್ಲಯ್ಯಾ! ನೋಡು ಹೇಗಿದೆ ಈಗ ತಮಾಷೆ!"

"ನಾನು ಈ ವಿಷ್ಯ ಈಗ ರಫಿಗೆ ತಿಳಿಸಲಿಲ್ಲಾ ಅನ್ನು. ಅವನು ಕೂತು ಆಳ್ತಾನೆ ಇದ್ಬಿಡ್ತಾನೆ. ಎಲ್ಲಾ ಮೋಹಿನಿ ದೆವ್ವಾ ಮೆಟ್ಕೊಂಡಿದೆ ಅನ್ನೋದಕ್ಕೆ ಶುರುಮಾಡ್ತಾರೆ. ಕೊನೆ ಕೊನೆಗೆ ಅವನೂ ಹಾಗೆ ಆಡೋಕೆ ಶುರು ಮಾಡ್ತಾನೆ. ಆಮೇಲೆ ಅವನ್ನ ಗುಟ್ಟಳ್ಳಿ ಹಕೀಂ ಸಾಬಿ ಹತ್ರ ಕರಕೊಂಡು ಹೋಗ್ತಾರೆ. ಅವನು ಮುಳ್ಳಿನ ಕೋಲು ತಗೊಂಡು ಹೋಗ್ತೀಯೋ ಇಲ್ವೋ ಅಂತ ಹೊಡೀತಾನೆ. ಈಗ ಸಾಬರೋ ಹಿಂದೂಗಳೋ ಹಿಡಿದು ಅವನಿಗೆ ಹೋಡೀಬಹುದು. ಈ ಎರಡರಲ್ಲಿ ಒಂದು ಅನಿವಾರ್ಯ ಅಂತಾದರೆ ಯಾವುದನ್ನ ಆರಿಸ್ಕೋತಿಯ."

"ಅದು ಸರಿ. ಆದರೆ ಎರಡೂ ಅನಿವಾರ್ಯ ಆಗದ ಹಾಗೆ ನೋಡ ಬೇಕಲ್ಲಯ್ಯಾ!"

"ಸರಿ ಈಗ ಸದ್ಯಕ್ಕೆ ಎರಡನೇದನ್ನ ಆರಿಸ್ಕೊಂಡಿದೀವಲ್ಲ. ಅದನ್ನೂ ಅನಿವಾರ್ಯ ಆಗದಹಾಗೆ ನೋಡಿಕೊಳ್ಳೋಣ. ಅದರ ಮೊದಲನೇ ಹೆಜ್ಜೆ ಇದು. ಯಾವುದನ್ನೂ ಮರೆಮಾಚದೆ ಬದುಕೊದು. ಈ ರೀತಿ ಎಲ್ಲ ಗೋಪ್ಯಮಾಡಿ ಬದುಕೊದರಿಂದಲೇ ಹೀಗೆ ಎಲ್ಲರೂ ಒಂದೊಂದು ಕಲ್ಪನೆ ಕತೆಗಳನ್ನ ತಲೇಲಿಟ್ಕೊಂಡು ಅದಕ್ಕೆ ತಕ್ಕಂಥ ಸಂಗತಿ ಸಾಕ್ಷಗಳನ್ನು ಇರಸ್ಕೋತ ಇರೋದು. ಏನೋ ಸಂಭವಿಸುತ್ತೇ! ಅದ್ಯಾಕೆ? ಏನು? ಅನ್ನೋದೊಂದು ಗೋಪ್ಯ. ಸರಿ ನನ್ನ ಮನಸ್ಸು ಕಲ್ಪನೆಯ ಕತೆಗೆ ತಕ್ಕಂತೆ ವ್ಯಾಖ್ಯಾನ ಮಾಡಿ ಅದನ್ನ ನುಂಗತ್ತೆ."

"ಅದೆಲ್ಲಾ ಸರಿ ಕಣಯ್ಯಾ"

"ಸರೀನೂ ಇಲ್ಲ ಬೆಸಾನೂ ಇಲ್ಲ. ತುಮಕೂರಿನಲ್ಲಿ ನಿನಗಾದ ಅನುಭವದಿಂದ ನೀನು ನರ್ವಸ್ಸಾಗಿರಬಹುದು. ಅಲ್ಲಾ ಕಣಯ್ಯಾ ಒಬ್ಬ ಹುಡುಗಾ ಒಂದು ಹುಡುಗೀನ ಪ್ರೀತಿಸಿದರೆ ಇವರು ಒಬ್ಬನ್ನ ಹಿಂದೂಂತ ಕರೆದು ಮುಸ್ಲಿಂ ಅಂತ ಕರೆದು ಜಗಳಕ್ಕೆ ನಿಂತರೆ ತಲೆಬಾತಿ ಏನಯ್ಯಾ?"

"ನೀ ಹೇಳೋದೆಲ್ಲಾ ಸರಿ ಕಣೋ. ಆದರೆ ಸಣ್ಣ ವಿಷ್ಯನೆಲ್ಲಾ ದೊಡ್ಡದು



ಮಾಡೋದಕ್ಕೆ ಕಾಯ್ತಿದಾರೆ ಜಯರಾಂ ಈ ಊರಲ್ಲಿ. ಇವತ್ತು ಬೆಳಿಗ್ಗೆ ಏನಾಯ್ತು ಗೊತ್ತ. ಹಾಳು ಬಾವೀಲಿ ನಾಯಿ ತಲೆಬುರುಡೆ ಜೊತೆಗೆ ಎರಡು ಚಿಕ್ಕ ಮನುಷ್ಯರ ತಲೆ ಬುರುಡೆ ಸಿಕ್ವಂತೆ. ಮಕ್ಕಳ ತಲೆ ಕತ್ತರಿಸಿ ಹಾಕಿದಾರೆ ಅಂತ ಜನದೊಂಬಿಗೆ ರೆಡಿಯಾಗಿದ್ದರಂತೆ ಅಷ್ಟರೊಳಗೆ ಯಾರೋ ದಾರೀಲಿ ಹೋಗೋ ಮುದ್ಕಿ ಆ ತಲೆ ಬುರುಡೆ ಹಲ್ಲುಗಳನ್ನು ಗಮನಿಸಿ "ಓಹೋ ಈ ತರ ಕ್ವರೆ ಹಲ್ಲಿರೋ ಮಕ್ಳೂ ಈ ಊರ್‍ನಾಗೆ ಮನುಷರಿಗೆ ಹುಟ್ಟವೆ ಅಂತ ಗೊತ್ತರ್‍ಲಿಲ್ಲಾ" ಎಂದು ಉದ್ರಿಕ್ತರಾದ ಗುಂಪನ್ನು ಅಪಹಾಸ್ಯ ಮಾಡಿದಳಂತೆ. ಆಮೇಲೆ ಹರಿಜನ್ರೋನೊಬ್ಬ ಇವರು ಮಂಗನದೆಂದು ಹೇಳಿದ ಮೇಲೆ ಗುಂಪಿನ ಉದ್ರೇಕ ಇಳಿತಂತೆ! ಸಣ್ಣದೆಲ್ಲಾ ಹೇಗೆ ದೊಡ್ಡದಾಗ್ತಿದೆ ಅಂತ."

"ದೊಡ್ಡದಾಗಲಿ, ಬೇಕಾದ್ದಾಗಲಿ ನೋಡೋಣ ಬಿಡೋ. ಅದಿರ್‍ಲಿ ಈ ರಮೇಶ ಏನು ತನ್ನನ್ನೇ ಪ್ರೀತಿಸ್ತಾಳೆ ಜಯಂತಿ ಅನ್ನೋಹಾಗೆ ಸಂತೋಷದಲ್ಲಿ ತೂರಾಡ್ತಾ ಹೋದನಲ್ಲ? ಜಯಂತಿ ದ್ರೌಪದಿ ತರ ಈ ಪಂಚ ಪಾಂಡವರನ್ನೂ ಪ್ರೀತಿಸಬೇಕಾಗುತ್ತೇನು? ಸದ್ಯ ಕುರುಕ್ಷೇತ್ರಕ್ಕೆ ತಗೊಂಡು ಹೊಗಿ ಹಾಕದಿದ್ರೆ ಸಾಕು ಆ ದ್ರೌಪದಿ" ಎಂದ ಜಯರಾಂ.

"ಒಳ್ಳೇದೇ ಆಯ್ತು. ಈ ಹುಡುಗರಿಗೆ ಹುಡುಗಿಯರ ಪ್ರೀತಿ ಅಂದರೆ ಏನೂಂತ ಗೊತ್ತಿರಲಿಲ್ಲ. ಹುಡುಗಿಯರು ಅಂದರೆ ಸಾಕು ನರ್ವಸಾಗಿ ನಡುಗ್ತಾ ನಿಂತುಬಿಡೋರು. ನನ್ನ ಹತ್ತಿರ ಮಾತಾಡ್ತಿದ್ದೋರಿಗೆ ಇದ್ದಕ್ಕಿದ್ದಂತೆ ಮಾತು ತೊದಲುತ್ತಾ ಗಾಬರಿ ಆಯ್ತು ಅಂದರೆ ನನಗೆ ಗೊತ್ತು ನನ್ನ ಬೆನ್ನ ಹಿಂದೆ ಯಾವಳೋ ಹುಡುಗಿ ನಿಂತಿದ್ದಾಳೆ ಅಂತ" ಎಂದು ನಕ್ಕ ರಾಮಚಂದ್ರ, ಜಯರಾಮನೂ ಅದನ್ನು ಕೇಳಿ ನಕ್ಕ.

## ಅಧ್ಯಾಯ ೪೦



ಜಯರಾಂ ಬಳಿಗೆ ಮಾರನೇ ದಿನವೇ ಕೃಷ್ಣೇಗೌಡ ಹಾಜರಾದ. ಕೋಪಾವಿಷ್ಟನಾದ ಅವನು ನಾಟಕದ ಕಂಸನಂತೆ ಕಾಣುತ್ತಿದ್ದ. "ಏನ್ ಸಾರ್! ತುರುಕರೋನ್ನ ಕಟ್ಟಿಕೊಳ್ತಾಳಂತೆ ನನ್ಮಗಳು. ಕತ್ತರಿಸಿ ಮೂರ್ತುಕುಡಾ ಮಾಡಿ ಬಾವೀಗೆ ಎಸೀತೀನಿ ಅವಳನ್ನ, ಇನ್ನೂ ಹುಡ್ಗೀ ಅಲ್ಲಾ ಅಂತ ಕಾಲೇಜಿಗೆ ಕಳಿಸ್ತಿದ್ದೆ. ಇಲ್ದಿದ್ರೆ ಎಂದೋ ಅವಳನ್ನು ಮುಸುರೆ ತೋಳ್ಕೊಂಡು ಬಿದ್ದಿರೂಂತ ಓದು ಬಿಡ್ತಿಸ್ತಿದ್ದೆ. ಮೇಷ್ಟ್ರು ರಾಮಚಂದ್ರ ಅವರ ಹತ್ರ ಬುದ್ಧವಾದ ಹೇಳ್ಸಿ. ಅವಳು ಹಾದೀಗೆ ಬಂದರೆ ಸಮ. ಇಲ್ದಿದ್ರೆ ಅವಳು ನನ್ಮನೇಲಂತೂ ಜೀವ್ಸಮೇತ ಇರೋಹಂಗಿಲ್ಲ" ಎಂದು ಅಬ್ಬರಿಸಿ. ಕೂಗಿದ.

ಜಯರಾಮ್‌ಗೆ ಅರ್ಥವಾಯ್ತು. ನಿನ್ನೆ ರಾಮಚಂದ್ರ ಚಿಂತಾಕ್ರಾಂತನಾದದ್ದು



ಇದಕ್ಕೆ ಅಂತ. ಯುದ್ಧಪರ್ವ ಆರಂಭವಾಯ್ತು. ಕೊನೆಗೂ ಕುರುಕ್ಷೇತ್ರಕ್ಕೆ ತಗೊಂಡೋಗಿ ಹಾಕಿದಳು ಈ ದ್ರೌಪದಿ ಅಂತ. ತನ್ನ ಎಂದಿನ ಶಾಂತ ದನಿಯಲ್ಲೇ "ಯಾರು ಹೇಳಿದರು ಇದನ್ನ" ಎಂದು ಕೇಳಿದ.

"ಯಾರು ಹೇಳೋದೇನು? ಹಿಂಗಂತ ಎಲ್ಲಾ ಕಡೆ ಗುಸು ಗುಸು ವಾರ್ತೆ ಅಂತ ಸೆಕ್ರೆಟರಿ ರಾಮಾಚಾರಿ ಬಂದು ಹೇಳಿದ. ಹೌದೇನೇ ಅಂತ ಆ ಬೇವಾರ್ಸಿ ಹುಡುಗೀನೆ ಕೇಳ್ದೆ. ನನ್ನೆದುರೇ ನಾಚಿಗೆ ಇಲ್ಕೆ ಬೋಗುಳಿದ್ಲಲ್ಲ. ಆ ತುರುಕನ್ನೇ ನಾನು ಮದುವೆಯಾಗೋದು ಅಂತ. ಇನ್ನು ತಂದೆ ಅಂತ ನಂದೇನು ಉಳೀತು ಹೇಳಿ?" ಎಂದು ಕೂಗಿದ. ಇದರೊಡನೆ ಅವನ ಹೆಂಡತಿ ಬೇರೆ ಮನೆಯಲ್ಲಿ ಕೊಂಕು ನುಡಿದು ಉರಿಯೋ ಗಾಯಕ್ಕೆ ಉಪ್ಪು ಸವರಿದ್ದಳು. "ನೀವು ಅಪ್ಪಂತೋರಾಗಿದ್ರೆ ಮಕ್ಳೂ ಹಂಗೇ ಇರ್ತಿದ್ವು, ನೀವು ತುರುಕರು ತಿರುಕರು ಯಾರಾದ್ರೂ ಸರಿ ಅಂತ ಚಕ್ಕಂದ ಅಡಿದ್ದಕ್ಕೇ ಇಲ್ಲಿಗೆ ಬಂದಿರೋದು. ಇರೋಳೊಬ್ಳು ಮಗಳು. ಕೊಲ್ಲುತೀನಿ ಕಡೀತೀನಿ ಅಂದ್ರೆ ಇಷ್ಟೊಂದಲ್ಲಾ ಆಸ್ತಪಾಸ್ತಿ ದುಡ್ಡು ದುಗ್ಗಾಣಿ ಮಾಡಿದ್ದು ಯಾಕೆ? ಮಣ್ಣಿಗ!" ಎಂದು ಅರ್ಧ ಮಗಳ ಮೇಲೂ ಆರ್ಧ ಗಂಡನ ಮೇಲೂ ಪ್ರಹಾರ ಮಾಡಿದ್ದಳು.

ಜಯರಾಂ ಯೋಚಿಸಿ ಏನನ್ನೋ ನಿರ್ಧರಿಸಿದ. ಈ ಊರಿನ ಗೋಳುಗಳೆಲ್ಲಾ ಉರಿಗಾರಿ ಒಮ್ಮೆ ಲಯವಾಗಲಿ ಎನಿಸತೊಡಗಿತು. ಗಂಭಿರವಾಗಿ ಆದರೆ ತೀರಾ ಕಟುವಾಗಿ "ಗೌಡ್ರೆ ನೀವು ಅವಳನ್ನ ಕೊಲ್ಲೋದೋ ಮನೆ ಬಿಟ್ಟು ಓಡಿಸೋದೋ ಯಾವುದನ್ನೇ ಆದರೂ ಅದರ ಮುಂದಿನ ಪರಿಣಾಮಗಳನ್ನ ಚೆನ್ನಾಗಿ ಯೋಚನೆಮಾಡಿ ಅದನ್ನ ಕೈಗೊಳ್ಳೋದು ವಾಸಿ. ಯಾಕೆಂದರೆ ನಾನು ತಿಳಿದಂತೆ ಪ್ರೀತಿಸಿದ ಹುಡುಗರನ್ನ ದಾರೀಗೆ ತರೊದು ಕಷ್ಟ. ನಾವು ದಾರಿಗೆ ತರೋದಕ್ಕೆ ಹೋದರೆ ಇನ್ನೂ ಬಿಗಿ ಮುಷ್ಟೀಲಿ ಹಿಡುಕೊಳ್ತಾರೆ. ಹಾಗೂ ಕಷ್ಟಪಟ್ಟು ನಾವು ಯಾವುದನ್ನ ಹಾದಿ ಅಂತ ತಿಳಿದಿದ್ದೇವೋ ಅದಕ್ಕೆ ತಂದೆವೂ ಅಂತ ಇಟ್ಟುಕೊಳ್ಳಿ. ಅದರ ಪರಿಣಾಮ ಅವರ ಜೀವನಮಾನವೆಲ್ಲಾ ವ್ಯಾಪಿಸಿ ಬಿಟ್ಟು ಅವರು ಈಗಲೇ ಸತ್ತಿದ್ರೆ ವಾಸಿ ಇತ್ತು ಅಂತ ನಮಗೆಲ್ಲ ಅನ್ನಿಸೋಕೆ ಶುರುವಾಗುತ್ತೆ. ಅದಕ್ಕೇ ನೀವು ಈಗಲೇ ಸರಿಯಾದ ತೀರ್ಮಾನ ತಗೊಂಡುಬಿಡೋದೆ ವಾಸಿ" ಎಂದ. ಜಯರಾಮನಂಥ ಮೃದು ಸ್ವಭಾವದ ಗೌರವಾನ್ವಿತ ವ್ಯಕ್ತಿ, ಎಲ್ಲರೂ ಮರ್ಯಾದೆ ಕೊಡೋ ಅಂಥ ಮನುಷ್ಯ ಹೀಗೆ ಹೇಳಿದ್ದನ್ನು ನೋಡಿ ಕೃಷ್ಣೇಗೌಡನಿಗೆ ಹೃದಯದ ಆಳದಿಂದ ಎಂಥದೋ ಒಂದು ಥರದ ದಿಗಿಲು ಆರಂಭವಾಯ್ತು. 'ಸುಮ್ನಿರಿ ಗೌಡ್ರೇ! ಹಾಗೆಲ್ಲಾ ಮಾಡಬೇಡಿ.

ಏನೋ ಹುಡುಗ್ರು! ನಾವೆಲ್ಲಾ ಹೇಳಿ ಸರಿ ಮಾಡ್ತೀನಿ!" ಇತ್ಯಾದಿ ಸಾಂತ್ವನ ವಚನಗಳನ್ನು ನಿರೀಕ್ಷಿಸಿ ಬಂದಿದ್ದ ಅವನಿಗೆ ಗಾಬರಿಯಾಯ್ತು.

"ನೋಡಿ ಹೊಲೆರವನಾದ್ರು ಪರವಾ ಇರ್ಲಿಲ್ಲ. ಹಿಂದೂ ಆದ್ರೆ ಸಾಕಿತ್ತು. ಎಲ್ಲಾ ಬಿಟ್ಟು ಹೋಗಿ ತುರುಕ! ತಂದೆ ತಾಯಿ ಇಲ್ಲದ ಬಿಕನಾಸಿ! ಥುತ್, ನಾನಿರೋವರೆಗೆ ಇದೆಲ್ಲಾ ಸಾಧ್ಯಾ ಇಲ್ಲ. ನನ್ನ ಹೆಣ ಬಿದ್ದಮೇಲೆ ಅವರು ಕಟ್ಕೋಬೇಕು" ಎಂದು ಮೆಲ್ಲಗೆ ಅವಳನ್ನು ಕೊಲ್ಲುವ ಮಾತು ಬಿಟ್ಟು ಆತ್ಮಹತ್ಯೆಯ ಕಡೆಗೆ ತಿರುಗಿದ.

"ನೋಡಿ ಕೃಷ್ಣೇಗೌಡ್ರೆ ನಿಮ್ಮ ಕಷ್ಟ ದುಃಖ ನನಗೂ ಗೊತ್ತಾಗ್ತದೆ. ಆದರೆ ನಾವು ಇದನ್ನೆಲ್ಲಾ ಬಿಡಬೇಕು. ಏನೆಂದರೆ ನಮಗೋಸ್ಕರ ನಮ್ಮ ಮಕ್ಕಳು ಬದುಕಬೇಕು ಅನ್ನೋದನ್ನ. ಎಷ್ಟೋ ಜನ ಪ್ರೀತಿಸ್ದೋರು ಆಮೇಲೆ ತಮ್ಮ ವಿವೇಕದಿಂದಲೇ ತಮ್ಮ ದಾರಿ ಬೇರಿ ಮಾಡ್ಕೊಂಡಿದಾರೆ! ಆದರೆ ತಮ್ಮ ಬುದ್ಧಿಯಿಂದಲೇ ಅನ್ನೋದನ್ನ ಜ್ಞಾಪಕ ಇಟ್ಕೊಳ್ಳಿ. ಅವಳಿಗೆ ಅನ್ನಿಸಬೇಕು, ಅದಕ್ಕಾಗಿ ನೀವು ಅವಳ ಮನ ಒಲಿಸೋದು, ಕರುಣೆಗೆ ಪ್ರಯತ್ನಿಸೋದು ಇವ್ಯಾವುದರಿಂದಲೂ ಇಲ್ಲ. ಅವೆಲ್ಲ ಏನು ಮಾಡೋದಕ್ಕೆ ಹೋದರೂ ಇನ್ನಷ್ಟು ಬಿಗಡಾಯಿಸ್ತದೆ. ನಿಮಗೆ ಇದರಿಂದ ನಿಜಕ್ಕೂ ತೊಂದರೆ ಅವಮಾನಗಳು ಆದರೆ ಅದು ನಿಮ್ಮ ಪಾಲಿಗೆ ಬಂದದ್ದು ಅಂತ ಎದುರಸಬೇಕು ಅಷ್ಟೇ" ಜಯರಾಂ ಗಂಭೀರವಾಗಿ ಹೇಳಿದ. "ನಾನು ಹೇಳ್ತಾ ಇರೋದು ನಿಮ್ಮ ಸಮಾಧಾನಕ್ಕೆ ಅಲ್ಲ. ನಾನು ನಿಮ್ಮ ಸ್ಥಾನದಲ್ಲಿ ಇದ್ರೆ ಏನ್ಮಾಡ್ತಿದ್ದೆನೋ ಅದನ್ನ" ಎಂದ.

"ಪಾಪಿ ಮುಂಡೆ! ಏನಾದರೂ ಸಾಯ್ಲಿ. ಅಪ್ಪ ಅಮ್ಮನಿಗಿಂತ ಆ ಬೇವಾರಸಿ ತುರುಕ ಅವಳಿಗೆ ಹೆಚ್ಚಾದರೆ ನಾವೇನ್ಮಾಡೋದು ಹೇಳಿ! ನೀವು ಹೇಳ್ದಂಗೆ ನಾನು ಕಲ್ಮನಸ್ಸು ಮಾಡಿಕೊಂಡು ಸುಮ್ಮನಿದ್ದು ಬಿಡ್ತೀನಿ. ಏನಾದ್ರು ಹಾಳಾಗ್ಲಿ" ಎಂದು ಹೇಳಿ ಜೀಪು ಹತ್ತಿ ಮಂಡಿ ಕಡೆಗೆ ಹೊರಟ. ಹೋಗುತ್ತಾ ಅವನ ಕಣ್ಣುಗಳು ಕಂಬನಿದುಂಬಿದ್ದನ್ನು ಜಯರಾಂ ಗಮನಿಸಿದ. ಇದ್ಯಾಕೆ ಈ ಊರಿನ ಬದುಕು ಇಷ್ಟೊಂದು ಕ್ರೂರ ಅಸಹನೀಯವಾಗ್ತ ಇದೆ? ಎಂದು ಚಿಂತಿಸಿದ.

ಕೃಷ್ಣೇಗೌಡ ಜೀಪಿನಲ್ಲಿ ಮಂಡಿಗೆ ತೆರಳಿ ಬಾಗಿಲು ತೆರೆದ ಕೊಂಚ ಹೊತ್ತಿನಲ್ಲೇ ತಲೆಬಿಸಿ ಆಚಾರಿ ಬಾಗಿಲಲ್ಲಿ ಹಾಜರಾದ. ಆ ವೇಳೆಗಾಗಲೇ ಅವನು ಕಾಲೇಜು ಪ್ರಿನ್ಸಿಪಾಲ್ ವೆಂಕಟರಾಯನ ಬಳಿಗೆ ಹೋಗಿಬಂದಿದ್ದ. ವೆಂಕಟರಾಯ ಬೆಳಿಗ್ಗೆಯೇ ಆಚಾರಿಯನ್ನು ಹೇಳಿಕಳಿಸಿ ಕರೆಸಿಕೊಂಡಿದ್ದ. ಅದಕ್ಕೆ ಕಾರಣ ಆಚಾರಿ ನುಡಿದ ಎಚ್ಚರಿಕೆ ಭವಿಷ್ಯ ನಿಜವಾದದ್ದು. ಸೆಕ್ರೆಟರಿ ರಾಮಾಚಾರಿ



ಪ್ರಿನ್ಸಿಪಾಲರಿಗೆ ರಫಿ ಮತ್ತು ಜಯಂತಿ ಪ್ರಕರಣ ಹೇಳಿದನಂತೆ! ಪ್ರಿನ್ಸಿಪಾಲ್ ಹೌಹಾರಿ ಕಂಗಾಲಾಗಿ ಹೋಗಿದ್ದ. ಇದೆಲ್ಲಾ ಸುಲಾಮಾನ್ ಬೇರಿ ಕಡೆಯವರ ಆಟ. ಪ್ರಿನ್ಸಿಪಾಲರಿಗೆ ಕೆಟ್ಟ ಹೆಸರು ತರಲು ಈ ರಾಮಚಂದ್ರ ಮತ್ತು ಅವನ ಮಿತ್ರರು ಸುಲೇಮಾನ್ ಬೇರಿ ಕಡೆ ಸೇರಿಕೊಂಡು ಮಸಲತ್ತು ನಡೆಸುತ್ತಿದ್ದಾರೆ ಎಂದು ಊಹಿಸಿದ. ಆಚಾರಿ ಬಂದಕೂಡಲೆ "ಆಚಾರ್ರೆ ನೀವು ಹೇಳಿದ ಭವಿಷ್ಯ ಎಲ್ಲಾ ನಿಜವಾಗ್ತಾ ಬರ್ತಿದೆ! ನೀವು ಹೇಳಿದ್ರಲ್ಲಾ ಇದನ್ನ ಹೀಗೇ ಬಿಟ್ಕೊಂಡ್ರೆ ಕಾಲೇಜಿನಲ್ಲಿ ಮುಂದೆ ಅತ್ಯಾಚಾರ ಅನಾಚಾರ ನಡೀತದೆ ಅಂತ. ಈವತ್ತು ಆರಂಭ ಆಗಿದೆ ಅದು. ರಫಿ ಅಂತ ಒಬ್ಬ ತುರುಕ ಸೂಳೆಮಗ ನಮ್ಮ ಕೃಷ್ಣೇಗೌಡರ ಮಗಳು ಜಯಂತೀನ ಲೌವ್ ಮಾಡ್ತೀನಂತ ಬಗಲಿಗೆ ಹಾಕ್ಕೊಂಡಿದಾನೆ! ಇನ್ನೂ ಏನೆಲ್ಲಾ ನಡೆದು ಹೋಗಿದ್ಯೋ ಗೊತ್ತಿಲ್ಲ. ಎಲ್ಲಿಗೆ ಬಂತೂ ನೋಡಿ ಈ ಸಾಬರ ಆಟಾಟೋಪ!" ಎಂದು ಕಿರುಚಿದ.

"ಎಲ್ಲಾ ಕೇಳಿದ ವೆಂಕಟ್ರಾಯರೆ. ರಾಮಾಚಾರಿ ನಂಗೂ ವರ್ತಮಾನ ಮುಟ್ಟಿಸ್ದ. ನಾನು ಎಲ್ಲಾ ವಿಚಾರ ಮಾಡ್ದೆ ಅಲ್ಲಿ ಇಲ್ಲಿ" ಎಂದ ಆಚಾರಿ.

"ಏನ್ ವಿಚಾರ ಮಾಡೊದು ಬಿಡಿ,, ಆ ಹಲ್ಕ ಹುಡುಗನ್ನಾ ಇವತ್ತೇ ಡಿಸ್‌ಮಿಸ್ ಮಾಡ್ತೀನಿ. ಆ ಹುಡುಗೀನ ಕರ್ಸಿ ಮರ್ಯಾದೆಯಾಗಿ ಆ ಹುಡುಗಾನೇ ನನಗೆ ಕಿಚಾಯ್ಸಿ ತೊಂದ್ರೆ ಕೊಡ್ತಿದಾನೆ ಅಂತ ಪೋಲೀಸ್ ಕಂಪ್ಲೇಂಟ್ ಬರಕೊಡ್ತಿಯೋ ಇಲ್ಲಾ ಡಿಸ್‌ಮಿಸ್ ಮಾಡ್ಲೋ ಅಂತ ಕೇಳ್ತಿನಿ. ಇದಕ್ಕೆಲ್ಲಾ ಆ ಅಯೋಗ್ಯ ಮೇಷ್ಟ್ರು ಅವನ ಜೊತೆಗಾರರ್ದು ಕಿತಾಪತಿ. ಹುಡುಗೀರನ್ನ ಒಳಗೆ ಹಾಕಿಕೊಂಡು ತಾವೊಂಚೂರು ಮಜಾ ಮಾಡೋದಕ್ಕೆ ಉಪಾಯ ನೋಡಿ. ಅವನ್ಯಾವಾಗ ಸುಲೇಮಾನ್ ಪಾರ್ಟಿ ಸೇರಿದ್ನೋ ಗೊತ್ತಾಗಿಲ್ಲ. ಮರ್ಯಾದೆಯಾಗಿ ಪಾಠ ಮಾಡ್ತಿಯೋ ಇಲ್ಲಾ ತುಮಕೂರಲ್ಲಿ ಆದಹಾಗೆ ಇಲ್ಲೂ ಅಗಬೇಕೋ ಅಂತ ವಾರ್ನಿಂಗ್ ಕೊಡ್ತೀನಿ. ಏನಾದ್ರೂ ಗಲಾಟೆ ಮಾಡಿದ್ರೆ ನೀವೆಲ್ಲಾ ನಂಗೆ ಸಪೋರ್ಟ್ ಮಾಡಬೇಕು."

ಆಚಾರಿ ಪ್ರಿನ್ಸಿಪಾಲರ ಕೋಪಾಟೋಪ ಇಳಿಯುವವರೆಗೂ ತಾಳ್ಮೆಯಿಂದ ಕೇಳಿದ. "ವೆಂಕಟ್ರಾಯರೆ ಇದೆಲ್ಲಾ ಮಾಡೋದಕ್ಕೆ ಹೋಗಬೇಡಿ. ರಾಮಾಚಾರಿಗೆ ಎಲ್ಲಾ ವಿಷ್ಯ ಗೊತ್ತಿಲ್ಲ. ನಾನೂ ವಿಚಾರ ಮಾಡ್ದೆ. ಇವರ ಜೊತೆಗೆ ನಮ್ಮೂರಿನ ಜಯರಾಮ ಅಂತ ಒಬ್ರಿದಾರೆ. ಅವನಿರೋವರೆಗೆ ನಾವು ಅವರ ಮೆಲೆ ಇವರೂ ಮಜಾ ಮಾಡೋರು ಅಂತ ಹೇಳಿದರೆ ಯಾರು ನಂಬೊಲ್ಲ. ಅವನ್ನ ಕಂಡರೆ ಎಲ್ಲರಿಗೂ ಗೌರವ. ಅವನ ಬೆಂಬಲ ಇವರಿಗಿದ್ದರೆ ನಾವು ಎದುರು

ಹಾಕ್ಕೊಳ್ಳೋದು ಒಳ್ಳೆದಲ್ಲ" ಎಂದ.

"ಅವನ್ಯಾವನ್ರೀ ಅಂಥಾ ದೊಡ್ಡ ಮನುಷ್ಯ, ನಂಗೆ ಗೊತ್ತಿಲ್ದೆ ಇರೋನು. ಮಂತ್ರೀನೋ? ಎಮ್ಮೆಲ್ಯೇನೋ? ಈ ತರ ಪೋಲಿಗಳಿಗೆಲ್ಲಾ ಬೆಂಬಲ ಕೊಡ್ತಾನಲ್ಲ. ಮತ್ತೆ ಯಾರ್ರಿ ಅವನು? ನಾನು ಬಂದು ಆರು ವರ್ಷ ಆಯ್ತು ಈವತ್ತಿನವರೆಗೆ ಅವನ ಮುಖಾ ನೋಡ್ಲಿಲ್ಲ."

"ನಿಮಗೆ ಗೊತ್ತಿಲ್ಲ. ನಾನು ಸುಮಾರು ದಿನ ಅವನ್ನ ನೋಡಿರ್ಲಿಲ್ಲ. ಆದ್ರೂ ಅವನ್ನ ನೊಡ್ದೇ ಇರೊರೂ ಗೌರವಿಸ್ತಾರೆ. ಅವನ ಬಗ್ಗೆ ಹೀನವಾಗಿ ಮಾತಡೋಕೆ ಮನಸ್ಸು ಅಳುಕುತ್ತೆ. ಅವನು ಯಾವ ಅಧಿಕಾರದಲ್ಲೂ ಇಲ್ಲ. ಯಾವ ಪಾರ್ಟಿಗೂ ಸೇರಿಲ್ಲ. ನಮ್ಮೂರಿನ ಸಾಹಿತಿ ಕಣ್ರಿ. ಕವಿ ಅವನು. ಅದಕ್ಕೇ ಅವನ್ನ ನಮ್ಮೋನು ಅಂತ ಎಲ್ಲಾ ಗೌರವಿಸ್ತಾರೆ. ಅವನು ಅದೇನು ಬರೆದಿದ್ದಾನೋ ನಂಗೂ ಗೊತ್ತಿಲ್ಲ. ಆದರೂ ಅವನ್ನ ಗೌರವಿಸಿ ನಾವು ಮಾಡೊ ಅನ್ಯಾಯಕ್ಕೆಲ್ಲಾ ಪ್ರಾಯಶ್ಚಿತ ಮಾಡ್ಕೋತೀವಿ ಅಂತ ನನ್ನ ಹಾಗೆ ಎಲ್ರೂ ಒಳಗೊಳಗೇ ನಂಬಿಕೊಂಡಿದಾರೆ. ಅವನ್ನ ಓದದೇ ಇರೋರೂ ಅವನ್ನ ನೋಡದೇ ಇರೋರು ಎಲ್ರೂ ಕೂಡ. ಇದೊಂದು ನಂಬಿಕೆ. ಮೂಢನಂಬಿಕೆ ಅಂತನಾದ್ರು ಅನ್ನಿ. ನಮಗೆ ಗೊತ್ತಿಲ್ದಂಗೆ ನಮಗೆಲ್ಲಾ ಬಂದು ಬಿಟ್ಟಿದೆ."

"ಹಾಗಾದರೆ ಇಂಥ ಅನಾಚಾರಾನೆಲ್ಲ ನಾನು ಪ್ರಿನ್ಸಿಪಾಲಾಗಿ ಕಣ್ಣಿಂದಾ ನೋಡಿಕೊಂಡು ಹೇಗಪ್ಪಾ ಇರಲಿ!" ಎಂದು ದೈನ್ಯದಿಂದ ಒದರಿದ ವೆಂಕಟ್ರಾಯ.

"ನೀವೀಗ ಅವರ ಮೇಲೆ ಕ್ರಮ ತಗೊಂಡ್ರೋ ಆವರ ಗುಂಪೆಲ್ಲಾ ನಮ್ಮ ವೆಂಕಟೇಶ್ವರ ದೇವಸ್ಥಾನದೋರಿಗೆ ವಿರೋಧ ಆಗ್ತಾರೆ. ಆಮೇಲೆ ಸುಲೇಮಾನ್ ಸಾಬಿಗೆ ಅವರನ್ನ ತಮ್ಮ ಕಡೆ ಮಾಡ್ಕೊಳ್ಳೋದು ಸುಲಭ. ಅವರೂ ತಮ್ಮ ಕಡೆ ಆದರೆ ಸಾಬರಿಗೆ ತಾಲ್ಲೂಕು ಬೋರ್ಡು ನುಂಗೋದು ಸುಲಭ. ಈಗಾಗ್ಲೇ ಹರಿಜನರನ್ನ ಸೇರಿಸ್ಕೊಳ್ಳೊದಕ್ಕೆ ಎಲ್ಲ ಸಿದ್ದ ಮಾಡಿದಾರೆ!"

"ನಂಗೇನೂ ತೋಚುತ್ತಾ ಇಲ್ಲಾ ಆಚಾರ್ರೆ. ನೀವೇ ಏನಾದ್ರೂ ದಿಕ್ಕು ತೋರಿಸಬೇಕು!" ಎಂದು ಕಿಂಕರ್ತವ್ಯಮೂಢನಾಗಿ ಪ್ರಿನ್ಸಿಪಾಲ್ ವೆಂಕಟರಾಯ ಕುಕ್ಕರಿಸಿದ.

"ಈ ಆಚಾರಿ ತಲೆ ಇನ್ನೂ ಖಾಲಿ ಆಗಿಲ್ಲ ವೆಂಕಟರಾಯರೆ. ಈ ಪರಿಸ್ಥಿತಿ ನಿಮಗೆ ನಿಜವಾಗ್ಲೂ ಒಳ್ಳೇದಕ್ಕೆ ಬಂದಿರೋದು. ಮುಖ್ಯ ನಾವು ನೀವು ಎಲ್ಲಾ ಸ್ವಲ್ಪ ಚಾತುರ್ಯ ತೋರಿಸಬೇಕು.

ಆ ಸಾಬರ ಹುಡುಗನ್ನ ಹಿಂದೂ ಜಾತಿಗೆ ಸೇರ್ಕೊಳ್ಳೋ ಹಾಗಿದ್ರೆ



ಒಪ್ತೀವಿ ಅಂತ ಕೃಷ್ಣೇಗೌಡರ ಕೈಲಿ ಹೇಳಿಸಬೇಕು. ಮೋಹಾಂಧಕಾರದಲ್ಲಿರ್ತಾನೆ ಆ ತುರುಕು ಮುಂಡೇಗಂಡ. ಹುಡುಗೀ ಸಿಕ್ಕರೆ ಸಾಕಂತ ಎಲ್ಲಕ್ಕೂ ಆಗಲಿ ಅಂತಾನೆ! ಆಮೇಲೆ ಸುಲೇಮಾನ್ ಬೇರಿ ಕಡೆಯೋರು ಸಾಬರನ್ನ ಮತಾಂತರ ಮಾಡೋದಕ್ಕೆ ಮೊದಲೇ ನಾವು ಸ್ವಾಮಿಗಳನ್ನ ಕರೆಸಿ ಅವನ್ನ ಗಂಗಾಜಲದಿಂದ ಶುದ್ಧಿ ಮಾಡಿ ಹಿಂದೂ ಮತಕ್ಕೆ ಸೇರಿಸಿಬಿಡಬೇಕು. ಸಾಬರೆ ಹಿಂದೂ ಧರ್ಮ ಸ್ವೀಕರಿಸ್ತಿದಾರೆ ಅಂತ ಗುಲ್ಲು ಹಬ್ಬಿಸಿ ಬಿಡಬೇಕು. ಏನಂತೀರ" ಎಂದು ತನ್ನ ಅಪೂರ್ವ ಪ್ರತಿಭೆಯನ್ನು ಆಚಾರಿ ಪ್ರದರ್ಶಿಸಿದ.

"ಹಿಂದೂ ಧರ್ಮದ ಪ್ರಕಾರ ಹೇಗಾಗುತ್ತೆ ಆಚಾರ್ರೆ" ಎಂದು ಪ್ರಿನ್ಸಿಪಾಲ್ ಕೊಂಕು ತೆಗೆದ.

"ಇದ್ಯಾವ ತರ್ಲೆ ಹಿಂದೂಧರ್ಮ ರೀ! ಈಗ ಈ ಸಾಬರನ್ನ ಮಟ್ಟ ಹಾಕೋಣ. ಆಮೇಲೆ ಹಿಂದೂ ಧರ್ಮ ವಿಚಾರಿಸಿಕೊಳ್ಳೋಣ. ಅದಕ್ಕೆಲ್ಲಾ ಬೇಕಾದರೆ ಆ ಸ್ವಾಮಿಗಳು ತಲೆ ಕೆಡಿಸಕೊಳ್ಳಲಿ. ಯಾರದೋ ಹುಡುಗಿ ಯಾರದೋ ಹುಡುಗ! ನಂಗೇ ನಿಮಗೆ ಏನಾಗಬೇಕಿದೆ. ಸಾಬರು ಬಿಟ್ಟ ಬಾಣ ಅವರಿಗೇ ತಿರುಗಿಸಿಬಿಡಬೇಕು. ಸಾಬ್ರೆ ಹಿಂದೂಧರ್ಮಕ್ಕೆ ಸೇರ್ತಿದಾರಂತ ಹಬ್ಬಿಸಿಬಿಡಬೇಕು. ಧೈರ್ಯ ಇಲ್ಲದೋರ್ನ ಧರ್ಮ ರಕ್ಷಣೆ ಮಾಡುತ್ತೇನ್ರೀ" ಎಂದು ಆಚಾರಿ ಹೇಳಿದ. ಇದ್ದಕ್ಕಿದ್ದಂತೆ ಪ್ರಿನ್ಸಿಪಾಲರಿಗೆ ಜ್ಞಾನೋದಯವಾದಂತಾಯ್ತು. ಆಚಾರಿ ಆಧುನಿಕ ಶಂಕರಾಚಾರ್ಯನಾಗಿ ಕಂಡ.

"ಕರೆಕ್ಟ್, ನೀವು ಹೇಳೋದು ಆಚಾರ್ರೆ! ನಾವ್ಯಾಕೆ ಶಿಸ್ತಿನ ಕ್ರಮಾಂತ ಯಾರನ್ನಾದರೂ ಮೈಮೇಲೆ ಹಾಕ್ಕೋಬೇಕು. ಅವಳುಂಟು ಅವನುಂಟು. ಬಂದಿದ್ದು ಅನುಭವಿಸ್ತಾರೆ" ಎಂದು ವೆಂಕಟ್ರಾಯ ತೀರ್ಮಾನಕ್ಕೆ ಬಂದ.

"ಇದು ನೋಡಿ ಬುದ್ವಂತಿಕೆ ಲಕ್ಷಣ. ಗೋಡಾ ಹೈ! ಮೈದಾನ್ ಹೈ! ಏನಂತೀರ" ಎಂದು ಆಚಾರಿ ಅಲ್ಲಿಂದ ಕಾಲ್ಕಿತ್ತ, ಕೃಷ್ಣೇಗೌಡನ ಮಂಡಿ ಕಡೆಗೆ.

ಆಚಾರಿಗೆ ಹೆಂಗಸರ ಜಾಡು ಮೂಸಿಕೊಂಡು ತಿರುಗೀ ತಿರುಗಿ ತನ್ನದೇ ಆದ ಜೀವನದರ್ಶನ ಒಂದು ಸಿದ್ದಿಸಿತ್ತು. ಅವನೂ ಹೆಚ್ಚು ಕಡಿಮೆ ಪಕ್ಕಾ ವಿಚಾರವಾದಿಯಾಗಿ ಯಾವುದಾನ್ನೂ ತನ್ನ ಉಪಯೋಗಕ್ಕೆ ಬಳಸಿಕೊಳ್ಳುವುದರಲ್ಲಿ ನಿಷ್ಣಾತನಾಗಿದ್ದ. ಅವನು ಸಾಬರ ಬಗ್ಗೆಯೂ ಹಿಂದೂಗಳ ಬಗ್ಗೆಯೂ ವಾಸ್ತವವಾಗಿ ನಿರ್ಲಿಪ್ತನಾಗಿದ್ದು. ಸುಲೇಮಾನ್ ಬೇರಿಯನ್ನು ನಾಶಮಾಡುವುದೊಂದೇ ಅವನ ಗುರಿಯಾಗಿತ್ತು. ಅದಕ್ಕಾಗಿ ಅವನು ವೆಂಕಟೇಶ್ವರ ಭಕ್ತರನ್ನು ಉಪಯೋಗಿಸುತ್ತಿದ್ದ. ಇದಕ್ಕೇನು ಕಾರಣವೆಂದು ಕೃಷ್ಣೇಗೌಡನಿಗೆ ಗೊತ್ತಾಗಿತ್ತು.

ಕೃಷ್ಣೇಗೌಡನ ಮಂಡಿಯಲ್ಲಿ ಗಿರಾಕಿಗಳ್ಯಾರೂ ಇರಲಿಲ್ಲ.

" ವಿಷ್ಯಾ ತಿಳಿತಾ ಆಚಾರಿ?" ಎಂದ ಗೌಡ.

"ತಿಳೀತಯ್ಯ. ತಿಳ್ಕೊಂಡೇ ಬಂದೆ."

"ನನ್ನ ಹೊಟ್ಟೇಗೆ ಕೊಳ್ಳಿ ಇಟ್ಟಳಲ್ಲಯ್ಯಾ ನನ್ನ ಮಗಳೂ!"

"ನೋಡೂ ಇದನ್ನೇ ಅನ್ನೋದು ವಿಧಿಲೀಲೆ ಅಂತ."

"ಏನ್ಮಾಡ್ಲೊದು! ಅವರಿಬ್ಬರನ್ನೂ ಕತ್ತರಿಸಿ ಕೊಂದೇ ಬಿಡ್ತಿದ್ದೆ. ಆ ಜಯರಾಮ್ ಹತ್ರ ಹೋಗಿ ಹೇಳ್ದೆ. ಆತ ಏನೋ ನಾಲ್ಕು ಮಾತು ಹೇಳಿದ. ಏನೋ ಒಂಥರಾ ಮನಸ್ಸಿಗೆ ತಾಗಿತು. ನಾನೂ ನಾಳೆ ಸಾಯೋವನೆ, ಯಾಕೆ ಇರೋರಿಗೆ ತೊಂದ್ರೆ ಕೊಡ್ಲಿ ಅನ್ನಿಸ್ತು."

"ಸರಿಯಪ್ಪಾ ಸಾಯೋವರೆಗೂ ನಾವು ಇರೋರೆ ತಾನೇ."

"ಏನಾದರೂ ಸತ್ತುಕೊಳ್ಳಲಿ ಕಲ್ಲು ಮನಸ್ಸು ಮಾಡಿಕೊಂಡಿರ್ತೀನಿ ಅಂತ ಜಯರಾಮನಿಗೆ ಹೇಳಿ ಬಂದ್ಬಿಟ್ಟೆ."

"ಏನಂದೆ? ಏನಾದರೂ ಸತ್ತುಕೊಳ್ಳಲಿ ಅಂತ ಸುಮ್ನಿರೋದು? ಸಾಬರ ಉಮೇದು ಎಲ್ಲಿಗೆ ಹೋಗುತ್ತೆ ಗೊತ್ತಾ! ಸುಲೇಮಾನ್ ಬೇರಿ ನಿನ್ಮಗಳಿಗೆ ಬುರುಖಾ ಹಾಕ್ಸಿ ನಿನ್ಕಣ್ಣೆದುರಾಗಿ ಮೆರವಣಿಗೆ ಮಾಡ್ತಾನೆ" ಆಚಾರಿ ಹೇಳಿದ.

ಮತ್ತೆ ಕೃಷ್ಣೇಗೌಡನ ಕಣ್ಣೆದುರು ಅನೇಕ ಭಯಾನಕ ದೃಶ್ಯಗಳು ಒಂದೊಂದಾಗಿ ಸುಳಿದು ಕಣ್ಣಲ್ಲಿ ನೀರಾಡತೊಡಗಿತು.

"ಆಚಾರಿ! ನೀನೂ ನನ್ನ ಹೊಟ್ಟೆಗೆ ಕೊಳ್ಳಿ ಇಡೋದಕ್ಕೆ ಬಂದ್ಯೇನೋ! ನೀನು ಸುಲೇಮಾನ್ ಬೇರಿ ಮೇಲೆ ವಿಷ ಕಾರೋದು ಯಾಕಂತ ನನಗೆ ಗೊತ್ತು."

"ಕರೆಕ್ಟ್, ನಿನ್ನ ಹತ್ರ ನನಗೇನಯ್ಯ ಗುಟ್ಟು. ಆ ಸೂಳೇಮಗ ನಾಲ್ಕಾರು ಜನ ಪುಂಡರನ್ನ ಜಮಾತ್‌ನೋರು ಅಂತ ಇಟ್ಕೊಂಡು ಇಲ್ಲೊಬ್ಬ ರಸಿಯಾ ಅಂತ ಇದ್ಲು. ಚಿನ್ನದಂತ ಹೆಂಗ್ಸು. ಅವಳನ್ನು ಊರು ಬಿಟ್ಟು ಓಡಿಸಿದ. ಆ ಕಾಫರ್ ಸೂಳೇಮಗನ ಹತ್ರ ಮಲಗ್ತೀಯ? ಮಸಿದಿಗೆ ಪಂಚಾಯ್ತಿ ಹಾಕ್ತೀವಿ ಅಂತ ಹೆದರಿಸಿ ಊರು ಬಿಡಿಸಿದ. ಅದಕ್ಕೆ ಅವನ ಮೇಲೆ ರೊಚ್ಚು ತೀರಿಸ್ತಿದೀನಿ! ಸರೀನಾ. ಅವನ ಹಣದ ಬಲ ಹೆಚ್ಚೋ ನನ್ನ ಬುದ್ಧಿ ಬಲ ಹೆಚ್ಚೋ ತೊರಿಸ್ತೀನಿ. ಇರ್ಲಿ. ನೀನು ಸ್ವಂತ ವಿಷ್ಯ ಎತ್ತಿದಿಯಲ್ಲಾ ಅದಕ್ಕೇ ಕೇಳ್ತೀನಿ. ನಿನಗೇನಯ್ಯಾ ಸಾಬರ ಮೇಲೆ ದ್ವೇಷ! ನಿನ್ನ ತೋಟಕ್ಕೆ ಒಬ್ಬ ನಾಜರತ್ ಅಂತ ಬರ್ತಿದ್ದಲ್ಲಾ! ಮುಚ್ಚುಮರೆ ಯಾಕೆ? ಅವಳಿಗೇನಾದರೂ ಬೇರೆ ತರ ಇತ್ತೋ ನಿನ್ನ ಹೆಣ್ತೀ



ತರಾನೆ ಇತ್ತೋ?"

"ಥುತ್‌ತೇರಿ ಈಗ್ಯಾಕೋ ಅದೆಲ್ಲಾ."

"ಅಲ್ಲಾ ಹೇಳು! ನಿಂಗೂ ಸಾಬರ ಮೇಲೇನಿದೆ? ಎಲ್ರಿಗೂ ಇರೋದೇ ಅವರಿಗೂ ಇರೋದು. ನೀನು ಸುಲೇಮಾನ್ ಬೇರೀನ ಮುರಿ ಬೇಕಂತಿರೋದು ಯಾಕೆ? ನಿನ್ನ ಮಂಡಿ ಎದುರು ಅವನು ಮಂಡಿ ತೆರೀತಾನೆ. ತಾಲ್ಲೂಕು ಬೋರ್ಡಲ್ಲಿ ನಿನ್ನ ವಿರುದ್ಧ ನಿಲ್ತಾನೆ! ಅಲ್ವಾ. ಹಂಗೇ ನಾನೂ."

"ಸರಿಯಪ್ಪಾ ನನಗೆ ಈಗ ಬಂದಿರೋ ತೊಂದ್ರೆ......"

"ತಡೀ! ಅಲ್ಲಿಗೆ ಬಂದೆ. ಏನಾದ್ರೂ ಹಾಳಾಗ್ಲಿ ಅಂತ ಸುಮ್ನಿರೋ ಕಾಲ ಅಲ್ಲ ಇದು. ಮಾರ್ಯಾದೆ ಉಳಿಸ್ಕೋಬೇಕು. ನಿನ್ಮಗಳು ಅವನ್ನ ಪ್ರೀತಿಸೋದಾದ್ರೆ ಹಿಂದೂ ಧರ್ಮಕ್ಕೆ ಅವನು ಸೇರಬೇಕು. ಅವನಿಗೂ ತಂದೆ ಇಲ್ಲ, ತಾಯಿ ಇಲ್ಲ. ನಿಂಗೂ ಗಂಡು ಮಕ್ಕಳಿಲ್ಲ! ಸುಮ್ಮನೆ ತುರುಕಾಂತ ತೆಗಳಿದರೆ ಏನು ಬಂತು. ನಮ್ಗಿರೋದೆ ಅವನಿಗೂ ಇರೋದು. ಏನಂದೆ ಮುಂಜಿ ಅಂತ ಮಾಡಿ ಚೂರು ಕುಯ್ದಿರ್ತಾರಷ್ಟೆ! ಸ್ವಾಮಿಗಳನ್ನ ಕರೆಸಿ ಗಂಗಾಜಲದಲ್ಲಿ ಅವನ್ನ ಶುದ್ಧಿ ಮಾಡಿ ಹಿಂದೂ ಮಾಡಿಬಿಡೋಣ. ಅವರೆಲ್ಲಾ ಒಂದಾನೊಂದು ಕಾಲದಲ್ಲಿ ಹಿಂದೂಗಳೇ ಅಲ್ವೇನಯ್ಯಾ. ನಾವೇ ಅವರನ್ನ ಅದ್ದೂರೀಲಿ ಮೆರ್ವಣಿಗೆ ಮಾಡಿ ಸಾಬರ ಬಾಣ ಸಾಬರಿಗೇ ಬಿಡೋಣ!"

"ಇವೆಲ್ಲಾ ಆಗೋ ಹೋಗೋ ವಿಷ್ಯಾನೇನೋ? ಈ ಬ್ರಾಮಣರು ಬೇರೆ ಹಿಂದೂ ಧರ್ಮಕ್ಕೆ ಇದೆಲ್ಲಾ ನಿಷಿದ್ದಾಂತ ತೆಗೀತಾರ!"

"ತುತ್ ಬ್ರಾಮರಂತೆ. ನರಿಗಳು! ಈಗೇನಾದರೂ ತಕ್ರಾರು ತೆಗೆದ್ರೆ ನಿಮ್ಮ ಹೆಂಡ್ರೆಲ್ಲಾ ಸುಲೇಮಾನ್ ಬ್ಯಾರಿ ಕಡೆಯೋರಿಗೆ ಬಸಿರಾಗ್ತಾರೆ ಅಂತ ಹೇಳಿದರೆ ಸಾಕು ಹೆದರಿ ಸತ್ತೊಗ್ತಾರೆ.!"

ಕೃಷ್ಣಪ್ಪನ ಮುಖದಲ್ಲಿ ಒಂದು ಚಿಂತೆಯ ವಿಷಾದದ ನಗೆ ಸುಳಿಯಿತು. ಆಚಾರಿ ಪರಿಸ್ಥಿತಿಯನ್ನು ತೀರಾ ಸರಳಗೊಳಿಸಿ ಪರಿಹಾರ ಹೇಳುತ್ತಿದ್ದಂತೆ ಕಂಡಿತು. ಜಾತಿಯ ಜಟಿಲ ತೊಡಕುಗಳು ಈ ಸಮಾಜದಲ್ಲಿ ಇನ್ನೂ ಆಳವಾಗಿ ಅನಂತವಾಗಿ ಬೇರೂರಿರುವುದನ್ನು ಕೃಷ್ಣಪ್ಪನ ಹೃದಯ ಹೇಳುತ್ತಿತ್ತು. ಅವನಿಗೆ ಜಯರಾಮನ ಪ್ರತಿಕ್ರಿಯೆಯೇ ಹೆಚ್ಚು ನಿಜವೆಂದೆನ್ನಿಸಿತು. ಆಚಾರಿ ಎಂದೋ ಹಿಂದೂ ಧರ್ಮಕ್ಕೂ ತಿಲಾಂಜಲಿ ಕೊಟ್ಟಿದ್ದು ಅವನ ಧರ್ಮವೇ ಬೇರೆಯಾಗಿತ್ತು. ಆದರೆ ಈ ಪರಿಸ್ಥಿತಿಯಲ್ಲಿ ಆಚಾರಿ ಎನ್ನುವ ಅವಧೂತ ತೋರಿಸಿದ ದಾರಿಯಲ್ಲದೆ ಬೇರೇನೂ ಅವನಿಗೆ ಕಾಣಲಿಲ್ಲ.

# ಅಧ್ಯಾಯ ೪೧

"ಜಯಂತಿಯ ಮುಖಕ್ಕೆ ಅಸಿಡ್ ಎರಚಿ ಖುರಾನಿಗೆ ದ್ರೋಹ ಮಾಡ್ತಿರೋ ನಮ್ಕಕ್ ಹರಾಮ್ ರಫೀನ ಮುಗಿಸಿ ಬಿಡಬೇಕಂತಿದಾರಂತೆ" ಎಂದು ವಾರ್ತೆ ತಗೋಂಡುಬಂದು ಬ್ರೀಡರ್ ಮಹ್ಮದ್ ರಾಮಚಂದ್ರನಿಗೆ ಹೇಳಿ, ಹೇಗಾದ್ರೂ ಮಾಡಿ ಅವರಿಬ್ಬರ್ನೂ ಉಳಿಸಬೇಕು, ನಾಲ್ಕು ದಿನ ಅವರು ಯಾರ ಕಣ್ಣಿಗೂ ಬೀಳದ ಹಾಗೆ ಮಾಡಬೇಕು ಎಂದು ಕೇಳಿಕೊಂಡ. "ಆ ಇಬ್ಬರು ಹುಡುಗ್ರು ಪ್ರೀತಿಸ್ತೀವಿ ಅಂದುಕೊಂಡಿದ್ನೇ ದೊಡ್ಡಾಮಾಡಿ, ದೇವ ಸ್ಥಾನದ ಗುಂಪು ಅವನ್ನ ಮತಾಂತರ ಮಾಡಿ ಹಿಂದು ಧರ್ಮಕ್ಕೆ ಸೇರಿಸ್ತೀವಿ ಅಂತ ಹೇಳ್ಕೊಂಡು ಓಡಾಡ್ತಿದಾರೆ. ಅದಕ್ಕೆ ಸಾಬರ ಕೇರಿಯವರೆಲ್ಲ ಮತಾಂತರ ಮಾಡ್ಲಿ ಬೋಳಿಮಕ್ಳು! ಅವರ ಬಾಯಿಗೆ ದನದ ಮಾಂಸ ಹಾಕಿ ಜಾತಿಕೆಡಿಸ್ತೀವಿ ಅಂತ ಮಾತಾಡ್ತಿದಾರೆ. ಇವತ್ತು ನಾಳೆ ಒಳಗೆ ದೊಂಬಿ ಗ್ಯಾರಂಟಿ. ಹೊಡೆದಾಡಿಕೊಳ್ಳೋರು ಹೊಡೆದಾಡಿಕೊಳ್ಳಲಿ. ಅವರಿಬ್ಬರ್ನೂ ಹೇಗಾದ್ರೂ, ಬಚಾವ್ ಮಾಡಬೇಕು" ಎಂದು ಭಯ ಕಳವಳದಿಂದ ಹೇಳಿದ ಮಹಮದ್.

"ನಿಂಗ್ಯಾರು ಹೇಳಿದರು?" ರಾಮಚಂದ್ರ ಕೇಳಿದ.

"ನೋಡು ರಾಮಚಂದ್ರ ಇದನ್ನ ಯಾರಿಗೂ ಹೇಳಬೇಡ. ನಮ್ಮ ಸಂಶೋಧನ ಕೇಂದ್ರದಲ್ಲಿ ಇದ್ದ ಸಲ್ಫ್ಯೂರಿಕ್ ಆಸಿಡ್ ಕಳುವಾಗಿದೆ. ನಮ್ಮ ಸಂಶೋಧನ ಕೇಂದ್ರದ ಗೌಸ್ ಹೇಳಿದ. ಸುಲೇಮಾನ್ ಬೇರಿ ಕಡೆಯೋರು ಈ ಕೆಲಸ ಮಾಡಿರೋದಂತೆ. ಯಾರು? ಏನು? ಅಂತ ತನಿಖೆ ಮಾಡೊದಕ್ಕೆ ಮಾತ್ರ ಈಗಲೇ ಹೋಗಬೇಡಿ. ಪೋಲೀಸರಿಗೂ ಕೊಡಬೇಡಿ. ಯಾಕಂದ್ರೆ ಅವರನ್ನೆಲ್ಲಾ ಖತಂ ಮಾಡೋದಕ್ಕೆ ರೆಡಿಯಾಗಿದ್ದಾರೆ. ನೀವು ಮೊದಲು ಅವರಿಬ್ಬರನ್ನೂ ಬಂದೋಬಸ್ತ್ ಮಾಡಿ. ಮಿಕ್ಕಿದ್ದು ನಿಧಾನಕ್ಕೆ ನೋಡಿಕೊಳ್ಳೋಣ" ಎಂದು ಹೇಳಿದ ಮಹಮದ್ ಧ್ವನಿ ಕಳವಳದಿಂದ ನಡುಗುತ್ತಿತ್ತು.

ರಾಮಚಂದ್ರನಿಗೂ ಕಳವಳ ಆರಂಭವಾಯ್ತು. ಈ ಇಬ್ಬರು ಹುಡುಗರ ಪ್ರೀತಿಯನ್ನೇ ಹೇಗೆ ಎರಡು ಗುಂಪುಗಳೂ ತಮ್ಮ ರಾಜಕೀಯಕ್ಕೆ ಉಪಯೋಗಿಸತೊಡಗಿವೆ ಎಂದು. ಈಗಲೇ ಮದುವೆ ಮಾಡೋದಕ್ಕೆ



ತವಕಗೊಂಡಿರೋ ಹಿಂದೂಗಳನ್ನು ನೋಡಿ ಹೇಸಿಗೆಯಾಯ್ತು. ಜಯಂತಿಯ ಸುಂದರ ಮುಖಕ್ಕೆ ಆಸಿಡ್ ಎಸೆಯೋದಕ್ಕೆ ತಯ್ಯಾರಿರುವ ಮುಸ್ಲಿಮರ ಬಗೆಗೆ ವಾಕರಿಕೆ ಬಂತು. ತಡಮಾಡಿದರೆ ತೊಂದರೆಯಾದೀತೆಂದು ರಮೇಶನನ್ನು ಕರೆಸಿ ಅವರಿಬ್ಬರನ್ನೂ ಎಲ್ಲಾದರೂ ಅವಿಸಿಟ್ಟು ಬಿಡು. ಜಯಂತಿ ಬಗ್ಗೆ ರೋಷಗೊಂಡಿರುವ ಅವರ ತಂದೆ ಇವನ್ನು ಉಪೇಕ್ಷೆ ಮಾಡುವುದು ಖಂಡಿತ. ನಾವೇ ಜವಾಬ್ದಾರಿ ತಗೋಬೇಕಾಗಿದೆ ಎಂದು ತಿಳಿಸಿದ. ರಮೇಶ ರೋಷಾವೇಶದಲ್ಲಿ "ಅದ್ಯಾವ ನನ್ಮಗ ಅವರ ಮೈ ಮುಟ್ತಾನೆ ನೋಡ್ಕೋತೀನಿ ಸಾರ್" ಎಂದು ಮೊದಮೊದಲು ಕೂಗಾಡಿದರೂ ಕೊನೆಗೆ ವಿವೇಕ ತಂದುಕೊಂಡು ಸಮ್ಮತಿಸಿದ. ಆದರೆ ಇದಕ್ಕೆ ರಫಿಯನ್ನು ಒಪ್ಪಿಸುವುದೇ ಕಷ್ಟ. ಅವನ್ನ ಇಲ್ಲಿಗೆ ಕರ್ಕೊಂಡು ಬರ್ತೀನಿ ನೀವೇ ಒಂದು ಮಾತು ಹೇಳಬೇಕು" ಎಂದ. ರಾಮಚಂದ್ರ ಜಯಂತಿಗೂ ರಫಿಗೂ ಹೇಳಿ ಒಪ್ಪಿಸುವ ಜವಾಬ್ದಾರಿ ಹೊತ್ತುಕೊಂಡ.

ಜಯರಾಮನಿಗೆ ಈ ವಿಷಯ ತಿಳಿಸೋದಕ್ಕೆ ಅವನ್ನ ಹುಡುಕಿಕೊಂಡು ಹೊರಟ, ಯಾರೋ ಅವನು ಸಂಶೋಧನ ಕೇಂದ್ರಕ್ಕೆ ಹೋಗಿದ್ದಾನೆ ಎಂದರು. ರಾಮಚಂದ್ರ ಅಲ್ಲಿಗೆ ಹೋದಾಗ ಜಯರಾಮ ಪಾಟೀಲರ ಕೋಣೆಯೊಳಗೆ ಅಂಗಾಡಿ ಹೆಗ್ಡೆ ಸಿದ್ದಪ್ಪ ಇವರೊಡನೆ ಪಾಟೀಲರ ಜೊತೆ ಹರಟುತ್ತಾ ಕುಳಿತಿದ್ದ. ಪಾಟೀಲರು ಹೆಗ್ಡೆಗೆ ನಾಳೆ ಪೋಲೀಸ್ ಠಾಣೆಗೆ ಹೋಗಿ ಆಸಿಡ್ ಕಳುವಾಗಿರೊದರ ಬಗ್ಗೆ ಒಂದು ದೂರು ಕೊಟ್ಟು ಮುಂದಿನ ಪರಿಣಾಮಗಳ ಬಗ್ಗೆ ಜಾಗರೂಕತೆಯಿಂದ ಇರುವಂತೆ ತಿಳಿಸೆಂದು ಹೇಳುತ್ತಿದ್ದರು. ಮಾರನೇ ದಿನ ಬೆಳಿಗ್ಗೆ ಗೋಸಾಯಿಬಾಬು ತಿಳಿಸಿದಂತೆ ಸಿದ್ದಪ್ಪ ಅಂಗಾಡಿ ಪಾಟೀಲರು ಮೂರು ಜನವೂ ಮಸೀದಿ ಹತ್ತಿರ ಅವನಿಗಾಗಿ ಕಾಯಬೇಕೆಂದು ಆಗಲೇ ತೀರ್ಮಾನವಾಗಿತ್ತು. ಅಷ್ಟರಲ್ಲಿ ರಾಮಚಂದ್ರ ಅಲ್ಲಿಗೆ ಬಂದ. ಮಹಮದ್ ಅವನಿಗೆ ತಿಳಿಸಿದ್ದನ್ನೆಲ್ಲಾ ತಿಳಿಸಿದೆ.

ಪಾಟೀಲರು "ಓಹ್ಹೋ ಹೀಗೋ ಸಮಾಚಾರ? ನೋಡಿ ಅಂಗಾಡಿ! ಏನು ಹೇಳಿದೆ ನಾನು, ನೀವು ಬಂದ ದಿನ. ಕೆಸರೂರಿನ ಕಾಡು ಹಾಳಾಗಿದೆ. ತೋಟ ಹಾಳಾಗಿದೆ. ಸಮಾಜ ಹಾಳಾಗಿದೆ, ಮನುಷ್ಯರ ಆತ್ಮಗಳೇ ಹಾಳಾಗಿವೆ. ಒಂದನ್ನ ಬಿಟ್ಟು ಇನ್ನೊಂದನ್ನೆ ಅಭ್ಯಾಸ ಮಾಡೋದಕ್ಕೆ ಆಗುತ್ತೇನ್ರಿ; ಎಲ್ಲಾ ಕುಸೀತಾ ಇದೆ. ಒಬ್ಬ ಹುಡುಗಾ ಹುಡುಗಿ ಪ್ರೀತೀನ ಉಪಯೋಗಿಸಿಕೊಂಡು ಇವರು ಸಾಬರಿಗೆ ಮುಯ್ಯಿ ತೀರಿಸೋದೆಂದರೇನು! ಅವರು ಇವರ ಎಳೇಮುಖಕ್ಕೆ ಆಸಿಡ್ಡು ಸುರೀತೀವಿ ಅನ್ನೋದೇನು! ಇಂಥೋರನ್ನ ಉದ್ಧಾರ ಮಾಡೋದಕ್ಕೆ ಯಾಕೆ ನಾನು ಕೆಸರೂರು ಹೈಬ್ರಿಡ್ ಪತ್ತೆ ಮಾಡೋದಕ್ಕೆ ಹೋಗಬೇಕು

ಹೇಳಿ?" ಎಂದರು.

"ಇದೆಲ್ಲಾ ಕರ್ತವ್ಯ ಸಾರ್. ಸಂಶೋಧನೆಯ ಮೌಲ್ಯ ಸಂಶೋಧನೆಯಲ್ಲಿಯೇ ಇರುತ್ತೆ. ನೀವು ಪತ್ತೆ ಮಾಡಿದರೂ ಅದರಿಂದ ಇವರು ಉದ್ಧಾರ ಆಗೋ ಯೋಗ ಇರಬೇಕಲ್ಲಾ!" ಜಯರಾಮ್ ಹೇಳಿದ.

"ಜೋಗಿಹಾಳರು ಇದಕ್ಕಾಗಿ ಪ್ರಾಣಾರ್ಪಣೆ ಮಾಡಿದಾರನ್ನೋದನ್ನ ನಾವು ಮರಿಬಾರ್ದು ಸಾರ್" ಎಂದ ಅಂಗಾಡಿ.

"ಏನು ಅಂಗಾಡಿ ಇನ್ನೂ ಜಯರಾಂ ಹೇಳಿದ ಕತೇನೇ ನೆಚ್ಚಿಕೊಂಡು ಮಾತಾಡ್ತಿರೋ ಹಾಗಿದೆಯಲ್ಲಾ? ಹೋಗ್ಲಿ ಬಿಡಿ. ಅದರಿಂದ ನಿಮಗೆ ಸ್ವಲ್ಪ ಚೈತನ್ಯ ಬರೋಹಾಗಿದ್ರೆ ಅದನ್ನೇ ನೆಚ್ಚಕೊಳ್ಳಿ. ಈಗ ನಡೀರಿ. ನಾಳೆ ಬೆಳಗಿನ ಝಾವ ಮಸೀದಿ ಹತ್ರ ಸೇರೋಣ. ಅಲ್ಲೇ ಕಾಯ್ತಿರಿ ಅಂದಿದ್ದಾನೆ ಗೋಸಾಯಿ ಬಾಬು" ಎಂದೆನ್ನುತ್ತಾ ಎದ್ದರು ಪಾಟೀಲರು.

ರಾಮಚಂದ್ರ ಅಂಗಾಡಿ ಜಯರಾಂ ಕೆಸರೂರಿನ ಕಡೆಗೆ ಮಾತಾಡಿಕೊಳ್ಳುತ್ತಾ ಹೊರಟರು. ದಾರಿಯಲ್ಲೇ ಕೆಸರೂರು ಕಾಲೇಜಿನ ಕೆಲವು ಹುಡುಗರು ಇದಿರಾಗಿ "ನಮಸ್ಕಾರ ಸಾರ್" ಎಂದರು ರಾಮಚಂದ್ರನಿಗೆ.

"ಕ್ಲಾಸಿಲ್ಲವೇ?" ಎಂದು ರಾಮಚಂದ್ರ ಕೇಳಿದ್ದಕ್ಕೆ ಕಾಲೇಜಿಗೆ ರಜ ಘೋಷಣೆ ಮಾಡಿದ್ದಾರೆಂದೂ, ಪೋಲೀಸರು ಹುಡುಗರಿಗೆ ಲಾಠಿ ಚಾರ್ಜು ಮಾಡಿದರೆಂದೂ ಹೇಳಿದ. ಗಾಬರಿಯಾದ ರಾಮಚಂದ್ರ ಏನಾಯ್ತು ಸರಿಯಾಗಿ ಹೇಳೆಂದು ಕೇಳಿದ.

ಕೆಸರೂರು ಕಾಲೇಜಿಗೆ ನಾಲ್ಕಾರು ಜನ ಅಪರಿಚಿತರು ಬಂದು ಜಯಂತಿ ಯಾರೆಂದು ಯಾರನ್ನೋ ವಿಚಾರಿಸುತ್ತಿದ್ದರಂತೆ. ಅದನ್ನು ಕೇಳಿ ಅಂಗಾರ ರಮೇಶ ಎಲ್ಲಾ ಅವರಿಗೆ ಹೊಡೆದರಂತೆ. ಅವರೂ ಹೊಡೆದಾಟಕ್ಕೆ ನಿಂತರು. ಇಂಗ್ಲಿಷ್‌ಗೌಡ ಓಡಿಹೋಗಿ ಪ್ರಿನ್ಸಿಪಾಲರಿಗೆ ಹೇಳಿದನಂತೆ. ಪ್ರಿನ್ಸಿಪಾಲರು ವೆಂಕಟೇಶ್ವರ ಭಕ್ತರ ಕಡೆ ಇದ್ದ ಹುಡುಗರಿಗೆ "ಏನು ನೋಡ್ತೀರ ಸಾಬರಿಗೆ ಮಟ್ಟಾ ಹಾಕೋದು ಬಿಟ್ಟು" ಎಂದು ಹೇಳಿ ತಕ್ಷಣ ರಜಾ ಘೋಷಣೆ ಮಾಡಿದರಂತೆ. ಹುಡುಗರೆಲ್ಲಾ ರಮೇಶ ಅಂಗಾರನಿಗೆ ಜಯಕಾರ ಹಾಕುತ್ತ ಹೊಡೆದಾಟದ ಹತ್ತಿರ ನುಗ್ಗಿದರಂತೆ. ಆಗಂತುಕರು ಗುಂಪು ನೋಡಿ ಓಡಿ ಹೋದರಂತೆ, ಆಮೇಲೆ ಹುಡುಗರು ಅಲ್ಲಿಂದ ಮುಂದುವರಿದು ಬಸ್‌ಸ್ಟ್ಯಾಂಡ್ ಪಕ್ಕದ ಸಾಬರ ಮಳಿಗೆಗಳನ್ನೆಲ್ಲಾ ಲೂಟಿಮಾಡಿ, ಹಣ್ಣು ತಿಂದು, ಮಳಿಗೆಗಳಿಗೆ ಬೆಂಕಿ ಇಟ್ಟರಂತೆ. ಪೋಲೀಸಿನವರು ಬಂದು ಲಾಠಿಚಾರ್ಜು ಮಾಡಿ ಹುಡುಗರನ್ನು ಚದುರಿಸದರಂತೆ.



ಆ ಹುಡುಗ ಒಂದೇ ಉಸಿರಲ್ಲಿ ಹೇಳಿ ಮುಗಿಸಿದ.

ಜಯರಾಮ ರಾಮಚಂದ್ರ ಈ ಸುದ್ದಿ ಕೇಳಿ ಸರಸರ ಕೆಸರೂರಿನ ಕಡೆ ಹೊರಟರು. ಕೆಸರೂರಿಗೆ ಬಂದಾಗ "ನಾಳೆ ಕೆಸರೂರು ಬಂದ್, ಪೋಲಿಸರ ದಬ್ಬಾಳಿಕೆಗೆ ಧಿಕ್ಕಾರ" ಎಂದು ಪ್ರಸಾರ ಮಾಡುತ್ತಾ ಹುಡುಗರು ರೋಷಾವೇಶದಿಂದ ಓಡಾಡುತ್ತಿದ್ದರು.

"ನೋಡಯ್ಯಾ ನನಗನಿಸುತ್ತೆ ಇದೆಲ್ಲದಕ್ಕೂ ನಿನ್ನ ಕಥೆಯೇ ಮೂಲ ಕಾರಣ ಅಂತ" ಎಂದ ರಾಮಚಂದ್ರ.

"ನಿನಗೆ ಹಾಗನ್ನಿಸಿದರೆ ಜೀವನ ಅದಕ್ಕೂ ಸಾಕ್ಷಿ ಒದಗಿಸೋದಕ್ಕೆ ಶುರು ಮಾಡುತ್ತೆ. ನಾನು ಬೇಕಾದಷ್ಟು ಕತೆ ಬರೆದಿದ್ದೇನೆ. ಯಾವುದ್ರಿಂದಾನೂ ಏನೂ ಆಗಿಲ್ಲ. ಹಾಗೆ ನೋಡಿದರೆ ಇಲ್ಲಿ ಇರೋರೆಲ್ಲರ ತಲೆ ಒಳಗೂ ಒಂದೊಂದು ಕತೆ ಇದೇ ಕಣೋ" ಎಂದ ಜಯರಾಮ.

"ತಡೀರಿ! ನಾಳೆ ನಿಮ್ಮ ಕಥೆಯ ಅಂತಿಮ ವಿಮರ್ಶೆ ಕೈಗೊಳ್ತಿದೀನಿ. ಅಲ್ಲೀವರೆಗೆ ತೀರ್ಮಾನ ಕೊಡಬೇಡಿ" ಎಂದು ಅಂಗಾಡಿ ಬಾಯಿಹಾಕಿದ.

## ಅಧ್ಯಾಯ ೪೨

"ಅಲ್ಲಾ ಸಾರ್ ನೋಡಿ ಯಾವ ತರ ಕಾಡು ನಾಶಮಾಡಿದಾರೆ, ಈ ಸುಲೇಮಾನ್ ಬ್ಯಾರಿ ಕಡೆಯೋರು. ನಾನು ಇವರ ಮೇಲೆ ಕತ್ತಿ ಮಸೀತೀನಿ ಅಂತಾರಲ್ಲ. ಇವರು ಕೊಡಲಿ ಮಸೆದಿದ್ದರ ಪರಿಣಾಮ ನೋಡಿ" ಎಂದು ಪಾಟೀಲರಿಗೆ ಮೈಲುಗಟ್ಟಲೆ ಸಮುದ್ರದೋಪಾದಿಯಲ್ಲಿ ಹಬ್ಬಿದ್ದ ಲಂಟಾನದ ಜಿಗ್ಗಿನ ಕಾಡನ್ನು ಸಿದ್ದಪ್ಪ ತೋರಿಸಿದ. ಚಾಪೆ ಹಾಸಿದಂತೆ ಎರಡಾಳು ದಪ್ಪಕ್ಕೆ ಲಂಟಾನದ ಜಿಗ್ಗು ಸರ್ವಾಂತರ್ಯಾಮಿಯಾಗಿ ಗಿರಿ ಕಂದರಗಳ ಏರುತಗ್ಗುಗಳನ್ನೆಲ್ಲಾ ವ್ಯಾಪಿಸಿ ಹೆಣೆದುಕೊಂಡು ಬಿದ್ದಿತ್ತು. ಆ ಲಂಟಾನದ ಜಿಗ್ಗಿನ ಕೆಳಗಿನ ಅರ್ಧಭಾಗವೆಲ್ಲಾ ಒಣಗಿ ಉದುರಿದ ಎಲೆಗಳು ಒಣಗಿದ ಕಸಕಡ್ಡಿಗಳಿಂದ ತುಂಬಿತ್ತು. ಮೇಲಿನರ್ಧ ಅದನ್ನೆ ಆಧಾರ ಮಾಡಿಕೊಂಡು ಹಬ್ಬಿದ ಲಂಟಾನದ ರಾಕ್ಸ್. ಪಾಟೀಲರು ಈ ಮಹಾ ವಿಪಿನ ಒಂದರ ಸ್ಮಶಾನವನ್ನು ಮೌನವಾಗಿ ವೀಕ್ಷಿಸಿದರು. ಲಂಟಾನದ ಎಲೆಗಳೊಳಗಿಂದ ಶುಂಠಿಪೆಪ್ಪರಮೆಂಟಿನ ಮಾದಕ ವಾಸನೆ ಹೊತ್ತ ತಂಗಾಳಿ ಇವರ ಬಳಿ ಸುಳಿದಾಡಿತು. ತುಂಬ ಹೊತ್ತು ಅದನ್ನು ವೀಕ್ಷಿಸಿ ನಿಟ್ಟುಸಿರುಬಿಟ್ಟು "ಬ್ಲಡಿಫೂಲ್ಸ್" ಎಂದು ತಮ್ಮಷ್ಟಕ್ಕೆ ತಾವೆ ಉದ್ಗರಿಸಿದರು.

"ಈ ಲಂಟಾನ ನಮ್ಮ ದೇಶದಲ್ಲಿ ಹಿಂದೆ ಇರಲೇ ಇಲ್ಲಾ ಸಿದ್ದಪ್ಪಾ. ಅದನ್ನು ಯಾರೋ ವಿದೇಶದವರು ಇಲ್ಲಿನ ಉದ್ಯಾನಕ್ಕೆ ಅಂತ ತಂದಿದ್ದು. ಅದು ಇಡೀ ದೇಶದಾದ್ಯಂತ ವ್ಯಾಪಿಸಿದೆ ಈಗ" ಎಂದು ಪಾಟೀಲರು ವಿವರಿಸುತ್ತಾ ಮಾತು ಮುಂದುವರಿಸಿದರು. "ಆದರೆ ನೋಡು ಪ್ರಕೃತಿ ನಡವಳಿಕೆಯಲ್ಲೂ ಒಂದು ಕ್ರಮ ಇದೆ. ಅದು ತನ್ನ ಗಾಯ ವಾಸಿಮಾಡಿಕೊಳ್ಳುವುದಕ್ಕೂ ವಿಧಾನ ಇದೆ. ಈ ಲಂಟಾನ ಇಲ್ಲದಿದ್ದರೆ ಇಲ್ಲಿ ಬೀಳೋ ಮಳೆಗೆ ಇವತ್ತು ಇಲ್ಲಿರೋ ಗುಡ್ಡಗಳ ಮಣ್ಣೆಲ್ಲಾ ತೊಳೆದುಹೋಗಿ ನಮ್ಮ ಬಯಲುಸೀಮೆಯ ತರ ಕಲ್ಲುಗುಡ್ಡಗಳು ನಿಂತಿರ್ತಿದ್ದವು."

"ಸರಿ ಆದರೆ ಎಂಥ ಕಾಡು ನಾಶ ಮಾಡಿ ಎಂಥ ಸ್ಮಶಾನ ನಿರ್ಮಿಸಿದ್ದಾರೆ ನೋಡಿ."

"ನೋ ನೋ. ಹೇಳ್ತೀನಿ ಕೇಳು. ಇಡೀ ಜೀವರಾಶಿ ಎಲ್ಲಾ ಸ್ಮಶಾನದಿಂದ್ಲೆ



ಉದ್ಭವಿಸಿದ್ದು. ಕುದಿಯೋ ಭೂಗೋಲದ ಬೆಂಕಿ ಉಂಡೆಯಿಂದ. ಈಗ ಲಂಟಾನ ಬಂದಿದೆಯಲ್ಲಾ ಅದು ಮಣ್ಣು ತೊಳೆದು ಹೋಗದ ಹಾಗೆ ಅದರ ಕಸಕಡ್ಡಿಗಳು, ಮಣ್ಣಿನ ಜೈವಿಕ ವಸ್ತುಗಳು ಸೂರ್ಯನ ಬಿಸಿಲಿಂದ ಸುಟ್ಟು ಹೋಗದ ಹಾಗೆ ನೋಡಿಕೊಳ್ತವೆ. ಅದರಡಿಯಿಂದಲೇ ಹೊನ್ನೆ ತೇಗ ನೇರಳೆ ಆಲ ಧೂಪ ಎಲ್ಲಾ ಮೊಳಕೆ ಒಡೆದು ಲಂಟಾನದ ಮುಳ್ಳಿನ ರಕ್ಷೆಯಲ್ಲಿ ಮೆಲ್ಲಗೆ ಅದರ ಮೇಲೆ ಪುಟಿಯುತ್ತವೆ. ನೋಡು ಈಗಾಗಲೇ ಅಲ್ಲೊಂದು ಇಲ್ಲೊಂದು ಕಾಣತೊಡಗಿವೆ. ಇವು ಮೇಲೆ ಬಂದು ಕೊಂಬೆಗಳಾಗಿ ಛತ್ರಿತೆರ ಬಿಚ್ಚಿಕೊಳ್ಳುತ್ತಲೂ ಕಾಡಿನ ನೆರಳು ಕೂಡಲಾರಂಭಿಸಿ ಲಂಟಾನ ನಶಿಸೋದಕ್ಕೆ ಆರಂಭವಾಗುತ್ತೆ. ಕೊನೆಕೊನೆಗೆ ಕಾಡಿಗೆ ಜಾಗ ಬಿಟ್ಟು ಲಂಟಾನ ವಿದಾಯ ಹೇಳುತ್ತೆ. ಆಮೇಲೆ ಆ ನೆರಳಲ್ಲಿ ಬರುವ ಗಿಡಗಳೇ ಬೇರೆ. ತರಗೆಲೆಗಳ ದಟ್ಟ ರಾಶಿಯಲ್ಲಿ ಕುಸಿದು ಬೀಳುವ ಲಂಟಾನವೂ ಸೇರಿ ಮಣ್ಣು ಫಲವತ್ತಾಗ್ತಾ ಹೋಗುತ್ತೆ. ನೀನು ಪರಿಸರ ರಕ್ಷಣೆಗೆ ತವಕಪಡ್ತಿರೋ ಹಾಗೇನೇ ಅನೇಕ ಅದೃಶ್ಯ ಶಕ್ತಿಗಳೂ ತವಕದಿಂದ ಕೆಲಸ ಮಾಡ್ತಿವೆ ಅನ್ನೋದನ್ನ ಮರೀಬೇಡಾ."

"ಆದರೆ ಮನುಷ್ಯ ಹೋಗಿ ಮನೆಕಟ್ಟಿಕೊಂಡು ಕುಳತೇಬಿಟ್ಟರೆ ಏನ್ಮಾಡೋದು ಸಾರ್? ಆ ಗೋಸಾಯಿಗಳಿಗೆ ಹಾದಿಹೋಕರಿಗೆ ಬೀದಿಹೋಕರಿಗೆ ಅಳತೆ ಮಾಡಿ ಜಾಗ ಕೊಟ್ಟು ಒಂದು ಓಟಿನ ಕಾಡನ್ನ ತಯಾರು ಮಾಡ್ತಿದಾರೆ ಸಾರ್. ಇದು ಒಂದು ರೋಗಗ್ರಸ್ತ ಸಮಾಜ ಸಾರ್."

"ಹಾಗೇ ಆದರೂ ನಮ್ಮ ಪಾಲಿಗೆ ಭೂಮಿ ಹಾಳಾಗುತ್ತದೆಯೇ ಹೊರತು ಅದರ ಪಾಲಿಗಲ್ಲ. ಈಗಾಗಲೇ ಪ್ರಕೃತಿ ಎಷ್ಟೊಂದು ಪ್ರಯೋಗ ಮಾಡಿದೆಯಯ್ಯಾ. ಎಷ್ಟೊಂದು ತರತರದ ಪ್ರಾಣಿಗಳೂ ಸಸ್ಯ ಸಮೂಹ ಈ ಭೂ ಮಂಡಲದ ಮೇಲೆ ಆಗಿಹೋದವು. ನಿನಗೇ ತಿಳಿದಂತೆ ಒಂದು ಕಾಲಕ್ಕೆ ಜಲಚರಗಳೂ, ಆಮೇಲೆ ಸರೀಸೃಪಗಳು, ಮಹೋರಗಗಳು, ಸಸ್ತನಿಗಳು, ಒಂದೆರಡೇ ಪ್ರಯೋಗವೇನಾಯ್ತು? ನಾವು ಇಲ್ಲಿ ಬದುಕೊಕ್ಕೆ ನಾಲಾಯಖ್ ಅಂತನ್ನಿಸಿದರೆ ನಾವೂ ಇಲ್ಲಿಂದ ನಿರ್ಗಮಿಸ್ತೀವಿ. ನಾಮಾವಶೇಷ ಆಗ್ತೀವಿ. ಆದರೆ ನಿಧಾನವಾಗಿ ಪ್ರಕೃತಿ ಇನ್ನೊಂದು ತರದ ಪ್ರಯೋಗಕ್ಕೆ ಕೈ ಹಾಕ್ತದೆ. ಮತ್ತೆ ಭೂ ಮಂಡಲದ ಸ್ಮಶಾನದಿಂದ್ಲೇ ಇನ್ನೇನೋ ಒಂದು ಚೈತನ್ಯ ಚಿಮ್ಮುತ್ತೆ ಅಷ್ಟೇ."

"ಗೋಸಾಯಿಗಳ ಓಟಿಗಾಗಿ ಈ ದೇವಸ್ಥಾನದ ಕಡೆಯೋರೆಲ್ಲಾ ಓಡಾಡ್ತಿದಾರಂತೆ ಸಾರ್! ಇದು ದೊಡ್ಡ ಅನಾಹುತಕ್ಕೆ ದಾರಿ."

"ಅದಿರ್ಲಿ! ಎಲ್ಲಯ್ಯಾ ಈ ಅಂಗಾಡಿ? ಗೋಸಾಯಿ ಬಾಬೂನ ಕರಕೊಂಡು

ಬರ್ತೀನಂತ ಹೋದೋನು ಇನ್ನೂ ಪತ್ತೆ ಇಲ್ಲ" ಎಂದು ಪಾಟೀಲರು ಕೇಳಿದರು.

ಸಿದ್ದಪ್ಪ ಪಾಟೀಲರು ಅಂಗಾಡಿ ಈ ಮೂರು ಜನ ಬಂದು ಬೆಳಗಿನಲ್ಲೇ ಗೋಸಾಯಿ ಬಾಬುಗೆ ಕಾದರು. ಆದರೆ ಗೋಸಾಯಿ ಬಾಬು ಸುಳಿವಿರದುದನ್ನು ನೋಡಿ ಪಾಟೀಲರು ಯಾರಾದರೂ ಹೋಗಿ ಕರೆದುಕೊಂಡು ಬನ್ನಿ ಎಂದರು. ಸಿದ್ದಪ್ಪ ತನಗೂ ಗೋಸಾಯಿಗಳಿಗೂ ಹಗೆತನ ಇರೋದರಿಂದ ಅಂಗಾಡಿಯೇ ಹೋಗಲಿ ಎಂದು ಅಂಗಾಡಿಗೆ ಗೋಸಾಯಿಗಳು ಬೀಡುಬಿಟ್ಟಿರೋ ಜಾಗದ ವಿವರಗಳನ್ನೆಲ್ಲಾ ತಿಳಿಸಿದ. ಅಂಗಾಡಿ ಹೋದನಂತರ ಅಂಗಾಡಿಯನ್ನು ಕಾಯುತ್ತಾ ಮಾತಾಡುತ್ತಾ ಇಬ್ಬರು ನಿಂತಿದ್ದರು. ಅಂಗಾಡಿ ಬರಲಿಲ್ಲ. ಬಿಸಿಲು ಧಗ ಧಗ ಏರತೊಡಗಿತು.

"ಅವರು ಯಾರೋ ಇಬ್ರು ನಾವು ಬಂದಾಗ ನಮ್ಮನ್ನ ತಿರುಗಿ ತಿರುಗಿ ನೋಡ್ತ ಮಸೀದಿ ಹಿಂದಕ್ಕೆ ಹೋದ್ರಲ್ಲಾ ಎಲ್ಲಿಗೆ ಹೋದರು? ಅಲ್ಲೇನಾದರೂ ದಾರಿ ಇದೆಯೋ? ನಾಲ್ಕು ಮಾರು ಹೋಗಿ ನೋಡೋಣ ನಡಿ. ಇಲ್ಲಿ ಈತರ ನಿಂತ್ಕೊಂಡು ಕಾಯ್ತಾ ಇದ್ರೆ ಜನ ಅನುಮಾನಿಸ್ತಾರೆ. ಮೊದಲೆ ಈ ಊರಿನಲ್ಲಿ ಜನಕ್ಕೆ ತಲೆ ಕೆಡ್ತಾ ಇದೆ" ಎಂದರು ಪಾಟೀಲರು. ಇಬ್ಬರೂ ಮಸೀದಿ ಹಿಂಭಾಗದಲಂಟಾನದ ಕಾಡಿನತ್ತ ನಡೆದರು.

ಅಂಗಾಡಿ ಸಿದ್ದಪ್ಪನ ನಿರ್ದೇಶನದ ಮೇರೆಗೆ ಕೆಸರೂರು ಪೇಟೆ ದಾಟಿಕೊಂಡು ಊರ ಹೊರವಲಯದಕ್ಕೆ ಹೋದ. ಅಲ್ಲಿ ಯಾರೂ ಇರಲಿಲ್ಲ. ಖಾಲಿ ಜಾಗ ಕಂಡಿತು. ಅಷ್ಟೇ ಅಲ್ಲ ಅಲ್ಲಿ ಯಾರೂ ಬೀಡುಬಿಟ್ಟಿದ್ದ ಕುರುಹೂ ಇರಲಿಲ್ಲ. ಹಾಗಾದರೆ ಸಿದ್ದಪ್ಪ ತಿಳಿಸಿದ ಜಾಗ ಇನ್ನೂ ಮುಂದಿರಬೇಕೆಂದು ದಾರಿಯಲ್ಲೇ ಮುಂದುವರಿದ. ಎಲ್ಲೂ ಯಾವ ಗೋಸಾಯಿಗಳ ಟೆಂಟಿನದೂ ಸುಳಿವಿರಲಿಲ್ಲ. ಹಾಗೇ ಅದೇ ದಾರಿಯಲ್ಲಿ ಮುನ್ನಡೆಯುತ್ತಲೇ ಹೋದ. ರಸ್ತೆಯಲ್ಲಿ ಬರುತ್ತದ್ದ ಯಾರೋ ಒಬ್ಬರನ್ನು ಕೇಳಿದ ಆತ "ಅಲ್ಲೇ ಹಾದಿನಲ್ಲಿ ನಿಮಗೆ ಕಾಣಲಿಲ್ಲವೇ?" ಎಂದು ಆಶ್ಚರ್ಯಪಟ್ಟು ಅಂಗಾಡಿಯೊಡನೆ ಹಿಂದಕ್ಕೆ ಬಂದು ಸಿದ್ದಪ್ಪ ಮೊದಲು ತಿಳಿಸದ ಜಾಗಕ್ಕೆ ಬಂದ. ಅಲ್ಲಿ ಜಾಗ ಖಾಲಿಯಾಗಿತ್ತು! ಆತನಿಗೆ ಆಶಾಭಂಗವಾದಂತಾಗಿ "ಓ ಎಲ್ಲಾ ಊರು ಬಿಟ್ಟು ಹೋಗಿದಾರ್ರಿ!" ಎಂದು ಅಂಗಾಡಿಗೆ ಹೇಳಿದ. ಅಂಗಾಡಿ ಅಪ್ರತಿಭನಾಗಿ ಆ ಖಾಲಿ ಜಾಗ ನೋಡುತ್ತಾ ನಿಂತ.

ಅವನಿಗೆ ಇದ್ದಕ್ಕಿದ್ದಂತೆ ಮೂರ್ಖನಾದೆ ಎಂದೆನ್ನಿಸಿತು. ಕೆಸರೂರು ಹೈಬ್ರೀಡ್ ನೋಡುವ ಅವಕಾಶ ತಪ್ಪಿದ್ದಕ್ಕಿಂತ ಹೆಚ್ಚಾಗಿ ಅವನಿಗೆ ಬೇಸರವಾಗಿದ್ದು ಮೆಜಿಶಿಯನ್ ಮುತ್ತು ಊರು ಬಿಟ್ಟು ನಿರ್ಗಮಿಸಿದ್ದು. ಜಯರಾಮನ ಕತೆಯ ಒಂದು ಮೂಲಾಧಾರ ತಪ್ಪಿ ಹೋದಂತಾಗಿ ಅವನು ಸಂಪೂರ್ಣ ದಿಕ್ಕು ತಪ್ಪಿದವನಂತೆ ದಾರಿಯಲ್ಲೇ ಕಿಂಕರ್ತವ್ಯಮೂಢಾನಾಗಿ ನಿಂತಿದ್ದ. ಪಕ್ಕದಲ್ಲಿ ನಿಂತಿದ್ದವನು, ಅಂಗಾಡಿ ಯೋಚನಾಕ್ರಾಂತನಾಗಿ ಅನ್ಯಮನಸ್ಕನಂತೆ ನಿಂತಿದ್ದನ್ನು ನೋಡಿ ಅವನ ಪಾಡಿಗೆ ಅವನು ಹೊರಟು ಹೋದ. ಅಂಗಾಡಿಗೆ ಎತ್ತ ಹೋಗಲೂ ಮನಸ್ಸು ಬರಲಿಲ್ಲ. ಕೆಸರೂರು ಹೈಬ್ರೀಡೂ ಇಲ್ಲ. ಪಾಟೀಲರ ಖೂನಿಯೂ ಇಲ್ಲ. ಆ ಲಂಟಾನದ ಶರಧಿಯಲ್ಲಿ ಧೂಪದ ಮರ ಹುಡುಕುವುದು ಇತರರಿಗೆ ಸಮುದ್ರದಲ್ಲಿ ಸೂಜಿ ಹುಡುಕಿದಂತೆ? ಇನ್ನು ಪಾಟೀಲರ ಕಾವಲು ಕಾಯುವ ಅಗತ್ಯವೂ ಇಲ್ಲ, ಪಾಟೀಲರಿಗೆ ಹೋಗಿ ಅವರು ನಿರ್ಗಮಿಸಿದ್ದಾರೆಂದು ತಿಳಿಸಬೇಕೆಂಬ ಅಗತ್ಯವೂ ಕಾಣಲಿಲ್ಲ. ಹೊರೆ ಇಳಿದವನಂತೆ ಅಂಗಾಡಿ ಹಗುರಹೆಜ್ಜೆಗಳನ್ನಿಡುತ್ತಾ ಕೆಸರೂರಿನತ್ತ ನಡೆದ. ಕೆಸರೂರು ಹೈಬ್ರೀಡ್ ಬಗ್ಗೆ ಒಂದು ರಿಪೋರ್ಟ್ ತಯ್ಯಾರುಮಾಡಿ ಅಂಚೆಗೆ ಎಸೆದು ಅಲೆಪ್ಪಿಗೆ ಬಸ್ಸು ಹತ್ತೋದೆಂದು ಚಿಂತಿಸಿದ. ಜೋಗಿಹಾಳರ ಸಾವಿನ ವಿಷಯವೇ ಸಂಪೂರ್ಣವಾಗಿ ಅವನ ತಲೆಯಿಂದ ಇದ್ದಕ್ಕದತೆ ಮರೆಯಾಯ್ತು.

ಕೆಸರೂರು ಸರ್ಕಲ್ಲಿನಲ್ಲಿ ಜಯರಾಂ, ರಾಮಚಂದ್ರ, ಹೆಗ್ಡೆ ಮೂರೂ ಜನ ಮಾತಾಡುತ್ತ ಬರುತ್ತಿದ್ದರು. "ಇದೇನ್ರೀ ಇಲ್ಲೇ ಠಳಾಯಿಸ್ತಾ ಇದ್ದೀರಾ?" ಎಂದು ಜಯರಾಮು ಕೇಳಿದ.

"ಜಯರಾಂ ನಿಮ್ಮ ಕತೆ ಸ್ವಲ್ಪ ಬದ್ಲಾಯಿಸಬೇಕು" ಎಂದ ಅಂಗಾಡಿ.

"ಬದಲಾಯಿಸೋ ಪ್ರಶ್ನೇನೇ ಇಲ್ಲ."

"ಇಲ್ಲಪ್ಪಾ, ಎಲ್ಲೋ ದಿಕ್ಕು ತಪ್ಪಿದೆ. ಆ ಕತೆಯ ಒಂದು ಪಾತ್ರವೇ ನಾಪತ್ತೆ!"

"ಅಂದರೆ ಅದರರ್ಥ ಅದು ಸಂಪೂರ್ಣ ಸುಳ್ಳು. ಮನುಷ್ಯ ಪ್ರಜ್ಞೆ ಸ್ವತಂತ್ರವೋ ಅಸ್ವತಂತ್ರವೋ ತಿಳಿಯೋದಕ್ಕೆ ಕಲಾಕೃತೀಲಿ ಸಾಧ್ಯವಿಲ್ಲ."

"ಹಾಗಾದರೆ ಅದು ಒಳ್ಳೇ ಕಲಾಕೃತಿ ಅಲ್ಲ."

"ಯಾಕಲ್ಲ, ಅದು ಒಳ್ಳೆ ಕತೆ ಅಲ್ಲದಿದ್ರೆ ಇಲ್ಲಿವರೆಗೆ ನಾವು ಅದನ್ನು ನಂಬಿಕೊಂಡು ಬೆನ್ನು ಹತ್ತಿ ಮೂರ್ಖರಾಗ್ತಿದ್ವ? ಅದಿರ್ಲಿ, ಏನಾಯ್ತು ಕತೆ ಹಾದಿ ತಪ್ಪೋದಕ್ಕೆ?"

ಗೋಸಾಯಿಗಳು ಊರುಬಿಟ್ಟು ಹೋಗಿದ್ದಾರೆ."

"ಹೋದರೆ ಹೋಗಲಿ, ಅವರ್ನ ಓಡಿಸಬೇಕಂತಾನೇ ಸಿದ್ದಪ್ಪ ಸರ್ಕಾರಕ್ಕೆ ಅರ್ಜಿ ಬರಕೊಂಡು ಕೂತಿದ್ದ."

"ಸರಿಯಪ್ಪ. ನಮ್ಮ ಕತೆ ಪಾತ್ರಗಳೆ ಮಿಸ್ಸಾಗಿ ಹೋದರೆ ಕತೆ ಮುಂದುವರಿಸೋದು ಹ್ಯಾಗೆ. ಅದಕ್ಕೇ ಸ್ವಲ್ಪ ಬದಲಾಯ್ಸಿ ಅಂದಿದ್ದು."

"ಅಂಗಾಡಿ, ಕಣ್ಮುಂದೆ ನಡೆಯೋದನ್ನ ಯಾವನು ಸರಿಯಾಗಿ ನೋಡೋದು ಕಲಿತುಕೊಳ್ಳೋದಿಲ್ಲವೋ, ಅವನಿಗೆ ಹಿಂದೇನಾಯ್ತೂಂತಾನೂ ಗೊತ್ತಾಗೋದಿಲ್ಲ. ಈ ಊರಿನಲ್ಲಿ ಎಲ್ರೂ ನಮ್ಮ ಥರ ಒಂದೊಂದು ಕತೆ ಕಟ್ಟಿಕೊಂಡು ವರ್ತಮಾನದಲ್ಲಿ ಸಾಕ್ಷ ಸಂಗ್ರಹಣೆ ನಡೆಸ್ತಿದ್ದಾರೆ" ಎಂದ ಜಯರಾಂ.

"ಅದಿರ್ಲಿ ಅಂಗಾಡಿ. ಕೆಸರೂರು ಹೈಬ್ರೀಡ್ ಕತೆ ಮುಗಿದ ಹಾಗೇನ?" ಎಂದ ಹೆಗ್ಡೆ.

"ಆ ಲಂಟಾನದ ಜಿಗ್ಗಿನೊಳಗೆ ಹೊಕ್ಕೋನು ಆಚೆ ಬರ್ತಾನೇನ್ರಿ. ಅದೊಂದು ಚಕ್ರವ್ಯೂಹ" ಎಂದ ಅಂಗಾಡಿ.

"ಹಾಗಾದರೆ ಪಾಟೀಲ್ರು."

"ಅಲ್ಲೇ ಮಸೀದಿ ಹತ್ರ ಕಾಯ್ತಿರ್ತಾರೆ. ಈಗ ಹೋಗಿ ಹೇಳಬೇಕು" ಎಂದ ಅಂಗಾಡಿ.

"ನಡೀರಿ ಇವತ್ತು ಕೆಸರೂರು ಬಂದ್. ನಮಗೂ ಕೆಲಸ ಇಲ್ಲ. ನಾವೂ ಬರ್ತೀವಿ" ಎಂದರು ಮೂವರೂ. ಅವರು ನಾಲ್ಕು ಹೆಜ್ಜೆ ಪೇಟೆಯೊಳಗೆ ನಡೆದಿದ್ದರು. ಅಷ್ಟರೊಳಗೆ ಢಮಾರ್ ಎಂದು ಮಸೀದಿ ಕಡೆಯಿಂದ ಶಬ್ದ ಕೇಳಿ ಬಂತು. ನಾಲ್ವರೂ ಗಾಬರಿಯಾಗಿ ಸರಸರ ಹೊರಟರು. ಅವರ ತಲೆಯೊಳಗೆ ಮೊನ್ನೆಯ ಶಬ್ದ ಮತ್ತು ಚರ್ಮ ಸುಲಿದ ವ್ಯಕ್ತಿಗಳೇ ಸುಳಿದಾಡುತ್ತಿದ್ದರು.

ಮಸೀದಿ ಹಸುರಿನ ನಡುವೆ ಬಿಸಿಲಿನಲ್ಲಿ ಬೆಳ್ಳಗೆ ನಿಂತಿತ್ತು. ದೂರದಿಂದ ಯಾರೂ ಅಲ್ಲಿ ಕಾಣಲಿಲ್ಲ. ಗಾಬರಿಯಾದ ಹೆಗ್ಡೆ "ಲೇ ಸಿದ್ದಪ್ಪಾ" ಎಂದು ಕೂಗಿದ. ಕಾಡಿನೊಳಗಿಂದ "ಓ ಬಂದ್ವು ಬಂದ್ವು, ಬನ್ನಿ ಬನ್ನಿ ಪಾಟೀಲರಿಗೆ ಏಟಾಗಿದೆ" ಎಂದು ಸಿದ್ದಪ್ಪ ಕೂಗಿದ್ದು ಕೇಳಿತು. ನಾಲ್ವರೂ ಇನ್ನಷ್ಟು ಗಾಬರಿಯಾಗಿ ಅತ್ತ ನುಗ್ಗಿದರು. ಅವರು ನೋಡುತ್ತಿದ್ದಂತೆ ಲಂಟಾನದ ಜಿಗ್ಗಿನೊಳಗೆ ಬಿಲದಂತಿದ್ದ ದಾರಿಯೊಂದರಿಂದ ಸಿದ್ದಪ್ಪನ ಹೆಗಲಿನ ಮೇಲೆ ಕೈ ಹಾಕಿಕೊಂಡು ಕುಂಟುತ್ತಾ ಪಾಟೀಲರು ಹೊರಬಂದರು. ಅವರ ಎಡಗಾಲೆಲ್ಲಾ ರಕ್ತಮಯವಾಗಿತ್ತು. ಸೊಂಟದಿಂದಲೂ ರಕ್ತ ಬರುತ್ತಿತ್ತು.

"ಅಯ್ಯೊಯ್ಯೋ ಏನಾಯ್ತೋ ಸಿದ್ದಪ್ಪ. ಏನ್ ಸಾರ್ ಇದೂ!" ಎನ್ನುತ್ತಾ ನಾಲ್ವರೂ ಬಳಿ ಸಾರಿದರು.

"ತಡೀರಿ ತಡೀರಿ ಗಾಬ್ರಿ ಮಾಡ್ಕೊಬೇಡಿ ಪಾದಕ್ಕೆ ಏಟಾಗಿದೆ. ಇಲ್ಲೆಲ್ಲಾ



ಬರೀ ಗೀರದ ಗಾಯ" ಎಂದು ಪಾಟೀಲರು ಧೈರ್ಯ ಹೇಳಿದರು! ಅಂಗಾಡಿ ಕರ್ಚೀಫ್ ತೆಗೆದು ಪಾಟೀಲರ ಕಾಲಲ್ಲಿ ರಕ್ತ ಸುರಿಯುವಲ್ಲಿಗೆ ಕಟ್ಟತೊಡಗಿದ.

ಸಿದ್ದಪ್ಪ ನಡೆದದ್ದನ್ನು ಹೇಳಿದ. ಅಂಗಾಡಿ ಬರುವುದು ತುಂಬಾ ಹೊತ್ತಾದುದರಿಂದ ಬೇಜಾರಾಗಿ ಇಬ್ಬರೂ ಇಲ್ಲೆಲ್ಲಾದರೂ ದಾರಿ ಇದೆಯೆ ಎನ್ನುತ್ತಾ ನಾಲ್ಕು ಹೆಜ್ಜೆ ಈ ಸುರಂಗ ಮಾರ್ಗದಲ್ಲಿ ಹೋದರಂತೆ! ಪಾಟೀಲರು ಎರಡು ಮಾರು ಮುಂದಿದ್ದರಂತೆ. ಪಾಟೀಲರ ಕಾಲಿನ ಬಳಿ ಒಂದು ಭಯಂಕರ ಆಸ್ಫೋಟನೆಯಾಯ್ತಂತೆ. ನೋಡುವಾಗ ಪಾಟೀಲರು ಮೈಕೈ ಎಲ್ಲಾ ರಕ್ತಮಯವಾಗಿ ಬಿದ್ದದ್ದರಂತೆ.

ಅಂಗಾಡಿ ಕರ್ಚೀಫ್ ಕಟ್ಟುತ್ತಿದ್ದವನು ಕತೆ ಕೇಳಿ, ಕರ್ಚೀಫ್ ಕಟ್ಟಿ ಎದ್ದವನೇ ಜಯರಾಂ ಕಡೆ ನೆಗೆದು ಕೈ ಕುಲುಕುತ್ತಾ "ನೀವೊಬ್ಬರು ಮಹಾನ್ ಕಲಾವಿದರ, ನಿಮ್ಮ ಕತೆ ಗ್ರೇಟ್" ಎಂದ. ಜಯರಾಮ್ ಚಕಿತನಾಗಿ "ಏನ್ರೀ ಇದು ಅಂಗಾಡಿ? ಯಾಕೆ ಹೀಗೆ ಅಡ್ತೀದ್ದೀರಿ?" ಎಂದ.

"ಯು ಆರ್ ಗ್ರೇಟ್! ನಿಮ್ಮ ಕತೆ ಕೊನೆಗೂ ನನ್ನ ವಿಮರ್ಶೆಯಲ್ಲಿ ಗೆದ್ದಿತು! ಗೋಸಾಯಿಗಳು ನಾಪತ್ತೆಯಾಗಿರೋದು! ಇಲ್ಲಿ ಪಾಟೀಲರನ್ನು ಮುಗಿಸೋದಕ್ಕೆ ಬಾಂಬ್ ಇಟ್ಟಿರೋದು! ಏನಿದರರ್ಥ? ಮೆಜಿಶಿಯನ್ ಮುತ್ತು ವಿದೇಶಿ ಏಜೆಂಟ್! ಜೋಗಿಹಾಳರ ಕೊಲೆಗಾರ ಅವನೇ! ಎಂದ ಅತ್ಯಾನಂದದಿಂದ ಅಂಗಾಡಿ.

"ನಾನ್ಸೆನ್ಸ್, ಸ್ಟುಪಿಡ್. ಅದು ಬಾಂಬಲ್ರೀ ಎಂಥದೋ ಉಂಡೆ. ಬೆಣಚುಕಲ್ಲು ಚುಚಿಕೊಂಡಿದಾವೆ. ಅಂಥ ಬಾಂಬುಗಳಿಂದ ಗ್ವಾಟೆಮಾಲಾ ಏಜಂಟ್‌ಗಳು ಗೂಢಚರ್ಯೆ ನಡೆಸ್ತಾ ಇರೋದಾದ್ರೆ ಶಿಲಾಯುಗದ ಹತ್ತಿರ ಹತ್ತಿರ ಇದಾರೇಂತ ಆಯ್ತು. ನಡೆದದ್ದೇನಂತ ತಿಳಿಯೋದು ಬಿಟ್ಟು ಎವಿಡೆನ್ಸ್ ಹುಡುಕ್ತಿದ್ದೀರೇನ್ರೀ ಇನ್ನೂ" ಎಂದು ನೋವಿನಲ್ಲೂ ಕೋಪದಿಂದ ಹೇಳಿದರು ಪಾಟೀಲರು.

"ಏನ್ ಸಾರ್ ಇದೂ! ಮೂಳೆ ಈಚೆಗೆ ಬಂದ ಹಾಗಿದೆ?" ಎಂದು ಪಾಟೀಲರ ಗಾಯದಿಂದ ಬೆಳ್ಳಗೆ ಈಚೆಗೆ ಬಂದಂತೆ ಕಂಡದ್ದನ್ನು ನೋಡಿ ಅಂಗಾಡಿ ಹಾಳಿದ.

"ಮೂಳೆ ಅಲ್ರಿ, ಬೆಣಚುಕಲ್ಲು, ಅಯ್ಯಯ್ಯೋ ಅದನ್ನ ಕೀಳೋದಕ್ಕೆ ಹೋಗಬೇಡಿ. ರಕ್ತಸ್ರಾವ ಆಗಿ ಸತ್ತೋಗ್ತೀನಿ" ಎಂದು ಅದನ್ನು ತೆಗೆಯಲೆತ್ನಿಸಿದ ಅಂಗಾಡಿಗೆ ಕೂಗಿ ಹೇಳಿದರು ಪಾಟೀಲರು.

"ನೋವತ್ತ ಸಾರ್! ಅದು ಒಳ್ಳೇದೆ."

"ಯಾಕ್ರಿ ಒಳ್ಳೇದು?"

"ಅದು ನರಗಳಿಗೆ ಏಟಾಗಿಲ್ಲ ಅನ್ನೋದನ್ನ ತೋರ್ರುತ್ತೇ ಸಾರ್! ಮೂಳೇ ಹಾಗೇ ಕಾಣ್ತಿದೆ ಸಾರ್ ಇದು ತುಂಬಾ ಗಟ್ಟಿ ಇದೆ" ಎಂದ ಅಂಗಾಡಿ.

"ಮೂಳೆ ಆಗಿದ್ರೆ ಕೀಳೋಕೆ ಯಾಕ್ರಿ ಹೋಗ್ತೀರಿ. ಫೂಲಿಷ್‌ಫೆಲೋ! ಮೊದಲು ಆಸ್ಪತ್ರೆಗೆ ಹೋಗೋಣ ನಡೀರಿ" ಎಂದರು ಪಾಟೀಲರು. ಅಷ್ಟು ಜನವೂ ಕುಂಟುತ್ತಿದ್ದ ಪಾಟೀಲರೊಡನೆ ಮೆರವಣಿಗೆಯೋಪಾದಿಯಲ್ಲಿ ಕೆಸರೂರಿನ ಪೇಟೆ ಬೀದಿಯಲ್ಲಿ ಹೊರಟರು. ಅಷ್ಟರಲ್ಲಿ ಹುಸೇನ್ ಸಾಬಿಯ ಒಂಟೆತ್ತಿನಗಾಡಿ ಕಂಡಿತು. ಅವನ್ನು ಕರೆದು ಅದರಲ್ಲಿ ಪಾಟೀಲರನ್ನು ಸಿದ್ದಪ್ಪನೂ ಹೆಗ್ಡೆನೂ ಕೂರಿಸಿದರು. "ನೇರ ಆಸ್ಪತ್ರೆಗೆ ಹೊಡಿ" ಎಂದರು ಪಾಟೀಲರು.

ಅವರನ್ನು ಹತ್ತಿಸಿ ಗಾಡಿಯ ಮೇಲೆ ಕೂರಿಸಬೇಕಾದರೆ. ನಾಲ್ಕಾರು ಜನ ಸುತ್ತಮುತ್ತ ಸೇರಿದ್ದರು. ಗಾಡಿ ಹೋದಮೇಲೆ ವಿಷಾದವದನರಾಗಿ ಜಯರಾಂ ಅಂಗಾಡಿ ರಾಮಚಂದ್ರ ನಿಂತಿದ್ರು. ಆಗ ಆ ಗುಂಪಿನಲ್ಲಿ ಒಬ್ಬ "ಏನ್ ಸಾರ್ ಏನಾಯ್ತು?" ಎಂದು ಕೇಳಿದ.

"ಏನು ಹೇಳಲಯ್ಯ! ಅದಕ್ಕೊಂದು ಕತೇನೇ ಇದೆ" ಎಂದು ಅನ್ಯಮನಸ್ಕನಾಗಿ ಜಯರಾಮ ಹೇಳಿದ.

"ಓ ಗೊತ್ತು ನನಗೆ" ಎಂದ ಅಪರಿಚಿತ.

"ಏನು ಹೇಳಿ?"

"ಹಿಂದೂಗಳು ಮಸೀದಿಗೆ ಲಗ್ಗೆ ಹಾಕೋದಕ್ಕೆ ಬಂದ್ರೆ ಅಂತ! ಸಾಬರು ಬಾಂಬು ಇಟ್ಟಿರ್ತಾರೇ ಅಂತ! ಅಲ್ವಾ?" ಎಂದ.

"ಕರೆಕ್ಟ್ ನಿನ್ನಕತೆ ಪ್ರಕಾರ" ಎಂದ ಜಯರಾಮ.

"ಅದಲ್ಲಾ. ಬೇರೆ ಇದೆ! ನಂಗೊತ್ತು" ಎಂದ ಇನ್ನೊಬ್ಬ.

"ಏನು" ಎಂದ ಜಯರಾಮ.

"ಸಾಬ್ರು ಯಾಕೆ ಮಸೀದಿ ಹತ್ರ ಸಿಡಿಮದ್ದು ಇಡ್ತಾರೆ? ಹಿಂದೂಗಳೇ ಇಟ್ಟಿದ್ರು. ನಮಾಜಿಗೆ ಬರೋರು ಢಮಾರನ್ಲೀ ಅಂತ ಅಲ್ವಾ."

"ಕರೆಕ್ಟ್ ನಿನ್ನಕತೆ ಪ್ರಕಾರ" ಎಂದ ಜಯರಾಮ.

ಗುಂಪಿನ ಜನಗಳೇ ಏನೇನೋ ಪರಸ್ಪರ ವಾದಮಾಡಿಕೊಳ್ಳತೊಡಗಿದರು.

ಜಯರಾಮ ಅವರ ಬಗ್ಗೆ ಅಸಹ್ಯ ತುಂಬಿದ ಕಣ್ಣಲ್ಲಿ ನೋಡುತ್ತಾ "ನಡೀರಿ ನಾವು ಆಸ್ಪತ್ರೆಗೆ ಹೋಗೋಣ. ಈ ಊರಲ್ಲಿ ಎಲ್ಲ ಅಂಗಾಡಿ ತರ ತಮ್ಮ ಕತೆಗೆ ಸಾಕ್ಷಿ ಹುಡುಕ್ತಿದ್ದಾರೆ" ಎಂದ. ಮೂವರೂ ಮಾತಾಡದೆ ಅಲ್ಲಿಂದ ಹೊರಟರು.



ಅವರು ಕೊಂಚದೂರ ಸಾಗುವುದರೊಳಗೇ ಹಿಂದಿನಿಂದ ತದುಕ್ರೊ ಮಾರೊ ಇತ್ಯಾದಿ ಗಲಾಟೆ ಕೇಳಿಬಂತು. ಧಿಡ್ ಭುಡ್ ಶಬ್ದ ಕೇಳಿತು. ತಿರುಗಿ ನೋಡಿದ ಮೂವರೂ ನಿರ್ವಿಕಾರಚಿತ್ತರಂತೆ ನಿಂತರು. ಅಲ್ಲಿ ನಿಂತಿದ್ದ ಗುಂಪಿನಲ್ಲಿ ಹೊಡೆದಾಟವಾಗುತ್ತಿತ್ತು. ಜನ ಸೇರುತ್ತಾ ಇದ್ದರು. ಚೂರಿ ತೆಗೆದುಕೊಂಡು ಒಬ್ಬರ ಮುಸುಡಿ ಒಬ್ಬರು ಸಿಗಿದುಕೊಂಡಿದ್ದರು. ಇವರು ನೋಡುತ್ತಿದ್ದಂತೆಯೆ ಒಬ್ಬ ಇನ್ನೊಬ್ಬನ ಹೊಟ್ಟೆಗೆ ಚೂರಿ ಹಾಕಿ ಬರೆದ. ಅವನು ಹಿಸಿದ ಹೊಟ್ಟೆಯನ್ನು ಕರುಳು ಹೊರಬರದಂತೆ ಎರಡೂ ಕೈಗಳಲ್ಲೂ ಒತ್ತಿ ಹಿಡಿದುಕೊಂಡು ನೆಲಕ್ಕೆ ಕುಕ್ಕರಿಸಿದ. ಚೂರಿ ಹಾಕಿದವರ ಮುಖದಲ್ಲಿ ಕಣ್ಣಿನಿಂದ ಹಿಡಿದು ಗಲ್ಲದವರೆಗೂ ಕೆನ್ನೆ ಜೋಲಾಡುತ್ತಿದ್ದು. ತಲೆಬುರುಡೆಯ ಚಿಲಿದ ಹಲ್ಲುಗಳು ನೋಡಿದವರಿಗೆ ಅವನು ನಗುತ್ತಿದ್ದಂತೆ ಕಾಣಿಸುತ್ತಿದ್ದವು. ಕೆನ್ನೆಯ ಚರ್ಮವನ್ನು ಮುಖಕ್ಕೆ ಒತ್ತಿಹಿಡಿದು ಏನನ್ನೋ ಅರಚುತ್ತಾ ಬಿದ್ದ. ಇನ್ನಷ್ಟು ಜನ ಓಡಿಬಂದು ಹೊಡೆದಾಟದಲ್ಲಿ ಸೇರಲಾರಂಭಿಸಿದರು.

ಜಯರಾಮನ ಮುಖ ಕಠೋರವಾಗಿ ಬಿಗಿದುಕೊಂಡಿತ್ತು. ಏನೂ ಆಗದಿದ್ದವನಂತೆ ತಿರುಗಿ "ನಡೀರಿ ಆಸ್ಪತ್ರೆಗೆ" ಎಂದ. ಅವರು ಅರ್ಧ ದಾರಿ ಕ್ರಮಿಸಿರಬೇಕಾದರೆ ಎದುರಿಂದ ಜನ ಧಡಧಡ ಓಡಬರುತ್ತಿದ್ದರು. ಕೈಯಲ್ಲಿ ಕತ್ತಿ ದೊಣ್ಣೆ ಇತ್ಯಾದಿಗಳು ಇದ್ದವು. ಕೆಲವರ ಮೈ ಕೈ ಎಲ್ಲಾ ರಕ್ತವಾಗಿತ್ತು. ಪೋಲೀಸ್ನೋರು ಗುಂಡು ಹಾರಿಸ್ತಿದ್ದಾರೆ. ಓಡಿ ಓಡಿ ಎಂದು ಅವರಲ್ಲೊಬ್ಬ ಕೂಗುತ್ತಿದ್ದ. ಇನ್ನೊಬ್ಬ ಜಯರಾಮನಿಗೆ "ನಮಸ್ಕಾರ ಸಾರ್" ಎಂದ. ಜಯರಾಮ ಗಂಬೀರವಾಗಿ ಅವನಿಗೆ ಪ್ರತಿನಮಸ್ಕಾರ ಹಾಕಿದ. ಮೂವರೂ ಮತ್ತೆ ಮುಂದುವರಿದರು. ಕೆಸರೂರಿನ ಯಾವ್ಯಾವುದೋ ಮೂಲೆಗಳಿಂದ ಹೆಂಗಸರ ಮಕ್ಕಳ ಕಿರಿಚಾಟ ಆರಂಭವಾಯ್ತು! ಭಯಂಕರ ದೊಂಬಿ. ಕೊಲೆ ಪ್ರತಿಕೊಲೆ ಶುರುವಾಯ್ತು. ಆ ವೇಳೆಗೆ ಸರಿಯಾಗಿ ಸೂರ್ಯನ ಝುಗಝುಗಿಸುವ ಬಿಸಿಲು ಮೋಡ ಕವಿದಂತೆ ಮಂಕಾಗತೊಡಗಿತು. ಮಂಕಾಗುತ್ತ ಮಂಕಾಗುತ್ತ ಬಿಸಿಲು ತನ್ನ ಚುರುಕನ್ನೇ ಕಳೆದುಕೊಂಡು ಬೆಳುದಿಂಗಳಿನಂತಾಯ್ತು. ಕಠೋರ ಮನಸ್ಸಿನಿಂದ ರಸ್ತೆಯಲ್ಲಿ ನಡೆಯುತ್ತಿದ್ದ ಮೂವರೂ ಇದನ್ನು ಗಮನಿಸಲೇ ಇಲ್ಲ. ಅವರು ಮೂವರಿರಲಿ ಕೆಸರೂರಿನ ಯಾರೂ ಅದನ್ನು ಗಮನಿಸಲಿಲ್ಲ. ಕೊಲ್ಲು, ಕೊಚ್ಚು, ಕಡಿ, ಹರಹರ ಮಹದೇವ, ಅಲ್ಲಾ ಹೋ ಅಕ್ಬರ್‌ಗಳ ಕೂಗಾಟ ಚೀರಾಟಗಳು ತುಂಬಿದ್ದವು.

# ಅಧ್ಯಾಯ ೪೩



ಸೂರ್ಯ ಮಂಕಾಗಿ ಬಿಸಿಲು ಮಬ್ಬಾದಾಗ ರಫಿ ಜಯಂತಿ ಇಬ್ಬರೂ ಲಂಟಾನದ ಜಿಗ್ಗಿನ ಕಬಂಧ ಬಾಹುಗಳಲ್ಲಿ ಸಿಕ್ಕಿಬಿದ್ದಿದ್ದರು. ಲಂಟಾನದ ಅಡಿಯ ಕತ್ತಲು ಬಿಸಿಲಿನ ಝಳ ಮೇಲೆ ಕಡಿಮೆಯಾದಂತೆ ಉಲ್ಬಣಿಸಿತ್ತು.

"ಇವತ್ತು ಕೆಸರೂರಿನ ಬಂದ್. ಕಾಲೇಜಿಗೆ ರಜ"ಎಂದು ತಿಳಿದು ಕಾಲೇಜಿನಿಂದ ವಾಪಸ್ ಹೋಗುತ್ತಿದ್ದ ಜಯಂತಿಗೆ ರಫಿ ಮತ್ತು ರಮೇಶ ಸಿಕ್ಕಿದರು. ಕೆಸರೂರಿನ ಕಳವಳಕಾರ ಪರಿಸ್ಥಿತಿಯಲ್ಲಿ ನಾಚಿಕೆ ಇತ್ಯಾದಿಗಳೆಲ್ಲಾ ಹಾರಿಹೋಗಿದ್ದವು. ರಮೇಶ ನೇರವಾಗಿ ಅವಳಿಗೆ ತಮ್ಮ ಹಂಚಿಕೆ ವಿವರಿಸಿ ರಫಿಯ ಜೊತೆ ಪರಿಸ್ಥಿತಿ ಹತೋಟಿಗೆ ಬರುವವರೆಗೆಯಾರಿಗೂ ಕಣದಂತೆ ಇರಬೇಕೆಂದು ಹೇಳಿದ. ಇದ್ದಕ್ಕಿದ್ದಂತೆ ಒದಗಿಬಂದ ಸಾಹಸಕ್ಕೆ ಖುಷಿಯಿಂದಲೇ ಜಯಂತಿ ಒಪ್ಪಿ ತನ್ನ ತಂದೆ ತಾಯಿಗಳಿಗೆ ಮಾತ್ರ ತಿಳಿಸಲೇಬೇಕು, ಅವರು ಎಷ್ಟು ಸಿಟ್ಟು ಮಾಡಿದರೂ ಸರಿ, ಎಂದು ರಮೇಶನಿಗೆ ಶರತ್ತು ಹಾಕಿದಳು. ರಮೇಶ ಒಪ್ಪಿದ, ಮೂವರು ದಾರಿ ಪಕ್ಕದ ಪೊದೆಗಳ ಮರೆಗೆ ಹೋಗಿ ಎಲ್ಲಿ ಅಡಗುವುದೆಂದು ತೀರ್ಮಾನ ಮಾಡುತ್ತಿದ್ದರು. ಆಗ ಕೆಲವರು ಗುಂಪು ಗುಂಪಾಗಿ



"ಬನ್ನಿ, ಬನ್ನಿ, ಜೋರು ಗಲಾಟೆ ಹತ್ತಿಕೊಂಡಿದೆಯಂತೆ. ಒಳ್ಳೇದೇ ಆಯ್ತು. ಈ ಸಾಬ್ರಿಗೆ ಸರ್ಯಾಗಿ ಮಗ್ಗುಲು ಮುರಿಯಬೇಕು" ಎಂದುಕೊಳ್ಳುತ್ತಾ ಓಡುತ್ತಿದ್ದುದು ಶಬ್ದ ಮಾತ್ರವಾಗಿ ಇವರಿಗೆ ಕೇಳಿತು. ಕಳವಳದಿಂದ ರಮೇಶ "ಬೇಗ ಯೋಚ್ನೆ ಮಾಡಿ, ನನಗೆ ಟೈಮಿಲ್ಲ" ಎಂದ. ಅಷ್ಟರಲ್ಲಿ ಇನ್ನೊಂದು ಸಣ್ಣ ಗುಂಪು "ಪಾಟೀಲರಿಗೆ ಯಾಕೆ ಹೊಡದ್ರಂತೆ ಮಾರಾಯ! ಅವ್ರು ಯಾವ ಕಡೇಗೂ ಇರ್ಲಿಲ್ಲ" ಎಂದು ಮಾತಾಡಿಕೊಳ್ಳುತ್ತ ನಡೆದು ಹೋದರು. "ದೊಂಬಿ ಅಲ್ಲೇನೋ! ಯಾರ್ನ ಯಾರಂತ ನೋಡ್ತಾರೆ? ಪಾಪ! ಎಲ್ಲೋ ಜಗಳ ಬಿಡಿಸೋದಕ್ಕೆ ಹೋಗಿರ್ಬೇಕು ಅವರು" ಎಂದು ಇನ್ನೊಬ್ಬ ಉದ್ಗರಿಸಿದ್ದೂ ಕೇಳಿತು. ಇಬ್ಬರೂ ಒಮ್ಮತದಿಂದ "ಹೊಡೀಬೇಕು ಸೂಳೇಮಕ್ಳಿಗೆ. ಇಲ್ದಿದ್ರೆ ಹಾದಿಗೆ ಬರಲ್ಲ" ಎಂದುಕೊಳ್ಳುತ್ತ ಸರಸರ ಸಾಗಿದರು.

ಮರೆಯಲ್ಲಿದ್ದ ರಮೇಶ "ಇವರಿಗೆ ಪಾಟೀಲ್ರಿಗೆ ಹೊಡೆಯೋ ಅಷ್ಟು ತಾಕತ್ತು ಬಂತಾ!" ಎಂದು ಉದ್ಗರಿಸಿದ. ರಫಿ "ಮುನಿಸಿಪಾಲಿಟಿ ಪಂಪ್‌ಹೌಸ್ ಹತ್ರ ಇರ್ತೀವಿ. ಅಕಸ್ಮಾತ್ ಅಲ್ಲೂ ಜನರ ಓಡಾಟ ಇದ್ರೆ ಅಲ್ಲೇ ಕಾಡೊಳಗೆ ಅವಿತುಕೊಂಡಿರ್ತೀವಿ. ಸಾಯಂಕಾಲ ಆದ್ಮೇಲೆ ಟಿಬಿ ಹತ್ರ ಬರ್ತೀವಿ. ಆಗಬಹುದಾ" ಎಂದ. "ಓ ಯಸ್, ಗುಡ್‌ಲಕ್" ಎಂದವನೇ ರಮೇಶ ಎದ್ದು ದಾರಿಯಲ್ಲೇ ಊರಿನ ಕಡೆಗೆ ಓಡಿದ. ಜಯಂತಿ ಗಟ್ಟಿಯಾಗಿ "ನಮ್ಮ ಮನೆಗೆ ಹೇಳಬೇಕೂ ಆಯ್ತಾ" ಎಂದು ಕೂಗಿದಳು. ರಮೇಶ ಆಯ್ತೆಂದು ಕೈಯ್ಯಾಡಿಸುತ್ತಾ ಓಡಿದ. ರಫಿ ಜಯಂತಿ ಕಡೆಗೆ ತಿರುಗಿ ನಸುನಕ್ಕ.

ರಫಿ ಜಯಂತಿ ಪಂಪ್‌ಹೌಸಿನ ಬಳಿ ಅಡಗಿ ಕುಳಿತಿದ್ದಾಗ ಒಂದಷ್ಟು ಜನ ನೀರಿನ ಟ್ಯಾಂಕ್ ಕಡೆಗೆ "ನೋಡಿ ನೋಡಿ ಫಾಲಿಡಾಲ್ ಹಾಕಿದಾರಂತೆ!" ಎಂದು ಕೂಗುತ್ತ ಓಡಬಂದರು. ರಫಿ ಲಂಟಾನದ ಜೆಗ್ಗನ್ನು ಸರಿಸುತ್ತಾ ಜಯಂತಿಯೊಡನೆ ಕಾಡಿನೊಳಗೆ ನುಗ್ಗಿದ. ಸ್ವಲ್ಪ ದೂರ ಒಳಗೆಹೇಗೆ ಹೇಗೋ ನುಸಳಿ ಹೋಗಿ ಕುಳಿತುಕೊಳ್ಳುವಷ್ಟು ಜಾಗ ಮಾಡಿ ಕುಳಿತು ಕೊಂಡರು. ಜಯಂತಿ ಯಾವುದನ್ನೂ ಹೆಚ್ಚು ಗಮನಿಸಿದೆ ರಫಿ ಮುಖ ನೋಡುತ್ತಾ ಇದ್ದಳು. ಇದನ್ನು ತಿಳಿದ ರಫಿ ನಾಚಿ ಅತ್ತಿತ್ತ ಕಡ್ಡಿ ಮುರಿದು ಜಾಗ ಮಾಡಿಕೊಡುವವನಂತೆ ನಟಿಸುತ್ತಾ ಅನ್ಯಾಸಕ್ತನಾದ. ಅವರಿಬ್ಬರಿಗೂ ಕೆಸರೂರಿನಲ್ಲಿ ಬಿಗಡಾಯಿಸುತ್ತಿದ್ದ ಪರಿಸ್ಥಿತಿ ನೋಡಿ ತಾವು ಜೀವ ಸಮೇತ ಪಾರಾಗುವ ನಂಬಿಕೆ ಇರಲಿಲ್ಲ. ಜಯಂತಿ ಮತ್ತೆ ಮೊನ್ನಿನ ರಾತ್ರಿಯಂತೆ ರಫಿಯನ್ನು ಕುಳಿತಲ್ಲೇ ತಬ್ಬಿಕೊಂಡಳು. ರಫಿ ಮೆಲ್ಲಗೆ ಅವಳ ಆಲಿಂಗನವನ್ನು ಸಡಿಲಿಸಿ ಬಾಗಿ ಅವಳ ಲಂಗ ಕೊಂಚ

ಎತ್ತಿದ. ಜಯಂತಿಗೆ ಸ್ವಲ್ಪ ಗಾಬರಿಯಾಯ್ತು. ರಫಿ ಬಿಡುಗಣ್ಣಿನಿಂದ ಅವಳ ದಂತದಂಥ ಕಾಲುಗಳನ್ನು ಒಮ್ಮೆ ನೋಡಿ ಲಂಗ ಬಿಟ್ಟ. ಜಯಂತಿ ನಕ್ಕಳು. ರಫಿಯೂ ನಕ್ಕ.

"ಏನು ರಫಿ?" ಎಂದಳು.

"ಏನಿಲ್ಲಪ್ಪಾ" ಎಂದ ರಫಿ.

"ಅಲ್ಲಾ ಯಾಕೆ ಬಿಟ್ಬಿಟ್ಟೆ? ಬಯ್ತೀನಿ ಅಂತಾನ?"

"ಇಲ್ಲಾ ಜಯಂತಿ. ನೀನು ನನಗೆ ಸಿಕ್ಕಿದೀಯಾಂತ ಏನು ಮಾಡಿದ್ರೂ ನಂಬಿಕೇನೆ ಬರ್ತಿಲ್ಲ. ನನ್ನ ಫ್ರೆಂಡ್ಸಿಗೂ ಅಷ್ಟೇ. ಮೊನ್ನೆ ರಾತ್ರಿ ನನ್ನ ತಟ್ಟಿದ್ದು, ಮೋಹಿನಿ ದೆವ್ವಾ ಇರಬೇಕು ಅಂತ ಕೊನೆಗೆ ತೀರ್ಮಾನ ಮಾಡಿದ್ರು ಅವರೆಲ್ಲ. ಕಾಲು ತಿರುಗಾ ಮುರುಗಾ ಇತ್ತೊ ಸರ್‍ಯಾಗಿತ್ತೋ ನೋಡಿದಿಯೇನೋ ಅಂತ ಬಯ್ದರು. ಅದಕ್ಕೆ ಇವತ್ತು ನೋಡಿದ್ದು.'

"ದೆವ್ವಾ? ದೆವ್ವಾ ಹೀಗೆ ಮುತ್ತುಕೊಡುತ್ತಾ!" ಎಂದು ಬಿಗಿಯಾಗಿ ಹಿಡಿದು ಮುತ್ತು ಕೊಟ್ಟಳು. ರಫಿಗೆ ಅವಳ ಮಾದಕ ಸಾನ್ನಿಧ್ಯದಲ್ಲಿ ಅವಳ ಮುತ್ತಿನಿಂದ ಅವಳು ಸಿಕ್ಕಿರುವುದರ ಬಗ್ಗೆ ಇನ್ನಷ್ಟು ನಂಬಿಕೆ ಕಡಿಮೆಯಾಯ್ತು. ಇದು ಸತ್ಯಾ ಅಂತ ಹೇಗೆ ಖಾತರಿ ಮಾಡಿಕೊಳ್ಳುವುದು ಎಂದು ಯೋಚಿಸಿದ.

ಎಷ್ಟೋ ಹೊತ್ತಾದನಂತರ ಅವರಿಗೆ ಹೊರಗೆ ಯಾವ ಶಬ್ದವೂ ಕೇಳಲಿಲ್ಲ ಮತ್ತೆ ಪಂಪ್‌ಹೌಸಿಗೆ ಹೋಗೋಣ ಎಂದೆನ್ನಿಸಿತು. ರಫಿ ಜಯಂತಿಗೆ ಹಿಂಬಾಲಿಸೆಂದು ಹೇಳಿ ಲಂಟಾನದ ಅಡಿಯಲ್ಲಿ ನುಸುಳಲಾರಂಭಿಸಿದ ತಲೆ ಎತ್ತಲಾಗದೆ ಚತುಷ್ಪಾದಿಗಳಂತ ಲಂಟಾನದ ಅಡಿಯಲ್ಲಿ ಅಂಬೆಗಾಲಿಡುತ್ತ ತೆವಳಿದರು. ಸ್ವಲ್ಪ ಹೊತ್ತು ನುಸುಳಿದ ರಫಿಗೆ ಗಾಬರಿ ಆಯ್ತು. ಲಂಟಾನದೊಳಗೆ ಇಷ್ಟೊಂದು ದೂರ ತಾವು ಬಂದಿರಲೇ ಇಲ್ಲವಲ್ಲ ಎಂದು ಲಂಟಾನದ ಜಿಗ್ಗು ಅವರುನುಸುಳಿದಂತೆ ಅಕ್ಷಯವಾಗಿ ಮುಂದುವರಿಯುತ್ತಲೆ ಇದೆ! ದಿಕ್ಕು ತಪ್ಪಿದೆವೆ? ಇಬ್ಬರಿಗೂ ಅನುಮಾನು ಶುರುವಾಯ್ತು. ಗಾಬರಿಯಾಗಿ ಕೊಂಚ ದಿಕ್ಕು ಬದಲಿಸಿ ನುಸುಳಿದರು. ಏನೂ ಪ್ರಯೋಜನವಿಲ್ಲ. ಆಕಾಶದ ಶೂನ್ಯದಷ್ಟೇ ಸುತ್ತೆಲ್ಲಾ ಲಂಟಾನದ ಜಿಗ್ಗು ಅನಂತವಾಗಿ ಹಬ್ಬಿದೆ. ಸುಮ್ಮನೆ ಕುಳಿತು ಯಾವುದಾದರೂ ಮನುಷ್ಯರ ದನಿ ಕೇಳುತ್ತದೆಯೋ ಆಲೈಸಿದರು. ಎಲ್ಲೋ ಕೇಳಿದಂತಾಗಿ ಯಾವುದೋ ದಿಕ್ಕಿನಲ್ಲಿ ಮುಂದುವರಿದರು. ಯಾವ ಪ್ರಯೋಜನವೂ ಆಗಲಿಲ್ಲ. ಸುಮ್ಮನೆ ಯಾವುದೋ ದಿಕ್ಕಿನಲ್ಲಿ ನುಸುಳುತ್ತ ಮುಂದುವರೆಯಲಾರಂಭಿಸಿದರು. ಮೈಯೆಲ್ಲಾ ಗೀರಿಗೀರಿ ರಕ್ತ ಬರಲಾರಂಭಿಸಿತು. ಬಟ್ಟೆಗಳು ಹರಿಯತೊಡಗಿದವು.



ಹಾಗೆ ಅವರಿಬ್ಬರೂ ನುಸುಳುತ್ತಾ ತೆವಳುತ್ತಾ ಇರಬೇಕಾದರೆ ಅವರಿಗೆ ಹಠಾತ್ತಾಗಿ ಸುರಂಗದಂಥ ದಾರಿಯೊಂದು ಇದಿರಾಯ್ತು ಯಾವೋ ಪ್ರಾಣಿಗಳು ಓಡಾಡಿ ಮಾಡಿದ ದಾರಿಯಂತೆ ಕಂಡಿತು. ಅವರು ಅಡಿ ನುಸುಳುವುದನ್ನು ಬಿಟ್ಟು ಅದರಲ್ಲಿ ಕುಳಿತು ಸುಧಾರಿಸಿಕೊಳ್ಳತೊಡಗಿದರು. ಆಗ ಸರಿಯಾಗಿ ಲಂಟಾನದ ನೆತ್ತಿಯಿಂದ ಜಿನುಗುತ್ತಿದ್ದ ಸೂರ್ಯಪ್ರಭೆ ಮಂಕಾಗತೊಡಗಿತು. ಕೊನೆಗೆ ಗ್ರಹಣ ಹಿಡಿದಾಗ ಆಗುವಂತೆ ಬಿಸಿಲು ಬೆಳದಿಂಗಳಾಯ್ತು. ರಫಿಯ ಮೂಗಿಗೆ ಸುಟ್ಟ ಹಸಿ ಎಲೆಗಳ ವಾಸನೆ ಹೊಡೆಯಿತು. "ಎಲ್ಲೋ ಬೆಂಕಿಬಿದ್ದಿದೆ! ಟನ್ನುಗಟ್ಟಲೆ ಇರುವ ಲಂಟಾನದ ಜಿಗ್ಗಿಗೆ ಬೆಂಕಿ ಹತ್ತಿದರೆ ಏನು ಗತಿ!" ಎಂದು ಇಬ್ಬರೂ ಸುಧಾರಿಸಿಕೊಂಡು ಆ ಸುರಂಗದಲ್ಲೇ ವೇಗವಾಗಿ ಮುಂದುವರೆದರು. ಹೊಗೆ ದಟ್ಟವಾಗುತ್ತಾ ಯೋಯ್ತು ಆ ದಾರಿಯಲ್ಲಿ ಒಂದಷ್ಟಗಲ್ಲಕೆ ಜವುಗಿನ ಜಾಗ ಒಂದನ್ನು ಕಂಡರು. ಅಷ್ಟಗಲ ಲಂಟಾನ ಆಕ್ರಮಣ ನಿಲ್ಲಿಸಿತ್ತು. ಅವರಿಗೆ ಕವಿಯುತ್ತಾ ಇರುವ ಹೊಗೆಯಲ್ಲಿ ಎಡಗಡೆ ಒಂದು ಪರ್ವತಾಗ್ರದ ಬಂಡೆಗಳ ನೆತ್ತಿ ಕಾಣಿಸಿತು. ಬಲಕ್ಕೆ ಒಂದು ಧೂಪದ ಮರದ ಬುಡದಲ್ಲಿ ಅಗಲವಾಗಿ ಕೊಬ್ಬಿ ಬೆಳೆದಿದ್ದ ಒಂದು ಏಲಕ್ಕಿ ಹಿಂಡಿಲು ಕಾಣಿಸಿತು. ಅದರ ಬಡ್ಡೆಗಳಲ್ಲಿ ಕಾಲಿಡಲು ಅಸಾಧ್ಯವಾದಷ್ಟು ಗಜುಗದ ಗಾತ್ರದ ಕಾಯಿಗಳು ಯಾರೂ ಕೀಳದೆ ಹಣ್ಣಾಗಿ ಹರಡಿಕೊಂಡಿದ್ದವು. ರಫಿ ಜಯಂತಿ ಇಬ್ಬರೂ ಆಶ್ಚರ್ಯಚಕಿತರಾಗಿ ಅದನ್ನು ನೋಡಿದರು. ಅಷ್ಟರಲ್ಲಿ ಹೊಗೆ ದಟ್ಟವಾಗತೊಡಗಿತು. ಚರಪರ ಚರಪರ ಹಸಿ ಎಲೆಗಳು ಸ್ಫೋಟಿಸುತ್ತ ಹೊತ್ತಿಕೊಳ್ಳುತ್ತಿರುವ ಸದ್ದು ಕೇಳಿಸಿತು.

ಸುಸ್ತಾಗಿ ಬಾಡಿದ ಹೂವಿನಂತಾಗಿದ್ದ ಜಯಂತಿಯನ್ನು ಎಳೆದುಕೊಂಡು ರಫಿ ಪರ್ವತಾಗ್ರದ ದಿಕ್ಕಿನಲ್ಲಿ ಲಂಟಾನದ ಅಡಿಗೆ ತಲೆಕೊಟ್ಟು ನುಗ್ಗಿದ.

"ಅಯ್ಯೋ" ಎಂದು ಸುಸ್ತಾದ ಜಯಂತಿ ಉದ್ಗರಿಸಿದರಳು.

"ಹೆದರಬೇಡ ಬಾ ಜಯಂತಿ. ಇದರ ನೆತ್ತಿಗೆ ಹೇಗಾದರೂ ಮಾಡಿ ಹೋಗಿಬಿಡೋಣ. ಅಲ್ಲಿ ಕಲ್ಲಿದೆ. ಆದ್ದರಿಂದ ಬೆಂಕಿ ಬರಲಾರದು" ರಫಿ ಧೈರ್ಯ ಹೇಳಿದ, ಲಂಟಾನದ ಕೆಳಗಿನ ಒಣಕಡ್ಡಿಗಳನ್ನು ಲಟಲಟ ಮುರಿಯುತ್ತಾ ರಫಿ ನುಗ್ಗಿದ. ಜಯಂತಿ ಪ್ರಯಾಸದಿಂದ ಹಿಂಬಾಲಿಸಿದಳು. ಅವರು ತೆವಳಿದಂತೆ ತೆವಳಿದಂತೆ ನೆಲ ಕಡಿದಾಗುತ್ತಾ ಹೋಯ್ತು. ಅಂತೆಯೇ ಲಂಟಾನದ ಕಟ್ಟಣೆಯೂ ತೆಳುವಾಗತೊಡಗಿತು. ಹೊಗೆಯೂ ಕೊಂಚ ತೆಳುವಾಯ್ತು. ಆದರೆ ಜಯಂತಿ ಬಸವಳಿದು ಸೋಲತೊಡಗಿದಳು. ಇಬ್ಬರ ಮೈಯ್ಯೂ ರಕ್ತಮಯವಾಗಿತ್ತು. ಲಂಟಾನದ ಜಿಗ್ಗು ಮುಗಿಯುವ ಹೊತ್ತಿಗೆ ಜಯಂತಿಗೆ ತನ್ನೆಲ್ಲ ಶಕ್ತಿಯೂ

ವ್ಯಯವಾಗಿ ಕುಸಿದು ಬಿದ್ದೇಬಿಟ್ಟಳು.

"ಜಯಂತಿ ಇನ್ನೊಂದು ಸ್ವಲ್ಪೇ ದೂರ!" ರಫಿ ಬೇಡಿಕೊಂಡ.

"ಇಲ್ಲಾ ರಫಿ ನನಗೆ ಬದುಕೋ ಇಷ್ಟ ಇಲ್ಲ. ನೀನು ಹೇಗಾದರೂ ಮಾಡಿ ಬೆಂಕಿಯಿಂದ ತಪ್ಪಿಸಿಕೋ" ಎಂದಳು.

ರಫಿ ಮುಂದಿದ್ದವನು ಕಡದಾದ ಪರ್ವತವನ್ನೊಮ್ಮೆ ನೋಡಿದ. ಜಯಂತಿಯನ್ನು ಹೊತ್ತು ಹತ್ತಲು ಸಾಧ್ಯವೇ ಇರಲಿಲ್ಲ.

"ಜಯಂತಿ" ಎಂದ.

"ಹೋಗು ರಫೀ ಹೊಗೆ ಹೆಚ್ಚಾಗ್ತಾ ಇದೆ" ಎಂದಳು. ಹೊಗೆ ಕುಡಿದು ಕುಡಿದು ಅವಳ ಕಣ್ಣುಗಳಲ್ಲಿ ಜೀವದ ಆಸೆಯೇ ಇರಲಿಲ್ಲ.

"ಸಾದ್ಯವೇ ಇಲ್ವ?" ರಫಿ ಕೇಳಿದ.

ನಿತ್ರಾಣದ ಪ್ರಯಾಸದ ನಸುನಗುವೊಂದು ಜಯಂತಿಯ ಮೋರೆಯಲ್ಲಿ ಸುಳಿಯಿತು. ಸುತ್ತ ನೋಡಿ ಏನನ್ನೋ ನಿಶ್ಚಯಿಸಿದವನಂತೆ ರಫಿ ಇಳಿದು ಬಂದು ಅವಳ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ಕುಳಿತ. ಅವನ ಕಣ್ಣುಗಳಲ್ಲಿ ನೀರಾಡುತ್ತಿತ್ತು.

"ಜಯಂತಿ, ಹೆದರಿ ಬೆನ್ನು ತೋರಿಸೋನಾಗಿದ್ದರೆ ಅವತ್ತು ರಾತ್ರೀನೇ ನಿನ್ನ ಕಂಡು ಓಡೋಗ್ತಿದ್ದೆ ಜಯಂತಿ, ಇಂಗ್ಲಿಷ್‌ಗೌಡನ ಜೊತೆ. ನನ್ನ ನಿನ್ನ ಜೊತೆ ರಮೇಶ ಕಳಿಸಿದ್ದು ಯಾಕೆ ಗೊತ್ತಾ. ಕಾಡಲ್ಲಿ ಲೌವ್ ಮಾಡಲಿ ಅಂತ ಅಲ್ಲ. ನಿನ್ನ ನೋಡ್ಕೋಳ್ಳೋದಕ್ಕೆ. ನಾನು ನಿನ್ನ ಬಿಟ್ಟು ಜೀವ ಉಳಿಸಿಕೊಂಡರೆ ನಾಳೆ ಅವರಿಗೆ ಮುಖ ತೋರ್ಸೋ ಹಂಗಿಲ್ಲ. ನೀನು ಮನಸ್ಸು ಮಾಡಬೇಕು. ಇಲ್ಲಾ ಇಬ್ರೂ ಭಸ್ಮ ಆಗಬೇಕು" ಜಯಂತಿಯ ತಲೆ ನೇವರಿಸುತ್ತಾ ರಫಿ ಹೇಳಿದ.

ಜಯಂತಿ ಇಂಥ ತ್ಯಾಗಮಯ ಪ್ರೀತಿ, ಕರ್ತವ್ಯಪ್ರಜ್ಞೆಯನ್ನು ಅವಳ ಜೀವನದಲ್ಲಿ ಕಂಡೇ ಇರಲಿಲ್ಲ. ಇದ್ದಬದ್ದ ಶಕ್ತಿಯನ್ನೆಲ್ಲಾ ಒಗ್ಗೂಡಿಸಿಕೊಂಡು "ಪ್ರಯತ್ನಿಸ್ತಿನಿ ನಡೆ ರಫಿ" ಎಂದಳು. ರಫಿಯ ಕೈಹಿಡಿದು ಮೂರು ಕಾಲಿನಲ್ಲಿ ಇಬ್ಬರೂ ತೆವಳುತ್ತಾ ಜಾರುತ್ತಾ ಮತ್ತೆ ತೆವಳುತ್ತಾ ಪರ್ವತದ ನೆತ್ತಿಗೆ ಹತ್ತಿರ ಹತ್ತಿರಾಗತೊಡಗಿದರು. ಮೇಲೇರಿದಂತೆ ಶುಭ್ರ ಗಾಳಿ ಅವರಿಗೆ ಚೈತನ್ಯ ಕೊಡಲಾರಂಬಿಸಿತು.

ಬೆಟ್ಟದ ನೆತ್ತಿಯ ಹೆಗ್ಗಲ್ಲುಗಳ ಶುಭ್ರ ಹವೆಗೆ ಅವರು ಕಾಲಿಟ್ಟಾಗ ಅವರಿಗೆ ಪುನರ್ಜನ್ಮ ಬಂದಂತೆನ್ನಿಸಿತು. ಆದರೆ ಶಕ್ತಿಯೇ ಇಲ್ಲದೆ ಸಜೀವ ಶವಗಳಂತಾಗಿದ್ದರು.



ಜೋತಾಡುವ ಚಿಂದಿಯ ತೋರಣವಾಗಿದ್ದ ಬಟ್ಟೆಗಳನ್ನು ಕಿತ್ತುಕಿತ್ತು ಎಸೆದರು. ರಫಿಗೀಗ ಲಂಗ ಎತ್ತಿ ಅವಳ ಕಾಲುಗಳನ್ನುನೋಡಬೇಕಾದ ಪ್ರಮೇಯವೇ ಇರಲಿಲ್ಲ. ಏನು ಬೇಕಾದರೂ ಇಬ್ಬರಿಗೂ ದೃಷ್ಟಿ ಲಭ್ಯವಿತ್ತು. ಜಯಂತಿ ರಫಿಯ ಕೈಹಿಡಿದು ಅಸಾಧ್ಯವನ್ನು ಸಾಧಿಸಿದ್ದಳು.

ಬಂಡೆಯಿಂದ ಕೆಳಗಿಣುಕಿದಾಗ ಅವರು ಕಂಡ ದೃಶ್ಯದಿಂದ ಅವರು ಸ್ತಂಭಿಭೂತರಾದರು ಕಾಳ್ಗಿಚ್ಚಿನಿಂದೆದ್ದ ಹೊಗೆಯ ಸ್ನಿಗ್ಧ ಪ್ರವಾಹ ಆಕಾಶಕ್ಕೆ ಹೋಗದೆ ನೆಲವುಟ್ಟದಲ್ಲೆ ಏನೂ ಕಾಣದಂತೆ ಮುಚ್ಚುತ್ತಾ ಮುಂದುವರೆಯತೊಡಗಿತ್ತು. ದೂರದ ಜೇನು ಕಲ್ಲುಗುಡ್ಡ ಅದರ ತಪ್ಪಲಿನಲ್ಲಿದ್ದ ಕೆಸರೂರು ಎಲ್ಲಾ ಆಗಲೇ ಮಸುಕು ಮಸುಕಾಗತೊಡಗಿದ್ದವು.



## ಅಧ್ಯಾಯ ೪೪

“ಲೇ ಯಾರೇ ಅದು ಒಲೆಗೆ ಹಸಿ ಸೌದೆ ಹಾಕಿರೋದು? ಮನೆಯೆಲ್ಲಾ ಹೊಗೆ ಮಾಡ್ತಿದ್ದೀರಲ್ಲಾ. ಊದಿ. ಊದಿ” ಎಂದು ರಾಮಾಚಾರಿ ಮನೆಯೊಳಗೆ ನುಗ್ಗಿದ ದಟ್ಟ ಹೊಗೆ ಕಂಡು ಕೂಗಿದ. ಹೋಗಿ ನೋಡಿದ. ಹೊಗೆ ಬರ್‍ತಿರೊದು ತಮ್ಮ ಮನೆ ಒಲೆಯಿಂದಲ್ಲ ಎಂದು ಮನವರಿಕೆಯಾಯ್ತು ಆ ಹಾರುವಯ್ಯನಿಗೆ. “ಊರೊಳಗೆ ದೊಂಬಿ ಜೋರಾಗಿರ್‍ಬೇಕು, ಏನು ಮನೆಗಳಿಗೆ ಬೆಂಕಿ ಕೊಟ್ಟುಕೋತ ಇದಾರಂತ ಕಾಣ್ತದೆ. ಆಚಾರಿ ಸೂಳೇಮಗನ ಮಾತು ಕೇಳಿ ಆ ಸಾಬನ್ನ ಮತಾಂತರ ಮಾಡ್ತೀವಂತ ಸುದ್ದಿ ಹಬ್ಬಿಸಿದ್ದು ಯಾಕೋ ಸರಿಹೋಗಲಿಲ್ಲ” ಎಂದು ಗೊಣಗಿಕೊಂಡ. ಊರೊಳಗೆ ಹಿಂದೂಗಳಿಗೂ ಸಾಬರಿಗೂ ಹೊಡೆದಾಟ ಶುರುವಾಗಿದೆ ಎಂದು ವಾರ್ತೆ ಬಂದೊಡನೆ ರಾಮಾಚಾರಿ ಮನೆಬಾಗಿಲು ಭದ್ರಪಡಿಸಿಕೊಂಡು ಹೊಕ್ಕೊಂಡಿದ್ದ. ಅವನ ಮನೆಗೇ ಬೆಂಕಿ ಬಿದ್ದಿದೆಯೇನೋ ಎಂದು ಗುಮಾನಿಯಿಂದ ಕಿಟಕಿಯಿಂದ ಹೊರಗೆ ಇಣುಕಿ ನೋಡಿದ ರಾಮಾಚಾರಿಯ ಕಣ್ಣುಗಳಿಗೆ ಹೊರಗೆ ಬೀದಿಯಲ್ಲಿ ಓಡಿಬರುತ್ತಿದ್ದ ತಮ್ಮಣ್ಣಗೌಡ ಕಾಣಿಸಿದ.

ಬಾಗಿಲು ತೆರೆದು ಒಳಗೆ ಬಿಟ್ಟು “ಏನು ತಮ್ಮಣ್ಣಾ? ಬಿತ್ತಾ ಸಾಬರಿಗೆ ಸರಿಯಾಗಿ?” ಎಂದ.

“ಆ ಸೂಳೇಮಕ್ಳಿಗೆ ಇನ್ನು ಯಾವುತ್ತೂ ತಲೆ ಎತ್ತದ ಹಾಗೆ ಕೊಟ್ಟಿದ್ದೀವಿ. ನಮ್ಮಡೆಯೋರಿಗೂ ಭಾಳ ತೊಂದರೆ ಆಗಿದೆ ಮಾರಾಯ್ರ. ಇಬ್ರೂ ಮಕ್ಳುಮರಿ ನೋಡ್ದೆ ಮಾರಾಮಾರಿ ಮಾಡ್ಕೊಂಡಿದಾರೆ! ಏನಾಗ್ತದೋ ನೊಡಬೇಕು. ಅದಿರ್‍ಲಿ ಈಗ ಗೆದ್ದೋರು, ಸೋತೋರು, ಸಾಬ್ರು, ಹಿಂದೂ ಯಾರೂ ಉಳಿಯೋ ಮುಖ ಕಾಣ್ತಿಲ್ಲ. ಆ ಲಂಟಾನದ ಜಿಗ್ಗಿಗೆ ಬೆಂಕಿ ಬಿದ್ದಿದೆ. ಏನು ಹೊಗೇ, ಹೊಗೇ, ಇಂತಾತರಾ ಅಂತಿಲ್ಲ” ಎಂದ ತಮ್ಮಣ್ಣ.

“ಅಯ್ಯಯ್ಯೋ ಯಾರ್‍ಮಾಡಿದ್ರಪ್ಪ ಈ ಕೆಲಸ!ಎಲ್ಲಾ ಬೆಂದು ಬೂದಿಯಾಗ್ತೀವಿ! ಓಡೋಗಿ ಓಡೋಗಿ ನಮ್ಕಡಿಂದ ಬೆಂಕಿ ಕೊಡಿ” ಎಂದ ರಾಮಾಚಾರಿ.

“ಹೇಗೆ ಕೊಡೋದು ರಾಮಾಚಾರೆ! ಅಲ್ಲಿ ನಡೂ ಮಧ್ಯ ಹರಿಜನ್ರ ಕೇರಿ ಬಂತಲ್ಲಾ!”



“ಅದೆಲ್ಲಾ ಈಗ ನೋಡೋ ಕಾಲ ಅಲ್ಲ.”

“ಥೂ ಥೂ. ಹೆಂಗಸ್ರು ಮಕ್ಳುಮರಿ ಎಲ್ಲಾ ಉರ್‍ದೋಗ್ತಾರೆ. ಸಾಯ್ತಾ ಸಾಯ್ತಾ ಆ ಪಾಪ ಯಾಕೆ?”

“ಏ ಗೌಡ. ಆ ಸೂಳೇಮಕ್ಳು ಆವತ್ತು ಸಾಬರ ಜಾತಿಗೆ ಸೇರ್‍ತೀವಂತ ಉಗಿದು ಕಳಿಸಿದ್ದನ್ನ ಮರ್‍ತೆಯೇನೋ. ಹೋಗ್ಲೀ ಈಗ ಸಾಬರ ಜೊತೀಗೇ” ಎಂದು ಭಯ ರೋಷದಿಂದ ಕೂಗಿದ ರಾಮಾಚಾರಿ. ತಮ್ಮಣ್ಣನಿಗೂ ಅದರಿಂದ ಅವನ ಕರುಣೆ ಎಲ್ಲ ಇಂಗಿಹೋಯ್ತು.

“ಅದ್ಸರೀ ಅನ್ನಿ! ನಾವು ಎಷ್ಟೇ ಮಾಡಿದರೂ ಆ ಸೂಳೇಮಕ್ಳು ಉಂಡ ಮನೀಗೆ ಎರಡು ಬಗೆಯೋದು ಬಿಡಲ್ಲ. ನಮ್ಮ ಜೀವ ನಾವು ಉಳಿಸ್ಕೊಳ್ಳೋಣ, ಅವರೇನಾದರೂ ಮಾಡಿಕೊಳ್ಳಲಿ” ಎಂದು ತಮ್ಮಣ್ಣ ಊರ ಹೊರ ವಲಯದ ಲಂಟಾನ ಜಿಗ್ಗಿನ ಕಡೆಗೆ ಓಡಿದ. ಆ ವೇಳೆಗಾಗಲೇ ಕೆಸರೂರನ್ನು ದಟ್ಟ ಹೊಗೆ ಕವಿದೇ ಬಿಟ್ಟಿತ್ತು. ಅನೇಕರು ಕೆಮ್ಮತೊಡಗಿದ್ದರು. ಕೆಲವರು ಏದುಸಿರು ಬಿಡತೊಡಗಿದ್ದರು, ಹಲವರು ಅಸ್ತಮಾದವರಂತೆ ದಮ್ಮು ಎಳೆಯತೊಡಗಿದ್ದರು. ಕೆಲವರು ಕೆಮ್ಮಿ ಕೆಮ್ಮಿ ಆಳ್ಳೆ ಹಿಡಿದುಕೊಂಡಿದ್ದರು. ಅನೇಕರು ಆ ಹೊಗೆಯಲ್ಲೇ ಆದಷ್ಟು ಬೇಗ ತಮ್ಮ ರೋಚ್ಚುಗಳನ್ನೆಲ್ಲಾ ತೀರಿಸಿಕೊಳ್ಳುವ ಸುಸಮಯ ಎಂದು ಕತ್ತಿ ದೊಣ್ಣೆಗಳೊಂದಿಗೆ ಎತ್ತೆತ್ತಲೋ ಓಡುತ್ತಿದ್ದರು. ಶ್ರೀನಿವಾಸರಾಯ ಅರೆಜೀವವಾಗಿ ಬ್ಯಾಂಕ್ ಹೊರಗೆ ರಕ್ತ ಸುರಿಸುತ್ತಾ ಬಿದ್ದಿದ್ದ. ಬ್ಯಾಂಕ್ ಲೂಟಿಯಾಗಿತ್ತು.

ತಮ್ಮಣ್ಣಗೌಡ ಲಂಟಾನಕ್ಕೆ ಊರ ಕಡೆಯಿಂದ ಎಷ್ಟು ಬೆಂಕಿ ಕೊಟ್ಟರೂ ಜ್ವಾಲೆ ಏಳಲೇ ಇಲ್ಲ. ಕವಿಯುತ್ತಿದ್ದ ಹೊಗೆಗೋ ಏನೋ! ಆದರೂ ತಮ್ಮಣ್ಣ ರಾಮಾಚಾರಿಯ ಸಲಹೆಯನ್ನು ಶಿರಸಾವಹಿಸಿ ಪ್ರಯತ್ನಿಸುತ್ತಲೇ ಇದ್ದ. ಅಷ್ಟರಲ್ಲಿ ಹರಿಜನರ ಕೇರಿಯಿಂದ ಒಂದಷ್ಟು ಜನ ಯುವಕರು ದೊಣ್ಣೆ ತಗೊಂಡು ಅವನತ್ತ ನುಗ್ಗಿದರು.

ಹರಿಜನರ ಮಾರ ತಮ್ಮಣ್ಣಗೌಡ ಬೆಂಕಿಕೊಡುತ್ತಿರುವುದನ್ನು ನೋಡಿ ಹರಿಜನ ಕೇರಿಗೆ ಓಡಿಹೋಗಿ “ಗೌಡಗೋಳು ಕೇರೀಗೆ ಬೆಂಕಿ ಕೋಡ್ತಾ ಇದಾರೆ ಕಣ್ರೋ” ಎಂದು ಹೊರಗೆ ಗುಂಪಾಗಿ ನಿಂತು ಸಮಾಲೋಚನೆ ಮಾಡುತ್ತಿದ್ದ. ಕುಲಭಾಂಧವರೆದುರು ಕೂಗಿದ. ಆ ಹರಿಜನರೆಲ್ಲಾ ಎಲ್ಲಿಂದ ಇಷ್ಟೊಂದು ಹೊಗೆ ಬರುತ್ತಿದೆ ಎಂದು ಸಂಶಯಾಕುಲಿತರಾಗಿ ಯೋಚಿಸುತ್ತಿದ್ದರು.

ಮಾರನ ಮಾತುಗಳನ್ನು ಕೇಳಿದಕೂಡಲೇ ಭಯಗ್ರಸ್ತರಾಗಿ ಹೆಂಗಸರು

ಮಕ್ಕಳೆಲ್ಲ ಬಿಡಾರದಿಂದ ಹೊರಬಂದರು. ಆಗಲೇ ಅವರೆಲ್ಲಾ ಹೊಗೆ ಕುಡಿದು ಕೆಮ್ಮಿ ಕೆಮ್ಮಿ ಕಂಗಾಲಾಗಿದ್ದರು. ಕೆಲವರಿಗೆ ಹೊಗೆ ಕುಡಿದು ಕೈಕಾಲುಗಳಲ್ಲೆಲ್ಲಾ ಬಳಲಿಕೆ ಆರಂಭವಾಗಿತ್ತು. "ಸಾಯ್ತಾ ಸಾಯ್ತಾ ಆ ಸೂಳೇಮಕ್ಳು ನಾಕು ಜನಾನ ತರಿದು ಸಾಯೋಣ ಬರ್‍ರಲೇ" ಎಂದು ಒಬ್ಬ ರೋಷದಿಂದ ಕೂಗಿದ. ಒಂದಷ್ಟು ಜನ ಕತ್ತಿ ದೊಣ್ಣೆ ತಗೊಂಡು ಮಾರನ ನೇತೃತ್ವದಲ್ಲಿ ನುಗ್ಗಿದರು.

ಹರಿಜನರ ಗುಂಪನ್ನು ನೋಡಿ ತಮ್ಮಣ್ಣ ದೊಂದಿ ಬಿಸಾಕಿ ಕೆಮ್ಮುತ್ತಾ ಓಡತೊಡಗಿದ. ಹರಿಜನರೂ ಅವನ ಹಿಂದೆಯೇ ಕೆಮ್ಮುತ್ತಾ ರೋಷದಿಂದ ಓಡಿದರು. ಕೊಂಚದೂರು ಓಡುವುದರೊಳಗೆ ತಮ್ಮಣ್ಣ ಆಳ್ಳೆ ಹಿಡಿದುಕೊಂಡು ಕುಸಿದ. ಹರಿಜನರು ಅವನ ಬಳಿಗೆ ಬರುವುದರೊಳಗೆ ಅವನ ಪ್ರತಿ ಕೆಮ್ಮಿಗೂ ಬಾಯಿಂದ ರಕ್ತ ಉಕ್ಕುತ್ತಿತ್ತು. ಕೆಮ್ಮುತ್ತಾ ಕೆಮ್ಮುತ್ತಾ ಹರಿಜನರು ಅವನ ಅಂತ್ಯವನ್ನು ನೋಡಿದರು. ಅವರಿಗೆ ಹಠಾತ್ತಾಗಿ ತಮ್ಮ ಸೇಡಿನ ಅರ್ಥಹೀನತೆ ಅರಿವಾಗತೊಡಗಿತು. ಅವರಲ್ಲೇ ಇಬ್ಬರು ಕೆಮ್ಮುತ್ತಾ ಅಳ್ಳೆ ಹಿಡಿದು ಕೊಂಡು ಕುಳಿತರು. ಎಲ್ಲರಲ್ಲೂ ಒಂದು ಬಗೆಯ ಶಕ್ತಿಹೀನತೆ, ನಿದ್ದೆಯ ಜೋಂಪಿನಿಂಥ ಅಮಲು!

ಹೊರಗಡೆ ಒಬ್ಬರನ್ನೊಬ್ಬರು ಕೊಲ್ಲಲು ಹೆಣಗುತ್ತಿದ್ದರೆ ಆಸ್ಪತ್ರೆಯಲ್ಲಿ ಡಾಕ್ಟರು ಪಾಟೀಲರನ್ನು ಉಳಿಸಲು ಹೆಣಗುತ್ತಿದ್ದರು. ಹೊಟ್ಟೆಯೊಳಗೆ ಹೋಗಿದ್ದ ಒಂದು ಬೆಣಚುಕಲ್ಲನ್ನು ತೆಗೆಯಲು ಆಪರೇಶನ್ ಮಾಡಿದ್ದರು. ಪಾಟೀಲರು ಕೆಮ್ಮಿದರೆ ಹೊಟ್ಟೆಯೊಳಗೆ ಹಾಕಿದ ಹೊಲಿಗೆಗಳು ಬಿಚ್ಚಿಕೊಂಡು ಆಂತರಿಕೆ ರಕ್ತಸ್ರಾವವಾಗಿ ಸಾಯುವುದು ಖಚಿತವಿತ್ತು. ಅದಕ್ಕಾಗಿ ಡಾಕ್ಟರು ತಾವೇ ಕೆಮ್ಮುತ್ತಾ ಅವರಿಗೆ ಆಕ್ಸಿಜನ್ ಕೊಡುತ್ತಿದ್ದರು. ಕವಿದ ಹೊಗೆ ದಟ್ಟೈಸುತ್ತಾ ಹೋಯ್ತು. ಹೊರಗಡೆ ರಾಮಚಂದ್ರ, ಅವನ ಶಿಷ್ಯರು, ಅಂಗಾಡಿ, ಹೆಗ್ಡೆ, ಸಿದ್ದಪ್ಪ, ಎಲ್ಲಾ ಕಾಯುತ್ತಾ ಕೆಮ್ಮುತ್ತಾ ಏನುಮಾಡುವುದೆಂದು ತೋಚದೆ ಕುಳಿತ್ತಿದ್ದಾಗ ಒಳಗೆ ಪೆಥಡಿನ್ ನಿದ್ದೆಯಲ್ಲೇ ಪಾಟೀಲರು ಕೆಮ್ಮತೊಡಗಿದ್ದು ಕೇಳಿಸಿತು. ಕೆಮ್ಮುತ್ತಾ ಡಾಕ್ಟರು ಎಮರ್ಜೆನ್ಸಿ ವಾರ್ಡಿನ ಬಾಗಿಲು ತೆರೆದು ಹೊರಬಂದು "ಐಯಾಮ್ ಸಾರಿ" ಎಂದರು. ಹೊಗೆಯ ದಟ್ಟಣೆ ಅಲೆ ಅಲೆಯಾಗಿ ನುಗ್ಗತೊಡಗಿತು.

ಆರುವರ್ಷದ ಹಿಂದಿನಿಂದ ನಿರಂತರವಾಗಿ ಆತ್ಮ ಮತ್ತು ಪರಿಸರಗಳೆರಡನ್ನೂ ಕಲುಷಿತಗೊಳಿಸಿಕೊಳ್ಳುತ್ತಾ ಬಂದ ಸಂಸ್ಕೃತಿಗೆ ಅದರ ಪರಿಣಾ ತಟ್ಟಲಾರಂಭಿಸಿತ್ತು. ಎಂಥ ಬಿರುಬೇಸಿಗೆಯಲ್ಲೂ ಶುಬ್ರ ತಂಗಾಳಿ ಸೂಸುತ್ತಿದ್ದ ವಿಪಿನ ಈಗ ಲಂಟಾನದ ಹಸಿ ಎಲೆಗಳು ಸೀಯುವ ಭೀಕರ ಕಾರ್ಮೋಡ ಒಂದನ್ನು ಉಗಿಯತೊಗಿತ್ತು.



ಊರಿನ ಜನಕ್ಕೆ ತಾವು ಮಾಡಿದ ತಪ್ಪು ಅರಿವಾಗುವುದರೊಳಗೇ ಹೊಗೆಯ ಗುಂಗಿನಲ್ಲಿ ಭ್ರಾಂತರಾಗಿ ಕೆಮ್ಮಿ ಕೆಮ್ಮಿ ಸುಟ್ಟು ಬೂದಿಯಾಗುವುದಕ್ಕೆ ಮೊದಲೆ ಅನೇಕರು ಅಸುನೀಗಿದರು. ಉಳಿದವರು ಮೃತಾವಸ್ಥೆಗೆ ಇಳಿದರು.

ರಫಿಗೂ ಜಯಂತಿಗೂ ಏನೂ ಕಣ್ಣಿಗೆ ಕಾಣುತ್ತಿರಲಿಲ್ಲ. ಮೇಲೆ ನಡೆದು ಹೋಗಬಹುದೆನ್ನುವಷ್ಟು ಸ್ನಿಗ್ಧ ಹೊಗೆಯ ಸಮುದ್ರ ಒಂದು ಜೇನು ಕಲ್ಲು ಗುಡ್ಡದ ನೆತ್ತಿಯೊಂದನ್ನು ಮಾತ್ರ ಬಿಟ್ಟು ಮುಚ್ಚಿಕೊಂಡಿತ್ತು. ಕೆಳಗೆ ಕಾಳ್ಗಿಚ್ಚಿನ ಕಾಳರುದ್ರನರ್ತನ. ಭರ್‍ರ್ರೋ ಎಂದು ಉರಿಯುವ ಕಾಳ್ಗಿಚ್ಚಿನ ಬೆಂಕಿಯ ಕೈಗಳು ಹೊಗೆಯಲ್ಲೇ ನೆಗೆನೆಗೆದು ಹಾರುತ್ತಿದ್ದವು. ಉರಿಯುತ್ತಿರುವಲ್ಲಿ ಬಿಸಿಗಾಳಿಯ ರಭಸಕ್ಕೆ ಕಿಡಿಗಳೂ ಹತ್ತಿಕೊಂಡ ಎಲೆಗಳೂ ಭರ್‍ರನೆ ತಿರುಗುತ್ತಾ ಗಾವುದ ಗಾವುದ ಹಾರಿ ಲಂಟಾನದೊಂದಿಗೆ ಬೀಳುತ್ತಿದ್ದವು. ಅಲ್ಲಿ ಶುರುವಾಗುತ್ತಿತ್ತು ಹೊಗೆಯ ವಿಕಟಾಟ್ಟಹಾಸ. ಹೊಗೆ ತೀರಾ ಸ್ನಿಗ್ಧವಾಗಿ ಹಾಲಿನಷ್ಟು ಬೆಳ್ಳಗಿನ ಹೊನಲೊಂದು ಏಳುವ ವೇಳೆದ ಅದರ ಮೂಲದಲ್ಲಿ ಉತ್ಪತ್ತಿಯಾಗುವ ಆಸ್ಫೋಟಕ ಅನಿಲಕ್ಕೆ ಮೊದಲೇ ಉರಿಯುತ್ತಿದ್ದ ಜ್ವಾಲೆಗಳಿಂದ ಬೆಂಕಿಯ ಚೆಂಡೊಂದು ಹಾರಿ ಕುಳಿತು ಅಲ್ಲಿ ಸಿಡಿದಂತೆ ಹತ್ತಿಕೊಳ್ಳುತ್ತಿತ್ತು. ಸರಿ ಅಲ್ಲಿ ಏಳುವ ಬೆಂಕಿಯ ರೌಸಿಗೆ ಹಾರಿದ ಎಲೆಗಳು ಇನ್ನು ಹಲವಾರು ಕಡೆ ಹೊಗೆ ಎಬ್ಬಿಸಿ ಆಸ್ಫೋಟಿಸುತ್ತಿದ್ದವು. ಕಾಳ್ಗಿಚ್ಚು ಒಂದು ಕಡೆಯಿಂದ ಮುಂದುವರೆಯದೆ ಅಲ್ಲಿ ಇಲ್ಲಿ ಎಲ್ಲೆಲ್ಲೋ ಹತ್ತಿ ಹತ್ತಿ ಕೆನ್ನಾಲಿಗೆಯ ಜ್ವಾಲೆಗಳು ಕುಣಿಯತೊಡಗುತಿದ್ದವು. ಬೆಂಕಿಯ ಪ್ರಳಯ ನರ್ತನದ ಪಾದ ಇಡೀ ಲಂಟಾನದ ಕಾಡಿನ ವೇದಿಕೆಯ ಮೆಲೆ ಧಗ ಧಗ ಧಗ ಎಂದು ನರ್ತಿಸಲಾರಂಭಿಸಿತು.

ಐದಾರು ಕಾಡೆಮ್ಮೆಗಳು ಹೊಗೆಗೆ ಸಿಕ್ಕು ಜರ್ಝರಿತವಾಗಿದ್ದರೂ ಯಮ ಸಾಹಸದಿಂದ ಕೋಡುಗಲ್ಲಿನ ನೆತ್ತಿಯನ್ನು ಹತ್ತಲಾರಂಭಿಸಿದವು. ಅದರಲ್ಲೊಂದು ನಿತ್ರಾಣವಾಗಿ ಕುಸಿದು ದಡದಡ ಉರುಳುತ್ತಾ ಹೊಗೆಯ ಸಮುದ್ರದಲ್ಲಿ ಮಾಯವಾಯ್ತು. ಮಿಕ್ಕವು ಹೇಗೋ ಹತ್ತಿ ಬಂದು ನೆತ್ತಿಯ ಮೂಲೆಯಲ್ಲಿ ಏದುಸಿರು ಬಿಡುತ್ತಾ ಜಾಗ ಮಾಡಿಕೊಂಡು ನಿಂತವು.

ಹಸಿ ಲಂಟಾನದ ಸುಟ್ಟ ಎಲೆಯ ಹೊಗೆಗಿರುವ ಮಾದಕ ಗುಣವೋ ಏನೋ ಸುಲೇಮಾನ್ ಬೇರಿ ತನ್ನ ಸಾಕ್ಷಿಗಳು ಸಿಕ್ಕದಂತೆ ಬೆಂಕಿ ಕೊಡಲುಕಳಿಸಿದ ಇಬ್ಬರಲ್ಲಿ ಒಬ್ಬ ಹೊಗೆ ತಮ್ಮ ಸುತ್ತ ಬಳಸಿ ಕವಿಯತೊಡಗಿದೊಡನೆ ದಿಗ್ಮೂಢನಾದ. ಹತ್ತಿಕೊಂಡು ಹೊಗೆ ಇಲ್ಲದೆ ಉರಿಯುತ್ತಿರುವ ಜಾಗವೆ ಶುಭ್ರವಾದ ಹೊರದಾರಿಯಂತೆ ಕಂಡು ಅವನು ಬೆಂಕಿಯೊಳಗೆ ನೇರವಾಗಿ ಪ್ರಯಾಣ

ಮಾಡಿದ. ಇನ್ನೊಬ್ಬ ಮೊದಲಲ್ಲೇ, ನಾಲ್ಕಾರು ಕಡೆ ಬೆಂಕಿ ಕೊಟ್ಟು ಸುಧಾರಿಸಿಕೊಳ್ಳುತ್ತಿರಬೇಕಾದರೆ ಹೊಗೆಯಿಂದ ರೊಚ್ಚಿಗೆದ್ದ ಹೆಜ್ಜೇನುಗಳ ದಾಳಿಗೆ ಸಿಕ್ಕಿಕೊಂಡ. ಲಂಟಾನದ ತೊಡಕಿನಲ್ಲಿ ಓಡಲಾರದ ಅವನಿಗೆ ಹೆಜ್ಜೇನುಗಳು ಮನಃತೃಪ್ತಿಯಗುವವರೆಗೂ ಕಚ್ಚಿ ಅವನು ಪ್ರಜ್ಞಾಹೀನನಾಗಿ ಬೆಂಕಿಗೆ ಸಿಕ್ಕಿಕೊಂಡ.

"ನೋಡು ಜೇನುಕಲ್ಲುಗುಡ್ಡದ ತುದಿ ಚೆನ್ನಾಗಿ ಕಾಣ್ತಿದೆ. ಕೆಸರೂರಿನ ಜನ ಈಗಲೂ ಎಲ್ಲಾ ಅಲ್ಲಿಗೆ ಓಡಿದರೆ ಬೆಂಕಿಯಿಂದ ತಪ್ಪಿಸಿಕೊಬಹುದು" ಎಂದಳು ಜಯಂತಿ.

"ನಮಗೆ ಕಾಣ್ತಿದೆ! ಅವರಿಗೆ ಕಾಣ್ತದ? ಈ ಹೊಗೇಲಿ!" ಎಂದ ರಫಿ.